ನವಕರ್ನಾಟಕ ಪ್ರಕಾಶನದ ೦೦೦೦ನೇ ಪ್ರಕಟಣೆ

# ಸಾಧಾರಣ ಜನ,
# ಅಸಾಧಾರಣ ಶಿಕ್ಷಕರು

## ಭಾರತದ ನಿಜವಾದ ಧೀರರು

ಎಸ್. ಗಿರಿಧರ್

Azim Premji University

ನವಕರ್ನಾಟಕ ಪ್ರಕಾಶನ

**SAADHAARANA JANA, ASAADHAARANA SHIKSHAKARU**
**BHARATADA NIJAVAADA DHEERARU** (Kannada)
*ORDINARY PEOPLE, EXTRAORDINARY TEACHERS -*
*THE HEROES OF REAL INDIA* by S. Giridhar

First Edition : 2021    Pages : 240    Price : ₹ 250
Paper :
232 pages single colour printing on 70 gsm NS Maplitho 18.6 Kg
8 pages multicolour printing on 120 gsm Art Paper 31.9 Kg (1/8 Demy Size)

ಮೊದಲ ಮುದ್ರಣ : 2021

ಪ್ರತಿಗಳ ಸಂಖ್ಯೆ : 3500



**ಬೆಲೆ : ₹ 250**

ಮುಖಪುಟ ಮತ್ತು ರೇಖಾಚಿತ್ರಗಳು : ಅದ್ವೈತ್ ಪವಾರ್

ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – 560 001
ದೂರವಾಣಿ : 080–22161900 / 22161901 / 22161902

ಸಹಯೋಗ
**ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿ**
ಪಿ.ಇ.ಎಸ್. ಕ್ಯಾಂಪಸ್, ಎಲೆಕ್ಟ್ರಾನಿಕ್ ಸಿಟಿ
ಬೆಂಗಳೂರು – 560 100

ಮುದ್ರಕರು : ಪ್ರಿಂಟೆಕ್ ಪ್ರಿಂಟರ್ಸ್, ಬೆಂಗಳೂರು – 560 079

**0110200000**    **ISBN 978-93-89308-81-5**

Published by Navakarnataka Publications Private Limited, Embassy Centre No. 11, Crescent Road, Bengaluru - 560 001. Email : navakarnataka@gmail.com in collaboration with Azim Premji University, PES Campus, Electronic City Hosur Road, Bengaluru - 560 100. Website : www.azimpremjiuniversity.edu.in

# ಸಾಧಾರಣ ಜನ, ಅಸಾಧಾರಣ ಶಿಕ್ಷಕರು

## ಲೇಖಕರ ಪರಿಚಯ

ಎಸ್. ಗಿರಿಧರ್ ಅವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ಮುಖ್ಯ ಕಾರ್ಯಾಚರಣೆ ಅಧಿಕಾರಿ (Chief Operating Officer) ಆಗಿರುತ್ತಾರೆ. ಅವರು ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಆರಂಭಿಕ ಸದಸ್ಯರಲ್ಲಿ ಒಬ್ಬರು. ವ್ಯವಹಾರ ನಿರ್ವಹಣೆಯ ಕ್ಷೇತ್ರದಲ್ಲಿ ಎರಡು ದಶಕಗಳಿಗೂ ಹೆಚ್ಚು ಕಾಲದ ಸೇವೆಯ ಬಳಿಕ, ಹದಿನೆಂಟು ವರ್ಷಗಳ ಹಿಂದೆ ಗಿರಿಧರ್ ಅವರು ಫೌಂಡೇಷನ್ ಅನ್ನು ಸೇರಿದರು. ಫೌಂಡೇಷನ್ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದಾಗ ಅವರು ಅದರ ಮೊದಲ ಮುಖ್ಯ ಕಾರ್ಯಾಚರಣೆ ಅಧಿಕಾರಿ ಹಾಗೂ ರಿಜಿಸ್ಟ್ರಾರ್ ಹುದ್ದೆಗಳನ್ನು ವಹಿಸಿಕೊಂಡರು. ಈಗ್ಗೆ ಅನೇಕ ವರ್ಷಗಳಿಂದ ತಾವು ಗಳಿಸಿದ ಸಮೃದ್ಧ ಅನುಭವವನ್ನೂ ಒಳನೋಟವನ್ನೂ ಬಳಸಿಕೊಂಡು ನಿಯತವಾಗಿ ಬರೆಯುತ್ತಿದ್ದಾರೆ. ಗಿರಿಧರ್ ಅವರಿಗೆ ತೀವ್ರ ಆಸಕ್ತಿ ಇರುವ ಇನ್ನೊಂದು ವಿಷಯವೆಂದರೆ ಕ್ರಿಕೆಟ್. ಕ್ರೀಡೆಯ ವಿಷಯದಲ್ಲಿ ಅವರು ಸಹ–ಲೇಖಕರಾಗಿರುವ ಎರಡು ಪುಸ್ತಕಗಳು 'ಮಿಡ್‌ವಿಕೆಟ್ ಟೇಲ್ಸ್: ಫ್ರಂ ಟ್ರಂಪರ್ ಟು ತೆಂಡೂಲ್ಕರ್' ಹಾಗೂ 'ಮುಂಬೈ ಟು ಡರ್ಬನ್: ಇಂಡಿಯಾಸ್ ಗ್ರೇಟೆಸ್ಟ್ ಟೆಸ್ಟ್ಸ್' ಓದುಗರಿಂದ ಮೆಚ್ಚುಗೆ ಪಡೆದಿವೆ.

# ಪರಿವಿಡಿ

# ಮುನ್ನುಡಿ

ಅಜೀಂ ಪ್ರೇಮ್‌ಜಿ ಫೌಂಡೇಷನ್ ಪ್ರಾರಂಭವಾದ ಹೊಸದರಲ್ಲೇ 2002ರಲ್ಲಿ ನಾನು ಅಲ್ಲಿ ಸೇರಿಕೊಂಡೆ. ಆಗ ಅದು ಒಂದು ಪುಟ್ಟ ಸಂಸ್ಥೆಯಾಗಿತ್ತು. ಆಗ ಮಂಡ್ಯ ಜಿಲ್ಲೆಯ ಮದ್ದೂರು ಬ್ಲಾಕಿನ ಹೆಮ್ಮನಹಳ್ಳಿಯೆಂಬ ಊರಿಗೆ ನನ್ನ ಪ್ರಾರಂಭದ ಕ್ಷೇತ್ರ ಭೇಟಿಗಾಗಿ ಹೋಗಿದ್ದಾಗ ತಂದಿದ್ದ ಮಧ್ಯಮಗಾತ್ರದ ಕಲ್ಲಂಗಡಿ ಹಣ್ಣು ಕಛೇರಿಯ ಎಲ್ಲರಿಗೂ ಹಂಚಲು ಸಾಕಾಗುವಷ್ಟಿತ್ತು. 2010ರವರೆಗೂ ಅಂದರೆ ಫೌಂಡೇಷನ್ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯವನ್ನು ಸ್ಥಾಪಿಸುವವರೆಗೂ ನಾನು ಕ್ಷೇತ್ರ ಕಾರ್ಯದಲ್ಲಿ ಬಿಡುವಿಲ್ಲದೆ ನಿರತನಾಗಿದ್ದೆ. ನಮ್ಮ ಕಾರ್ಯಕ್ಷೇತ್ರ ಕರ್ನಾಟಕ, ರಾಜಸ್ಥಾನ, ಗುಜರಾತ್, ಉತ್ತರಾಖಂಡ್ ಮತ್ತು ಮಧ್ಯಪ್ರದೇಶ ರಾಜ್ಯಗಳ ಹನ್ನೆರಡು ಜಿಲ್ಲೆಗಳಲ್ಲಿ ವ್ಯಾಪಿಸಿತ್ತು. ಈ ರಾಜ್ಯಗಳ ಶಿಕ್ಷಣ ಇಲಾಖೆಗಳೊಂದಿಗೆ ಸಹಭಾಗಿತ್ವದಿಂದ ಅಲ್ಲಿನ ಸರ್ಕಾರಿ ಶಾಲೆಗಳ ಗುಣಮಟ್ಟವನ್ನು ಸುಧಾರಿಸಲು ಯತ್ನಿಸಬೇಕೆಂಬುದು ನಮ್ಮ ಉದ್ದೇಶವಾಗಿತ್ತು. ಈ ಕ್ಷೇತ್ರದ ಅನುಭವದ ಹಿನ್ನೆಲೆಯಲ್ಲಿಯೇ ನಾನು ವಿಶ್ವವಿದ್ಯಾಲಯ ಸ್ಥಾಪನೆಯಾದಾಗ ಅದನ್ನು ಸೇರಿಕೊಂಡೆ.

ಸರ್ಕಾರಿ ಶಾಲೆಗಳ ಜತೆಗಿನ ಫೌಂಡೇಷನ್‌ನ ಕೆಲಸ 2011ರ ನಂತರ ದೊಡ್ಡ ಪ್ರಮಾಣದಲ್ಲಿ ವಿಸ್ತಾರಗೊಂಡಿತು. 2017ರ ಹೊತ್ತಿಗೆ ಫೌಂಡೇಷನ್ ನಲವತ್ತಾರು ಜಿಲ್ಲೆಗಳಲ್ಲಿ 'ಕ್ಷೇತ್ರ ಸಂಸ್ಥೆಗಳನ್ನು' ಸ್ಥಾಪಿಸಿತು. ಸುಮಾರು ಒಂದು ಸಾವಿರದ ಐನೂರು ಜನರ ತಂಡವು ಸಾರ್ವಜನಿಕ (ಸರ್ಕಾರಿ) ಶಾಲೆಗಳ ಶಿಕ್ಷಕರು ಮತ್ತು ಶೈಕ್ಷಣಿಕ ಅಧಿಕಾರಿಗಳೊಂದಿಗೆ ನಿಕಟವಾದ ಸಂಬಂಧವನ್ನು ಬೆಳೆಸಿಕೊಂಡು ಅವರ ಸಾಮರ್ಥ್ಯವನ್ನು ಅಭಿವೃದ್ಧಿಪಡಿಸಲು ಬೆಂಬಲಿಸುತ್ತ ತಮ್ಮ ಕೊಡುಗೆ ನೀಡುತ್ತಿದ್ದಾರೆ. ಈ ಜಿಲ್ಲಾ ಮಟ್ಟದ ಕ್ಷೇತ್ರ ಸಂಸ್ಥೆಗಳಲ್ಲಿನ ಸಂಪನ್ಮೂಲ ವ್ಯಕ್ತಿಗಳು ಶಿಕ್ಷಣ ಇಲಾಖೆಯೊಂದಿಗಿನ ಸಹಯೋಗದಲ್ಲಿ ಸಾಮರ್ಥ್ಯ ನಿರ್ಮಾಣದ ಕಾರ್ಯಾಗಾರಗಳನ್ನು ಮತ್ತು ಬಹು ವಿಧವಾದ ಇತರ ಮಾರ್ಗಗಳನ್ನು ಬಳಸಿಕೊಂಡು ಪಠ್ಯ–ಸಂಬಂಧಿ ವಿಷಯಗಳು, ಬೋಧನಾ ವಿಧಾನ ಹಾಗೂ ಶಿಕ್ಷಣದ ವಿಶಾಲ ದೃಷ್ಟಿಕೋನಗಳನ್ನು ಒಳಗೊಂಡಂತೆ ಶಿಕ್ಷಕರು ಮತ್ತು ಇತರರೊಂದಿಗೆ ತೊಡಗಿಸಿಕೊಳ್ಳುತ್ತಾರೆ. ಕೆಲವು ವರ್ಷಗಳಲ್ಲಿ ಈ ಕ್ಷೇತ್ರ ಸಂಸ್ಥೆಗಳು ಶಿಕ್ಷಕರ ಸಮುದಾಯಗಳನ್ನು ನಿರ್ಮಾಣ ಮಾಡಲು ಸಮರ್ಥವಾದವು ಹಾಗೂ "ಸ್ವಯಂ ಪ್ರೇರಿತ ಶಿಕ್ಷಕರ ಚಾವಡಿ" (Voluntary Teacher Forums-VTFs- ಪದಸೂಚಿಯನ್ನು ನೋಡಿ)ಗಳೆಂದು ಕರೆಯಲಾಗುವ ಗುಂಪುಗಳನ್ನು ರಚಿಸಿಕೊಳ್ಳುವಂತೆ ಶಿಕ್ಷಕರನ್ನು ಪ್ರೇರೇಪಿಸಿದ್ದೂ ಅಲ್ಲದೇ ಹಲವು ವಿಷಯಾಧಾರಿತ ವಾಟ್ಸ್ಯಾಪ್ ಗುಂಪುಗಳು ಕಾರ್ಯೋನ್ಮುಖವಾಗುವಂತೆ ನೆರವಾದವು. ಶಿಕ್ಷಕರ ಕಲಿಕೆಗೆ

ಹೆಚ್ಚಿನ ಮಟ್ಟದಲ್ಲಿ ನೆರವಾಗಲು ಈ ಕ್ಷೇತ್ರ ಸಂಸ್ಥೆಗಳು ಶಿಕ್ಷಕರ ಕಲಿಕೆಯ ಕೇಂದ್ರಗಳನ್ನು ಸ್ಥಾಪಿಸಿದವು (Teacher's Learning Centers- TLCs). ಈ ಕೇಂದ್ರಗಳಲ್ಲಿ ಶಿಕ್ಷಕರು ಕಲಿಕೆಯ ಸಂಪನ್ಮೂಲಗಳನ್ನು ತಮ್ಮಲ್ಲಿ ಹಂಚಿಕೊಳ್ಳುತ್ತಿದ್ದರು. ಕಳೆದ ಕೆಲವು ವರ್ಷಗಳಲ್ಲಿ ಈ ಅನೇಕ ಜಿಲ್ಲಾ ಸಂಸ್ಥೆಗಳನ್ನು ಸ್ಥಾಪಿಸಲಾಯಿತಾದರೂ, ಕರ್ನಾಟಕ, ಉತ್ತರಾಖಂಡ್ ಮತ್ತು ರಾಜಸ್ಥಾನಗಳಲ್ಲಿನ ಸುಮಾರು ಏಳೆಂಟು ಸಂಸ್ಥೆಗಳು ಇಂದಿಗೆ ಸುಮಾರು ಹದಿನಾಲ್ಕು ವರ್ಷಗಳಿಂದಲೇ ಕಾರ್ಯನಿರ್ವಹಿಸುತ್ತಿವೆ. ಫೌಂಡೇಷನ್ ತನ್ನ ಕಾರ್ಯಗಳ ಪರಿಣಾಮವನ್ನು ಮೌಲ್ಯಮಾಪನ ಮಾಡಲು ವ್ಯವಸ್ಥಿತವಾದ ಏರ್ಪಾಟುಗಳನ್ನು ಹೊಂದಿದೆ. ಆದರೆ ಇದು ಬಹುತೇಕ ಪರಿಮಾಣಾತ್ಮಕ ಮಾರ್ಗವನ್ನು ಅನುಸರಿಸುತ್ತಿದೆ. ಶಾಲೆಯ ಒಳಗಿನ ಮಾನವೀಯ ಮಿಡಿತಗಳು, ಚಕಿತಗೊಳಿಸುವ ಸೂಕ್ಷ್ಮ ವಿವರಗಳು ಹಾಗೂ ದೈನಂದಿನ ಆಗುಹೋಗುಗಳ ಲಯ ದಾಖಲಾಗುವುದಿಲ್ಲ. ಇವೆಲ್ಲವನ್ನೂ ಗಣನೆಗೆ ತೆಗೆದುಕೊಳ್ಳಲು ಫೌಂಡೇಷನ್ ಹಲವು ಕಾಲ ಕಾರ್ಯ ನಿರ್ವಹಿಸಿರುವ ಐದು ಜಿಲ್ಲೆಗಳಲ್ಲಿನ ಒಳ್ಳೆಯ ಶಾಲೆಗಳನ್ನು ಗುರುತಿಸಿ ಅವುಗಳ ಗುಣಾತ್ಮಕ ಅಧ್ಯಯನವನ್ನು ಕೈಗೆತ್ತಿಕೊಂಡಿತು. ಶಾಲಾ ಸಂಸ್ಕೃತಿಯನ್ನು ಬದಲಿಸಲು ಕೊಡುಗೆ ನೀಡುವ ಪ್ರಕ್ರಿಯೆಗಳು ಮತ್ತು ಆಚರಣೆಗಳು, ಆ ಶಾಲೆಗಳಲ್ಲಿನ ಬೋಧನಾ ಕ್ರಮದ ಗುಣಮಟ್ಟ, ಶಿಕ್ಷಕ–ವಿದ್ಯಾರ್ಥಿಗಳ ನಡುವಣ ಪರಸ್ಪರ ಸಂಬಂಧ, ಶಿಕ್ಷಕರ ನಂಬಿಕೆಗಳು ಮತ್ತು ಆಚರಣೆಗಳು; ಒಂದು ಶಾಲೆಯನ್ನು ಪರಿವರ್ತಿಸುವಲ್ಲಿನ ಅಲ್ಲಿಯ ನಾಯಕತ್ವದ ಪಾತ್ರ ಇವುಗಳೆಲ್ಲವನ್ನೂ ತಪ್ಪದೆ ಗಣನೆಗೆ ತೆಗೆದುಕೊಂಡು ಆ ಶಾಲೆಗಳಿಗೆ ಹೋಗಿ ಎಲ್ಲವನ್ನೂ ಹತ್ತಿರದಿಂದ ಗಮನಿಸುವುದು ಅತಿ ಅವಶ್ಯಕವಾಗಿದ್ದಿತು. ಇವುಗಳ ಕುರಿತಾದ ಒಳನೋಟಗಳನ್ನು ಪಡೆದುಕೊಳ್ಳಲು ಆ ಶಾಲೆಗಳಿಗೆ ಹೋಗಿ ಈ ಕಾರ್ಯವನ್ನು ಕೈಗೆತ್ತಿಕೊಳ್ಳಲು ಸ್ವಯಂ ಪ್ರೇರಣೆಯಿಂದ ನಾನು ಮುಂದಾದೆ. ಈ ಹಿಂದೆ ಫೌಂಡೇಷನ್‌ನ ಕಾರ್ಯಕ್ಷೇತ್ರದಲ್ಲಿ ನಿರತನಾಗಿದ್ದರೂ ವಿಶ್ವವಿದ್ಯಾಲಯವನ್ನು ಸೇರಿದ ಮೇಲೆ ಕ್ಷೇತ್ರ ಕಾರ್ಯಾಚರಣೆಯಲ್ಲಿ ನನ್ನನ್ನು ತೊಡಗಿಸಿಕೊಂಡಿರಲಿಲ್ಲ. ಹಿಂದಿನ ವರ್ಷಗಳಲ್ಲಿ ಗಳಿಸಿದ ವಾಸ್ತವದ ಕುರಿತಾದ ತಿಳಿವಳಿಕೆ ನನ್ನಲ್ಲಿದ್ದರೂ ಸಹ ಇಷ್ಟು ಕಾಲ ಅದರಿಂದ ಸ್ವಲ್ಪ ಅಂತರವನ್ನು ಕಾಯ್ದುಕೊಂಡಿದ್ದೆ. ಇದರಿಂದಾಗಿ, ನನ್ನ "ಹಿಂದಿನ ಮತ್ತು ಈಗಿನ" ನೋಟಗಳೆರಡರ ಲಾಭಗಳೂ ನನಗೆ ಸಿಕ್ಕಿವೆ.

ಗುಣಮಟ್ಟದ ಅಧ್ಯಯನವನ್ನು ಕೈಗೊಳ್ಳಲು ಸಾಂಪ್ರದಾಯಿಕವಾಗಿ ಸಣ್ಣ ಮಾದರಿಗಳನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಆದರೆ ನಾನು ಪ್ರತಿಯೊಂದು ಜಿಲ್ಲೆಯಲ್ಲೂ ಗಣನೀಯ ಸಂಖ್ಯೆಯ, ಸುಮಾರು ಇಪ್ಪತ್ತೈದು ಶಾಲೆಗಳನ್ನು ಆರಿಸಿಕೊಳ್ಳಲು ಉತ್ಸುಕನಾಗಿದ್ದೆ. ಒಂದು ಜಿಲ್ಲೆಯಲ್ಲಿ ಎಲ್ಲ ಬ್ಲಾಕ್‌ಗಳಿಂದಲೂ ಕೆಲವು ಶಾಲೆಗಳನ್ನು ಆರಿಸಿಕೊಳ್ಳಲು ತೀರ್ಮಾನಿಸಿದೆ. ಯಾದಗಿರಿ ಜಿಲ್ಲೆಯೊಂದು ಮಾತ್ರ ಈ ತೀರ್ಮಾನಕ್ಕೆ ಅಪವಾದವಾಗಿತ್ತು. ಅಲ್ಲಿ ಫೌಂಡೇಷನ್‌ನ ಕಾರ್ಯವನ್ನು ಸುರಪುರ ಬ್ಲಾಕ್‌ನ ಸುತ್ತಮುತ್ತ ಕೇಂದ್ರೀಕರಿಸಲಾಗಿತ್ತು. ಒಳ್ಳೆಯ ಶಾಲೆಗಳು, ಒಳ್ಳೆಯ ಶಿಕ್ಷಕರು ಅಥವಾ ಒಳ್ಳೆಯ ಮುಖ್ಯೋಪಾಧ್ಯಾಯರು ಎಂದು ತಾವು ಪರಿಗಣಿಸಿದ ಪಟ್ಟಿಯನ್ನು, ಬ್ಲಾಕ್‌ಗೆ ಸುಮಾರು ಮೂವತ್ತರಂತೆ ಆಯ್ಕೆ ಮಾಡಿ ಕಳಿಸುವಂತೆ ನಮ್ಮ ಕ್ಷೇತ್ರ ಸಂಸ್ಥೆಗಳ

ಸಹೋದ್ಯೋಗಿಗಳನ್ನು ಕೇಳಿಕೊಂಡೆ. ಈ ಆರುನೂರು ಶಾಲೆಗಳ ಪಟ್ಟಿಯಿಂದ ನೂರಾಹತ್ತು ಶಾಲೆಗಳನ್ನು ಆರಿಸಿಕೊಂಡೆ. 2017ರ ಮಾರ್ಚ್ ತಿಂಗಳಿನಿಂದ 2018ರ ನವೆಂಬರ್ ತಿಂಗಳವರೆಗೂ ಇಪ್ಪತ್ತೊಂದು ತಿಂಗಳ ಕಾಲ ಉತ್ತರಾಖಂಡ್ ರಾಜ್ಯದ ಉತ್ತರಕಾಶಿ, ಉಧಮ್‌ಸಿಂಗ್‌ನಗರ, ರಾಜಸ್ಥಾನದ ಸಿರೋಹಿ ಮತ್ತು ಟೋಂಕ್ ಹಾಗೂ ಕರ್ನಾಟಕ ರಾಜ್ಯದ ಯಾದಗಿರಿ ಜಿಲ್ಲೆಗಳಲ್ಲಿ ನನ್ನ ಈ ಶಾಲಾಯಾತ್ರೆ ನಡೆಯಿತು.

ಒಂದೊಂದು ಬ್ಲಾಕ್‌ನಲ್ಲೂ ನಮಗೆ ಬೇಕಾದಷ್ಟು ಸಂಖ್ಯೆಯ ಒಳ್ಳೆಯ ಶಾಲೆಗಳನ್ನು ಗುರುತಿಸಲು ನನ್ನ ಸಹೋದ್ಯೋಗಿಗಳಿಗೆ ಕಷ್ಟವಾಗಲಿಲ್ಲ. ಒಂದು ಬ್ಲಾಕ್‌ನಲ್ಲಿ ಸರಿಸುಮಾರು ಇನ್ನೂರು ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳಿರುವುದನ್ನು ಪರಿಗಣಿಸಿದಾಗ, ಶಾಲೆಗಳು ಮತ್ತು ಶಿಕ್ಷಕರೊಂದಿಗೆ ಕೆಲಸ ಮಾಡುವ ನನ್ನ ಸಹೋದ್ಯೋಗಿಗಳು ಶೇಕಡ 15ರಷ್ಟು ಶಾಲೆಗಳನ್ನು 'ಒಳ್ಳೆಯ' ಶಾಲೆಗಳೆಂದು ಅಥವಾ 'ಅಸಾಧಾರಣ' ಶಾಲೆಗಳೆಂದು ಗುರುತಿಸಿದ್ದರು. ತಮ್ಮ ಕ್ಷೇತ್ರದಲ್ಲಿ ಎಷ್ಟೇ ಗಾಢವಾಗಿ ತೊಡಗಿಕೊಂಡಿದ್ದರೂ ಸಹ ಪ್ರತಿಯೊಂದು ಶಾಲೆಯ ಹಾಗೂ ಶಿಕ್ಷಕರ ಸ್ಥಿತಿ–ಗತಿ ಏನು ಎಂದು ತಿಳಿದುಕೊಳ್ಳುವುದು ಸಾಧ್ಯವಿಲ್ಲ. ಅವರು ನಿಯಮಿತವಾಗಿ ಸಂಪರ್ಕದಲ್ಲಿರುವ ಶಾಲೆಗಳಲ್ಲಿ ಯಾವುವು ಒಳ್ಳೆಯವು ಎಂದು ಗುರುತಿಸುವುದು ಅವರಿಂದ ಮಾತ್ರ ಸಾಧ್ಯ ಎಂಬುದು ಸರ್ವವೇದ್ಯ. ಇದೇ ರೀತಿಯಲ್ಲಿ ಆ ಪ್ರದೇಶದಲ್ಲೇ ಕೆಲಸ ಮಾಡುವ ತತ್ಸಮಾನ ಸಂಘಟನೆಗಳ ಸ್ಥಳೀಯ ಪ್ರತಿನಿಧಿಗಳನ್ನು ಕೇಳಿದರೆ, ನನ್ನ ಪಟ್ಟಿಯಲ್ಲಿ ಕಾಣಿಸದಿರುವ ಇಂತಹ ಇನ್ನೂ ಹೆಚ್ಚಿನ ಶಾಲೆಗಳನ್ನು ಅವರು ಗುರುತಿಸಬಲ್ಲರೆಂದು ನಾನು ನಿಶ್ಚಿತವಾಗಿ ಹೇಳಬಲ್ಲೆ. ಶಾಲೆಗಳೊಂದಿಗೆ ಕೆಲಸಮಾಡುವ ಎಲ್ಲ ಜನರನ್ನು ಹಾಗೂ ಸಂಘಟನೆಗಳನ್ನು ಸಂಪರ್ಕಿಸಲು ಸಾಧ್ಯವಾದಲ್ಲಿ ಒಳ್ಳೆಯ ಶಾಲೆಗಳ ಹೆಚ್ಚು ಉದ್ದವಾದ ಪಟ್ಟಿ ಖಂಡಿತವಾಗಿ ಸಿಗುತ್ತದೆ. ಬಹುಶಃ ಅದು ನನ್ನ ಪಟ್ಟಿಯಲ್ಲಿನ ಶೇಕಡ 15ರ ಸಂಖ್ಯೆಯನ್ನೂ ದಾಟಿ ಶೇಕಡ 20ರಿಂದ 25ರಷ್ಟಾಗಬಹುದು. ವಾಸ್ತವಿಕವಾಗಿ ಕ್ಷೇತ್ರದಲ್ಲಿ ತೊಡಗಿಸಿಕೊಂಡಿರುವವರು ಪ್ರತಿ ನಾಲ್ಕು ಅಥವಾ ಐದು ಸರ್ಕಾರಿ ಶಾಲೆಗಳಲ್ಲಿ ಒಂದನ್ನು ಒಳ್ಳೆಯ ಶಾಲೆಯೆಂದು ಗುರುತಿಸುವುದು ಸಾಧ್ಯ. ಇಂದು ಸಮೂಹ ಮಾಧ್ಯಮದಲ್ಲಿ ಸರ್ವ ಸಾಮಾನ್ಯವೆಂಬಂತೆ ಪ್ರತಿಬಿಂಬಿತವಾಗುತ್ತಿರುವ ಸರ್ಕಾರಿ ಶಾಲಾ ವ್ಯವಸ್ಥೆಯ ಅರೆಕೊರೆಗಳ ನಡುವೆ ಈ ವಾಸ್ತವವು ನಮ್ಮ ಕಣ್ಣು ತೆರೆಸುವಂತಿದೆ. ಬಿಸಿಯೂಟದ ಅಪರೂಪದ ಅವಘಡವೋ ಕಿರಾಣಿ ಅಂಗಡಿ ನಡೆಸುತ್ತಿರುವ ಮೈಗಳ್ಳ ಶಿಕ್ಷಕನೋ ಇಲ್ಲವೇ ವಾರದ ದಿನಗಳನ್ನೇ ಸರಿಯಾಗಿ ಹೇಳಲು ಬಾರದ ಉಪಾಧ್ಯಾಯನೋ ಮುಂತಾದ ವಿಷಯಗಳು ಸಮೂಹ ಮಾಧ್ಯಮದವರಿಗೆ ಸಹಜವಾಗಿಯೆ ಬೇಗನೆ ಕಣ್ಣಿಗೆ ಬೀಳುತ್ತವೆ; ತಮ್ಮ ಪಾಡಿಗೆ ತಾವು ತೆರೆಮರೆಯಲ್ಲಿದ್ದು ಅದ್ಭುತ ಕೆಲಸ ಮಾಡುವ ಶಿಕ್ಷಕರ ಕಥೆಗಳು ಅವರಿಗೆ ಗೋಚರವಾಗುವುದಿಲ್ಲ.

2017ರ ಮಾರ್ಚ್ ತಿಂಗಳಿನಲ್ಲಿ ನಾನು ಸುರಪುರ ಬ್ಲಾಕ್‌ನಿಂದ ನನ್ನ ಶಾಲಾ ಯಾತ್ರೆ ಆರಂಭಿಸಿದಾಗ, ಏನನ್ನು ಎದುರಿಸುತ್ತೇನೋ ಎಂಬುದರ ಕುರಿತು ಆತಂಕವೂ ಅನಿಶ್ಚಯತೆಯೂ ಕಾಡುತ್ತಿತ್ತು. ಈ ಶಾಲೆಗಳು, ಶಿಕ್ಷಕರು ಅಸಾಧಾರಣವಾಗಿರುವುದು ಅಂತಿರಲಿ, ಸಾಮಾನ್ಯ ಮಟ್ಟದಲ್ಲೂ ಇಲ್ಲವೆಂದಾದರೆ ಏನು ಮಾಡೋಣ? ಆದರೆ

ಈ ಆತಂಕಗಳು ತಪ್ಪಾಗಿದ್ದವು. ನಾನು ಶಾಲೆಗಳಿಗೆ ಭೇಟಿ ನೀಡುತ್ತಿದ್ದಂತೆಯೇ ಅಲ್ಲಿನ ಮುಕ್ಕಾಲು ಪಾಲು ಶಿಕ್ಷಕರು ದಿಟವಾಗಿಯೂ ವಿಶೇಷವಾದ ಶಿಕ್ಷಕರೇ ಆಗಿರುವುದು ನನ್ನ ಅರಿವಿಗೆ ಬಂತು. ಪ್ರತಿಯೊಂದು ದಿನದ ಕೊನೆಯಲ್ಲಿ ಕೈ ಬರಹದ ಟಿಪ್ಪಣಿಗಳನ್ನು ನಕಲು ಮಾಡುತ್ತಿದ್ದಂತೆ ಶಾಲೆಯೊಳಗೆ ಕಳೆದ ಕಾಲವೂ ಮಕ್ಕಳು–ಶಿಕ್ಷಕರೊಂದಿಗೆ ನಡೆಸಿದ ಸಂಭಾಷಣೆಯೂ ನನ್ನ ಸ್ಮೃತಿಪಟಲದಲ್ಲಿ ಸುಳಿಯುತ್ತಿದ್ದವು. ಅಲ್ಲಿನ ಶಿಕ್ಷಕರಲ್ಲಿದ್ದ ಅದಮ್ಯ ಸ್ಫೂರ್ತಿ ಒಂದು ಅದ್ಭುತವೆಂಬಂತೆ ನನಗೆ ತೋರಿತು. ನನ್ನ ಟಿಪ್ಪಣಿಗಳು ಜೀವ ತುಂಬಿಕೊಳ್ಳುವಂತೆ ತೋರಿತು. ನಾಲ್ಕು ಅಥವಾ ಐದರಲ್ಲಿ ಒಂದು ಸರ್ಕಾರಿ ಶಾಲೆ ವಿದ್ಯಾರ್ಥಿಗಳಿಗೆ ಒಳ್ಳೆಯ ಶಿಕ್ಷಣವನ್ನೊದಗಿಸಲು ಕಠಿಣ ಪರಿಶ್ರಮವನ್ನು ಪಡುತ್ತಿತ್ತು ಎಂಬುದೇ ವಾಸ್ತವವಾಗಿದ್ದರೂ ಗ್ರಾಮೀಣ ಭಾರತದಲ್ಲಿನ ಸಾರ್ವಜನಿಕ ಶಿಕ್ಷಣದ ಸ್ಥಿತಿಗತಿಯ ದೃಷ್ಟಿಯಿಂದ ಇದು ಆಶಾದಾಯಕವಂತೂ ಆಗಿರಲಿಕ್ಕಿಲ್ಲ.

ಶಿಕ್ಷಕರೊಂದಿಗಿನ ಮಾತುಕತೆಯಲ್ಲಿ ನಾನು ಅವರ ಬದುಕಿನ ಕಷ್ಟಸುಖಗಳ ಆಸೆ–ಭರವಸೆಗಳ ಬಗೆಗಿನ ಇಣುಕು ನೋಟವನ್ನು ಕಂಡೆ. ಅವರು ಸ್ವಯಂಪ್ರೇರಿತರಾಗಿ ಬಂದು ಸಮಯದ ಪರಿವೆಯನ್ನು ಮರೆತು ನಮ್ಮೊಂದಿಗೆ ಮುಚ್ಚುಮರೆಯಿಲ್ಲದೆ ವ್ಯವಹರಿಸಿದರು. ನಾನು ಈ ಶಿಕ್ಷಕರ ಕಾರ್ಯಗಳನ್ನು ವೀಕ್ಷಿಸಿ ಶಿಕ್ಷಣದ ಬಗ್ಗೆ ಅವರ ದೃಷ್ಟಿಕೋನಗಳೇನು, ಅವು ತರಗತಿಗಳಲ್ಲಿ ಸಮತೆ ಮತ್ತು ಗುಣಮಟ್ಟದ ಅನುಸಂಧಾನವಾಗಿ ಸಾಕಾರಗೊಳ್ಳುವುದೇ ಎಂಬುದನ್ನು ಅರಿಯಲು ಯತ್ನಿಸಿದೆ. ಬೋಧನಾ ವಿಧಾನ, ಮಕ್ಕಳು ಮತ್ತು ಅವರ ಕಲಿಕೆಯ ಕ್ರಮ, ವೃತ್ತಿನಿರತರಾಗುವ ದಿಕ್ಕಿನಲ್ಲಿ ಅವರ ಬೆಳವಣಿಗೆಯ ಸಾಧ್ಯತೆ – ಇವುಗಳ ಬಗ್ಗೆ ಮಾತನಾಡಿದೆವು. ಆ ಶಿಕ್ಷಕರ ಜೀವನಕ್ರಮದ ಬಗೆಗಿನ ಒಳನೋಟವೂ ಸಹ ನನಗೆ ಒದಗಿ ಬಂತು. ಅವರ ಔದಾರ್ಯದ ದೆಸೆಯಿಂದಲೇ ನನಗೆ ಈ ಕಥನಗಳನ್ನು ಸಂಕಲಿಸುವ ಅವಕಾಶ ದೊರೆಯಿತು. ನಾನು ಭೇಟಿ ನೀಡಿದ ಎಲ್ಲಾ ಶಾಲೆಗಳಲ್ಲಿಯೂ ಇಂಥ ಒಳನೋಟಗಳು ಇದ್ದವು; ಎಲ್ಲವನ್ನೂ ಹೆಕ್ಕಿ ತೆಗೆಯಲು ಸಾಧ್ಯವಾಗದೆ ಹೋದರೆ ಅದು ನನ್ನ ವೈಫಲ್ಯವಷ್ಟೇ.

ಈ ಧೀರ ಶಿಕ್ಷಕರ ಕಥನಗಳನ್ನು ಪ್ರಸ್ತುತಪಡಿಸುವ ಸಂದರ್ಭದಲ್ಲಿ ನಾನು ಇವುಗಳನ್ನು ಈಗ ನಮ್ಮ ಮುಂದಿರುವ ನಾನಾ ಬಗೆಯ 'ಬದಲಾವಣೆಯ ಸಿದ್ಧಾಂತ'ಗಳ ಚೌಕಟ್ಟಿನೊಳಗೆ ಕೂರಿಸುವ ಪ್ರಯತ್ನವನ್ನು ಬುದ್ಧಿಪೂರ್ವಕವಾಗಿಯೇ ಮಾಡಿಲ್ಲ; ಜನಪ್ರಿಯ ಆಡಳಿತ ನಿರ್ವಹಣಾ ಪರಿಭಾಷೆಗಳಾದ 'ಪ್ರಭಾವ ವಲಯ' ಅಥವಾ 'ನಿಯಂತ್ರಣ ವಲಯ'ದೊಂದಿಗೆ ಸಮೀಕರಿಸುವ ಯತ್ನವನ್ನೂ ಮಾಡಿಲ್ಲ. ಪರಿಚಿತ 'ಶಾಲಾ ಗುಣಮಟ್ಟದ ಚೌಕಟ್ಟಿನಿಂದಲೂ' ಈ ಶಾಲೆಗಳನ್ನು ಅಳೆಯುವ ಪ್ರಲೋಭನೆಯನ್ನೂ ಹತ್ತಿಕ್ಕಿಕೊಂಡಿದ್ದೇನೆ. ಬದಲಾಗಿ ಈ ಕಥನಗಳ ಸರಣಿಯನ್ನು ಘಟನಾವಳಿಗಳ ಸರಮಾಲೆಯಂತೆ ಹೆಣೆಯಲು ಪ್ರಯತ್ನಿಸಿದ್ದೇನೆ. ಓದುಗರು ಇದನ್ನು ಯಾವ ಕ್ರಮದಲ್ಲಿ ಬೇಕಾದರೂ ಓದಬಹುದು. ಕರ್ನಾಟಕದ ಹೆಮ್ಮಡಗಿಯಿಂದ ಉತ್ತರಾಖಂಡ್‌ನ ಗಂಗಾನಿಯವರೆಗೂ ಈ ಕಥನಗಳನ್ನು ಸಂಪರ್ಕಿಸುವ ಕೊಂಡಿ ಒಂದೇ: ಅದು ಇಲ್ಲಿನ ಶಿಕ್ಷಕರೇ ಹೆಮ್ಮೆಯಿಂದ ಹೇಳುವಂತೆ "ಇದು ಬರೀ ಸರ್ಕಾರಿ ಕೆಲಸವಲ್ಲ." ಈ ಹೇಳಿಕೆ ಇವರ ಸೇವೆಯ ನೈಜ ಅರ್ಥವನ್ನು ಧ್ವನಿಸುತ್ತದೆ.

# ನಾವೇಕೆ ಸರ್ಕಾರಿ ಶಾಲೆಗಳನ್ನು ಬೆಂಬಲಿಸಬೇಕು ?

ನಾನು ಭೇಟಿ ನೀಡಿದ ನೂರಾಹತ್ತು ಶಾಲೆಗಳು ಇಡೀ ಭಾರತದಲ್ಲಿನ ಒಂದು ದಶಲಕ್ಷ ಸರ್ಕಾರಿ ಶಾಲೆಗಳನ್ನು ಪ್ರತಿನಿಧಿಸದೆ ಇರಬಹುದು. ಆದರೆ ಅವು ಗ್ರಾಮೀಣ ಭಾರತದಲ್ಲಿನ ಅನೇಕ 'ಒಳ್ಳೆಯ' ಶಾಲೆಗಳ ಸಾಲಿಗೆ ಖಂಡಿತವಾಗಿಯೂ ಸೇರುತ್ತವೆ. ಬಲು ದೂರದ, ದುರ್ಗಮ ಸ್ಥಳಗಳಲ್ಲಿನ ಇಂತಹ ಶಾಲೆಗಳಲ್ಲಿಯೇ 'ಪ್ರತಿಯೊಂದು ಮಗುವೂ ಕಲಿಯಬಲ್ಲುದು' ಎಂಬ ದೃಢವಿಶ್ವಾಸದಿಂದ ಕರ್ತವ್ಯದ ಮೇರೆಯನ್ನೂ ಮೀರಿ ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರನ್ನು ಹೆಚ್ಚುಹೆಚ್ಚಾಗಿ ಕಾಣಬಹುದು. ಈ ಕಥನವನ್ನು ಪೋಣಿಸಲು ನಾನು ಭೇಟಿ ನೀಡಿದ ಪ್ರತಿಯೊಂದು ಶಾಲೆಯಲ್ಲಿಯೂ ಶಿಕ್ಷಕರು ತಮ್ಮದೇ ಕಾರ್ಯತಂತ್ರವನ್ನು ರೂಪಿಸುತ್ತ, ತಮ್ಮ ಸಾಮರ್ಥ್ಯವನ್ನು ಪ್ರತಿದಿನವೂ ಎಂಬಂತೆ ಸಾಣೆ ಹಿಡಿಯುತ್ತ, ಜನ ತಮ್ಮನ್ನು ಮೆಚ್ಚಲಿ ಎಂಬ ಯಾವ ನಿರೀಕ್ಷೆಯೂ ಇಲ್ಲದೆ ಮಕ್ಕಳ ಶ್ರೇಯೋಭಿವೃದ್ಧಿಗಾಗಿ 'ಎಲೆಮರೆಯ ಕಾಯಿ'ಗಳಂತೆ ಶ್ರಮಿಸುತ್ತಿರುವುದನ್ನು ಕಂಡಿದ್ದೇನೆ. ನಾನು 'ಎಲೆಮರೆಯ ಕಾಯಿ' ಎಂಬ ಕ್ಲೀಷೆಯನ್ನು ಸುಮ್ಮನೆ ಬಳಸುತ್ತಿಲ್ಲ. ಇವರು ಶಾಲೆ ಸೇರಲು ದಿನಾಲೂ ಕಿಕ್ಕಿರಿದ ಬಸ್ಸಿನಲ್ಲೋ ಟ್ರಿಪ್ ಮಾಡುವ ಆಟೋಗಳಲ್ಲಿ ಬೇರೆಯವರೊಂದಿಗೆ ಸೇರಿಕೊಂಡೋ ಪ್ರಯಾಣ ಮಾಡುತ್ತಾರೆ. ಓರ್ವ ಶಿಕ್ಷಕಿ ಬೆಟ್ಟಗುಡ್ಡದ ಏರುದಾರಿಯಲ್ಲಿ, ಮಳೆಗಾಲದಲ್ಲಿ ಜಾರುವ ಕಚ್ಚಾರಸ್ತೆಯಲ್ಲಿ ಮೈಲುಗಟ್ಟಲೆ ನಡೆದು ಹೆದ್ದಾರಿಯಿಂದ ಬಲುದೂರದ ಶಾಲೆಗೆ ಬರುತ್ತಾರೆ. ಆಕೆ ಶಾಲೆಯಲ್ಲಿ ಒಂದು ತರಗತಿಯ ಮಕ್ಕಳಿಗೆ ಅಭ್ಯಾಸ ಮಾಡಿಕೊಳ್ಳಲು ಕೆಲಸವನ್ನು ಕೊಟ್ಟು ಇನ್ನೊಂದು ತರಗತಿಯನ್ನು ನಿಭಾಯಿಸಲು ಓಡುತ್ತಾರೆ; ಯಾಕೆಂದರೆ ಒಂದರಿಂದ ಐದನೇ ತರಗತಿವರೆಗಿನ ಆ ಶಾಲೆಯಲ್ಲಿ ಆಕೆಯನ್ನು ಬಿಟ್ಟು ಬೇರೆ ಶಿಕ್ಷಕರಿಲ್ಲ. ಇದನ್ನೆಲ್ಲ ಯಾರೂ ಗಮನಿಸುವುದಿಲ್ಲ. ಅಲ್ಲಿನ ಮಕ್ಕಳಲ್ಲಿ ಅನೇಕರು ತಂಗಳನ್ನ ತಿಂದು ಬಂದಿರುತ್ತಾರೆ; ಅವರ ಮನೆಗಳಲ್ಲಿ ಓದುವ ಸಾಮಗ್ರಿಗಳಾಗಲಿ, ಕಲಿಕೆಯ ವಾತಾವರಣವಾಗಲಿ ಇರುವುದಿಲ್ಲ. ಅವರ ಪೋಷಕರಿಗೆ ಅಂಕಪಟ್ಟಿಯನ್ನು ಓದುವುದಿರಲಿ, ರುಜು ಹಾಕಲೂ ಬರುವುದಿಲ್ಲ; ಬಂದರೂ ನಾಲ್ಕಕ್ಷರದ ಗೀಚು ಇಲ್ಲವೇ ಹೆಬ್ಬೆಟ್ಟು ಮಾತ್ರ. ಶಿಕ್ಷಕರು ಮನೆಮನೆಗೆ ಹೋಗಿ ಮಕ್ಕಳನ್ನು ಶಾಲೆಗೆ ಕಳಿಸಿ ಎಂದು ಪೋಷಕರ ಮನವೊಲಿಸಬೇಕೆಂದು ಅವರ ಸೇವಾನಿಯಮಗಳಲ್ಲೆಲ್ಲೂ ಬರೆದಿರದಿದ್ದರೂ ಇದು ಶಿಕ್ಷಕರಾಗಿ ಮಕ್ಕಳ ಏಳಿಗೆಗಾಗಿ ತಾವು ಮಾಡಬೇಕಾದ ಕರ್ತವ್ಯವೆಂದು ಮಾಡುತ್ತಾರೆ. ಇದಾವುದನ್ನೂ ನಾವ್ಯಾರೂ ಗಮನಿಸುವುದಿಲ್ಲ.

ನಮ್ಮ ದೇಶದಲ್ಲಿ ವಿದ್ಯಾಭ್ಯಾಸದ ದಾರಿಯಲ್ಲಿ ಎದುರಾಗುವ ಸವಾಲುಗಳು ಒಂದೊಂದು ಜಿಲ್ಲೆಯಲ್ಲೂ ಒಂದೊಂದು ಬಗೆ. ಉತ್ತರಕಾಶಿಯಲ್ಲಿ ಭೂಪ್ರಕೃತಿಯ ದೆಸೆಯಿಂದಲೂ ಹವಾಮಾನದ ಕಾರಣದಿಂದಲೂ ಮಕ್ಕಳು ಹಾಗೂ ಶಿಕ್ಷಕರಿಬ್ಬರಿಗೂ ಪ್ರಯಾಣವೇ ಒಂದು ಅಗ್ನಿಪರೀಕ್ಷೆ. ಉಧಮ್‌ಸಿಂಗ್‌ನಗರದ ಬಯಲುಗಳಲ್ಲಿ ವಿದ್ಯಾರ್ಥಿ – ಶಿಕ್ಷಕರ ಅನುಪಾತವು ಮಕ್ಕಳ ಕಲಿಕೆಗೆ ಪ್ರತಿಕೂಲವಾಗಿದೆ. ಕರ್ನಾಟಕದ ಯಾದಗಿರಿ ಜಿಲ್ಲೆಯ ಪೋಷಕರು ಜೀವನ ನಿರ್ವಹಣೆಗಾಗಿ ಉದ್ಯೋಗವನ್ನು ಅರಸಿ ವಲಸೆ ಹೋಗುವುದರಿಂದ ಅಲ್ಲಿನ ಶಾಲೆಗಳಲ್ಲಿ ಮಕ್ಕಳ ಗೈರುಹಾಜರಿ ಸ್ವಲ್ಪ ಹೆಚ್ಚೇ ಇದೆ. ದಕ್ಷಿಣ ರಾಜಸ್ಥಾನದ ಸಿರೋಹಿಯಲ್ಲಿ ಗಮನಾರ್ಹ ಸಂಖ್ಯೆಯಲ್ಲಿ ಬುಡಕಟ್ಟು ಜನಾಂಗವಿದ್ದು (ಗರಾಸಿಯ, ಭಿಲ್ಲರು ಮತ್ತು ಇತರರು) ಅವರು ತಮ್ಮದೇ ಆದ ಸ್ಥಳೀಯ ಉಪಭಾಷೆಗಳನ್ನು ಮಾತನಾಡುತ್ತಾರೆ. ಅವರ ಮಕ್ಕಳೊಂದಿಗೆ ಸಂವಹನವನ್ನು ಕುದುರಿಸಲು ಮಾರ್ವಾಡಿ, ಸ್ಥಳೀಯ ಉಪಭಾಷೆ ಹಾಗೂ ಹಿಂದಿಯನ್ನು ಬೆರೆಸಿ ಮಾತನಾಡುವ ಶಿಕ್ಷಕರು ಬೇಕಾಗುತ್ತಾರೆ.

ಇತ್ತೀಚಿನ ವರ್ಷಗಳಲ್ಲಿ, ಮಕ್ಕಳು ಬೃಹತ್ ಪ್ರಮಾಣದಲ್ಲಿ ಸರ್ಕಾರಿ ಶಾಲೆಗಳಿಂದ ಖಾಸಗಿ ಶಾಲೆಗಳಿಗೆ ವಲಸೆ ಹೋಗಿದ್ದಾರೆ. ಪೋಷಕರಲ್ಲಿ ಬಹುತೇಕರು ಹಳ್ಳಿಯ ಸಣ್ಣಪುಟ್ಟ ಅಂಗಡಿಗಳ ಮಾಲೀಕರು, ಆಟೋರಿಕ್ಷಾ ಚಾಲಕರು ಹಾಗೂ ಸಣ್ಣ ಹಿಡುವಳಿಯ ರೈತರೋ ಆಗಿದ್ದು ಮಕ್ಕಳ ಖಾಸಗಿ ಶಾಲೆಯ ಓದಿಗಾಗಿ ತಮ್ಮ ಮೇಲೆ ಕಷ್ಟಗಳನ್ನು ಎಳೆದುಕೊಳ್ಳುತ್ತಿದ್ದಾರೆ. ಅವರು ತಮ್ಮ ತಿಂಗಳ ವರಮಾನದ ಶೇಕಡ 12–15ರಷ್ಟನ್ನು ತಮ್ಮ ಗಂಡುಮಕ್ಕಳನ್ನು (ಹೌದು, ಗಂಡುಮಕ್ಕಳು ಮಾತ್ರ) ಖಾಸಗಿ ಶಾಲೆಗಳಲ್ಲಿ ಓದಿಸಲು ವ್ಯಯಿಸುತ್ತಾರೆ. ಸರ್ಕಾರಿ ಶಾಲೆಗಳು ನಿಷ್ಕ್ರಿಯವಾಗಿದ್ದರೆ, ಪೋಷಕರು ಖಾಸಗಿ ಶಾಲೆಗಳ ಮೊರೆ ಹೋಗುತ್ತಿದ್ದಾರೆಂಬುದು ಅರ್ಥವಾಗುವ ವಿಷಯ. ಆದರೆ ಬಹುತೇಕ ಪೋಷಕರ ತೀರ್ಮಾನದ ಹಿಂದಿನ ಕಾರಣಗಳು ದುರ್ಬಲವಾಗಿರುತ್ತವೆ. ಅವರು ನೀಡುವ ಕಾರಣ – "ಅಲ್ಲಿನ ಸಮವಸ್ತ್ರ, ಟೈ, ಬೂಟುಗಳು ಬಹಳ ಚೆನ್ನಾಗಿವೆ", "ಮಗ ಇಂಗ್ಲಿಷ್ ಕಲಿಯುತ್ತಾನೆ" ಅಥವಾ "ನಮ್ಮ ಜಾತಿಯವರು (ಬಿರಾದರಿ) ನನ್ನನ್ನು ಜಿಪುಣನೆಂದು ಭಾವಿಸಬಾರದು."

ಯಮುನಾ ಕಣಿವೆಯ ಪುರೋಲಾ ಪಟ್ಟಣದ ರಸ್ತೆಯ ಒಂದು ತಿರುವಿನಲ್ಲಿ ನಿಂತು ಬೂಟುಗಳು ಹಾಗೂ ಟೈ ಧರಿಸಿ ಶಾಲಾ ಬಸ್ಸಿಗಾಗಿ ಕಾಯುತ್ತಿದ್ದ ಬಾಲಕರ ಎರಡು ಗುಂಪುಗಳನ್ನು ನೋಡಿದೆ. ಅದೇ ವೇಳೆ ಅವರ ಮುಂದೆಯೇ ಅಲ್ಲಿಯೇ ಹತ್ತಿರದಲ್ಲಿದ್ದ ಸರ್ಕಾರಿ ಶಾಲೆಗೆ ಹುಡುಗಿಯರು ಗುಂಪುಗುಂಪಾಗಿ ನಡೆದು ಹೋಗುತ್ತಿದ್ದರು. ಆ ಒಂದು ನೋಟ ಪೋಷಕರ ಆದ್ಯತೆಯನ್ನು ತೋರಿಸುತ್ತದೆ – ಅವರ ಗಂಡುಮಕ್ಕಳಿಗೆ ಖಾಸಗಿ ಶಾಲೆಗಳು, ಹೆಣ್ಣುಮಕ್ಕಳಿಗೆ ಸರ್ಕಾರಿ ಶಾಲೆ. ನಾನು ಆ ಗಂಡು ಮಕ್ಕಳನ್ನು ಮಾತನಾಡಿಸಿದೆ, ಅವರಿಗೆ ಒಂದು ನಿಮಿಷ ಪೂರ್ತಿ ನನ್ನೊಡನೆ ಇಂಗ್ಲಿಷ್‌ನಲ್ಲಿ ಮಾತುಕತೆ ನಡೆಸಲು ಆಗಲಿಲ್ಲ.

ಈ ಶಾಲಾ ಮಕ್ಕಳ ವಲಸೆಯ ದೆಸೆಯಿಂದ ಸರ್ಕಾರಿ ಶಾಲೆಗಳಲ್ಲಿ ಬಡವರ ಹಾಗೂ

ಹಿಂದುಳಿದವರ ಮಕ್ಕಳೇ ತುಂಬಿದ್ದಾರೆ. ಕಳೆದ ಹತ್ತು ವರ್ಷಗಳಲ್ಲಿ ಖಾಸಗಿ ಶಾಲೆಗಳು ಶೇಕಡ 75ರಷ್ಟು ಹೆಚ್ಚಾಗಿದ್ದರೆ, ಸರ್ಕಾರಿ ಶಾಲೆಗಳು ಶೇಕಡ 15ರಷ್ಟು ಮಾತ್ರ ಬೆಳೆದಿವೆ. 2006ರಲ್ಲಿ ಶೇಕಡ 25ರಷ್ಟು ಮಕ್ಕಳು ಮಾತ್ರ ಖಾಸಗಿ ಶಾಲೆಯಲ್ಲಿದ್ದರು. ಆದರೆ 2016ರ ಹೊತ್ತಿಗೆ ಈ ಸಂಖ್ಯೆಯು ಶೇಕಡ 38ರಷ್ಟಕ್ಕೆ ಬೆಳೆದಿದೆ. ಇದಕ್ಕೆ ವ್ಯತಿರಿಕ್ತವಾಗಿ ಸರ್ಕಾರಿ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ಮಕ್ಕಳ ಸಂಖ್ಯೆ ಶೇಕಡ 7ರಷ್ಟು ಇಳಿಮುಖವಾಗಿದೆ. ನಮ್ಮ ಶಾಲಾ ಶಿಕ್ಷಣದಲ್ಲಿ ಜರುಗುತ್ತಿರುವ ಈ ರೀತಿಯ ಬೃಹತ್ ಪ್ರಮಾಣದ ಅಪಕೇಂದ್ರೀಕರಣವು ಅತ್ಯಂತ ಪ್ರತಿಕೂಲ ಪರಿಸ್ಥಿತಿಯಲ್ಲಿರುವ ಮಕ್ಕಳನ್ನು ಸರ್ಕಾರಿ ಶಾಲೆಗಳಲ್ಲಿ ಉಳಿಸುವ ಮೂಲಕ ನಮ್ಮ ದೇಶದ ದಾರುಣ ಸಾಮಾಜಿಕ ಅಸಮಾನತೆಯನ್ನು ಇನ್ನಷ್ಟು ಉಲ್ಬಣಗೊಳಿಸುತ್ತಿದೆ.

ಆದರೆ ಈ ಪುಸ್ತಕದಲ್ಲಿನ ಉತ್ತಮ ಶಿಕ್ಷಕರ ಸ್ಫೂರ್ತಿದಾಯಕ ಕಥನಗಳು, ಅವರ ಊರುಗಳಲ್ಲಿ ಈ ಪ್ರವೃತ್ತಿಯನ್ನು ತಡೆಗಟ್ಟುತ್ತಿರುವುದಲ್ಲದೆ ಖಾಸಗಿ ಶಾಲೆಗಳಿಂದ ಮಕ್ಕಳನ್ನು ಮತ್ತೆ ಸರ್ಕಾರಿ ಶಾಲೆಗಳಿಗೆ ಕರೆತರುತ್ತಿದ್ದಾರೆ ಎಂಬುದನ್ನು ತಿಳಿಸುತ್ತವೆ. ತಮ್ಮ ಶಾಲೆಗಳಲ್ಲಿ ಕೂಡಾ ಮಕ್ಕಳು ಚೆನ್ನಾಗಿ ಕಲಿಯಬಹುದೆಂಬುದನ್ನು ಅವರು ಸಾಬೀತು ಮಾಡಿದ್ದಾರೆ. ಸರ್ಕಾರಿ ಶಾಲೆಗಳಿಂದ ಖಾಸಗಿ ಶಾಲೆಗಳಿಗೆ ಮಕ್ಕಳ ವಲಸೆಯು ಕಳೆದ ಎರಡು ವರ್ಷಗಳಿಂದ ಸ್ಥಿರವಾಗಿದೆಯೆಂದು ASER–2018 ವಾರ್ಷಿಕ ಸಮೀಕ್ಷೆ ಕೂಡ ತಿಳಿಸಿದೆ. ಅಲ್ಲದೆ ಕೆಲವು ರಾಜ್ಯಗಳಲ್ಲಿ ಸರ್ಕಾರಿ ಶಾಲೆಗಳಲ್ಲಿನ ದಾಖಲಾತಿ ಸ್ವಲ್ಪ ಹೆಚ್ಚಾಗಿರುವುದನ್ನೂ ಅದು ತೋರಿಸುತ್ತದೆ.

ಗಮನವಿಟ್ಟು ನೋಡಿದರೆ ಸರ್ಕಾರಿ ಶಾಲೆಗಳಲ್ಲಿ ಆಗಿರುವ ಬದಲಾವಣೆಯನ್ನು ಕಾಣಬಹುದು. ನನ್ನ ಸಹೋದ್ಯೋಗಿಗಳು 2005ರಲ್ಲಿ ಈಶಾನ್ಯ ಕರ್ನಾಟಕದಲ್ಲಿ ನಡೆಸಿದ ಸಮೀಕ್ಷೆಯಲ್ಲಿ, ಹತ್ತರಲ್ಲಿ ನಾಲ್ಕು ಶಾಲೆಗಳಿಗೆ ಮಾತ್ರ ಸಮವಸ್ತ್ರಗಳೂ ಪುಸ್ತಕಗಳೂ ಶೈಕ್ಷಣಿಕ ವರ್ಷದ ಪ್ರಾರಂಭದಲ್ಲೇ ದೊರೆಯುತ್ತಿದ್ದವು. ಇಂದು ಅಂತಹ ಉತ್ತೇಜಕಗಳನ್ನು ಪಡೆದ ಶಾಲೆಗಳ ಸಂಖ್ಯೆ ಅದರ ಎರಡರಷ್ಟಾಗಿದೆ. ನಾನು ಭೇಟಿ ನೀಡಿದ ಎಲ್ಲಾ ಶಾಲೆಯವರೂ ಪೂರ್ವಸಿದ್ಧತೆ ಮಾಡಿಕೊಂಡು ಇವುಗಳನ್ನು ಸಕಾಲದಲ್ಲಿ ಪಡೆದುಕೊಂಡಿದ್ದರು; ಅದಕ್ಕಾಗಿ ಅಲ್ಲಿನ ಕೆಲವು ಶಿಕ್ಷಕರು ತಮ್ಮ ಕೆಲವು ರಜೆಗಳನ್ನು ಕಳೆದುಕೊಳ್ಳಬೇಕಾಯಿತು ಎಂಬುದು ಬೇರೆ ಮಾತು. ನಾವು ಭೇಟಿ ನೀಡಿದ ಬಹುತೇಕ ಶಾಲೆಗಳಲ್ಲಿ ವಿದ್ಯಾರ್ಥಿಗಳ ಹಾಜರಾತಿ ಶೇಕಡ 90ಕ್ಕಿಂತ ಹೆಚ್ಚಾಗಿತ್ತು. ಸುರಪುರ ಬ್ಲಾಕ್‌ನಲ್ಲಿ ಹಲವು ವರ್ಷಗಳಿಂದ ಶೇಕಡ 65ಕ್ಕೆ ಸ್ಥಗಿತಗೊಂಡಿದ್ದ ವಿದ್ಯಾರ್ಥಿಗಳ ಹಾಜರಾತಿಯು ಈಗ ಶೇಕಡ 80ರ ಹತ್ತಿರಕ್ಕೆ ಬರುತ್ತಿದೆ. ಈ ನೂರಾಹತ್ತು ಶಾಲೆಗಳಲ್ಲಿ ಒಂದೊಂದು ಶಾಲೆಯಲ್ಲೂ ಶಿಕ್ಷಕರ ಹಾಜರಿಯೂ ಸಮಯ ಪಾಲನೆಯೂ ನಿಶ್ಚಿತವಾಗಿತ್ತು. ಗ್ರಾಮೀಣ ಸರ್ಕಾರಿ ಶಾಲೆಗಳಲ್ಲಿ ಮಕ್ಕಳ ಹಾಜರಾತಿ ಮತ್ತು ಸಮಯಪಾಲನೆಯಂಥ ಮೂಲ ಸಂಗತಿಗಳು ಜೀವಂತ ಶಾಲಾ ಸಂಸ್ಕೃತಿಯ ಗಮನಾರ್ಹವಾದ ಸಂಕೇತಗಳಾಗುತ್ತವೆ. 2005ರ ಅದೇ ಸಮೀಕ್ಷೆಯಲ್ಲಿ, ಹತ್ತರ ಪೈಕಿ ಏಳು ಶಾಲೆಗಳಲ್ಲಿ ವಿದ್ಯಾರ್ಥಿಗಳ ನಡುವಿನ ಹೊಡೆದಾಟಗಳೂ ಶಿಕ್ಷಕರು ದೈಹಿಕ ಶಿಕ್ಷೆ

*ನಕ್ಷೆ 1: ಸರ್ಕಾರಿ ಶಾಲೆಗಳು ಎದುರಿಸುತ್ತಿರುವ ಸವಾಲುಗಳು #*







*ಸಂಖ್ಯೆಗಳು ಲಕ್ಷದಲ್ಲಿವೆ, ಮೂಲ : ಡಿ.ಐ.ಎಸ್.ಇ*

ನೀಡುವ ಪ್ರಕರಣಗಳೂ ವರದಿಯಾಗಿದ್ದವು; ಆದರೆ ಈ ಬಾರಿ ನಾವು ಭೇಟಿ ನೀಡಿದ ಶಾಲೆಗಳಲ್ಲಿ ಬೆತ್ತದ ಸುಳಿವಿರಲಿಲ್ಲ; ವಿದ್ಯಾರ್ಥಿಗಳ ನಡುವೆ ನೂಕುವುದು ತಳ್ಳುವುದೇ ಮುಂತಾದ ಮಾಮೂಲಿ ಚಟುವಟಿಕೆಗಳ ಹೊರತು ಇನ್ಯಾವುದೇ ಗಂಭೀರ ಜಗಳಗಳು ಕಂಡುಬರಲಿಲ್ಲ. ತಾವು ಶಾಲೆಗಳಿಗೆ ಭೇಟಿ ನೀಡಿದಾಗ ಸುಮಾರು ಶೇಕಡ 15ರಷ್ಟು ಮುಖ್ಯ ಶಿಕ್ಷಕರು ಶಾಲೆಗಳಲ್ಲಿ ಹಾಜರಿರದೆ, ಬ್ಲಾಕ್ ಶಿಕ್ಷಣ ಕಛೇರಿಗೆ ಕೆಲಸಗಳ ಮೇರೆಗೆ ಹೋಗಿರುವುದನ್ನು 2005ರಲ್ಲಿ ಸಂಶೋಧಕರು ಗಮನಿಸಿದ್ದರು. ಇಂದು ಆ ಸ್ಥಿತಿ ಇಲ್ಲ. ನಾವು ಭೇಟಿ ನೀಡಿದ ಶಾಲೆಗಳಲ್ಲೆಲ್ಲ ಮುಖ್ಯ ಶಿಕ್ಷಕರು ಹಾಜರಿದ್ದರು. ಇದಕ್ಕೆ ಪ್ರಮುಖ ಕಾರಣ ಸಂಪರ್ಕ ಸೌಲಭ್ಯದಲ್ಲಿ ಆಗಿರುವ ಪ್ರಗತಿ. ಇಂದು ಮುಖ್ಯ ಶಿಕ್ಷಕರು ಕೇಂದ್ರ ಕಛೇರಿಯಿಂದ ಮಾಹಿತಿಗಾಗಿ ಬರುವ ಬೇಡಿಕೆಗಳನ್ನು, ಮಾಹಿತಿ ತಂತ್ರಜ್ಞಾನದಲ್ಲಿ ಪರಿಣತರಾದ ತಮ್ಮ ಯುವ ಸಹೋದ್ಯೋಗಿಗಳ ಸಹಾಯದಿಂದ ಪೂರೈಸಲು ಶಕ್ತರಾಗಿದ್ದಾರೆ.

ಶಿಕ್ಷಕರು ಶಾಲೆಗೆ ಚಕ್ಕರ್ ಹೊಡೆಯುವುದು ಸಾಮಾನ್ಯವಾಗಿ ಜನರ ನಡುವಿನ ಒಂದು ಹರಟೆಯ ವಿಷಯ. ಅದಕ್ಕೆ ಮುಕ್ತಾಯ ಹಾಡುವುದಕ್ಕೆ ಇದು ಸಕಾಲವೆಂದು ಭಾವಿಸುತ್ತೇನೆ. 2017ರಲ್ಲಿ ಫೌಂಡೇಷನ್ ಮಾಡಿದ ಅಧ್ಯಯನದಲ್ಲಿ ಶಿಕ್ಷಕರ ಗೈರುಹಾಜರಿ, ಅಂದರೆ ಕಾರಣವಿಲ್ಲದ ಗೈರು ಹಾಜರಿ ಶೇಕಡ 2.5ಕ್ಕಿಂತ ಕಡಿಮೆ ಇತ್ತೆಂದು ತೋರಿಸುತ್ತದೆ. ಈ ಅಧ್ಯಯನದಲ್ಲಿ ಆರು ರಾಜ್ಯಗಳ 619 ಶಾಲೆಗಳ 2861 ಶಿಕ್ಷಕರು ಒಳಗೊಂಡಿದ್ದರು. ಶಿಕ್ಷಕರ ಗೈರು ಹಾಜರಿ ಜಾಸ್ತಿ ಇರಬಹುದೆಂದು ಗುರುತಿಸಲಾದ ಅತ್ಯಂತ ಕಷ್ಟಕರ ಪರಿಸ್ಥಿತಿಗಳಲ್ಲಿಯೂ ಈ ಶಿಕ್ಷಕ ವೃಂದ ತರಗತಿಗಳಲ್ಲಿ ಅವರ ಕಾರ್ಯಗಳಲ್ಲಿ ತೊಡಗಿತ್ತು ಎಂದು ಅಧ್ಯಯನ ಹೇಳುತ್ತದೆ.

ಹತ್ತು ಹದಿನೈದು ವರ್ಷಗಳ ಹಿಂದೆ ನನ್ನ ಕ್ಷೇತ್ರ ಭೇಟಿಗಳಲ್ಲಿ ಅಲ್ಲೊಬ್ಬರು, ಇಲ್ಲೊಬ್ಬರು ಅಸಾಧಾರಣ ಶಿಕ್ಷಕರು ಎದುರಾಗುತ್ತಿದ್ದರು. ಆದರೆ ಈ ಬಾರಿ ನಾನು ಭೇಟಿಮಾಡಿದ ಸುಮಾರು ಇನ್ನೂರ ಐವತ್ತರಿಂದ ಮುನ್ನೂರು ಶಿಕ್ಷಕರಲ್ಲಿ ನಾನು ಕಂಡದ್ದೇ ಬೇರೆ. ಅವರು ಪ್ರಗತಿಯ ದಾರಿಯನ್ನು ಹಿಡಿದಿರುವುದು ನನಗೆ ಗೋಚರವಾಯಿತು. ಅವರ ಅಭಿವ್ಯಕ್ತಿ ಸಾಮರ್ಥ್ಯದಲ್ಲಿ ಬೆಳವಣಿಗೆಯಿತ್ತು; ಕೆಲಸದಲ್ಲಿ ಬದ್ಧತೆಯಿತ್ತು. ಇದೆಲ್ಲವೂ ಅವರ ವ್ಯಕ್ತಿತ್ವದ ಬೆಳವಣಿಗೆಯ ಲಕ್ಷಣಗಳಾಗಿದ್ದವು. ಈ ಪರಿವರ್ತನೆಯಲ್ಲಿ ಹಲವು ಎಳೆಗಳಿವೆ. ಈಗ ಹೆಚ್ಚುಹೆಚ್ಚು ಶಿಕ್ಷಕರು ದಿನಚರಿ ಬರೆಯುತ್ತಿದ್ದಾರೆ; ಅದರಲ್ಲಿ ಅವರು ಬೋಧನೆಗೆ ಸಂಬಂಧಿಸಿದ ವಿಷಯಗಳನ್ನಲ್ಲದೆ ಅದರಲ್ಲಿನ ಸಂತೋಷಗಳನ್ನೂ ಹೋರಾಟಗಳನ್ನೂ ದಾಖಲಿಸುತ್ತಿದ್ದಾರೆ. ಒಬ್ಬ ಶಿಕ್ಷಕನ ದಿನಚರಿಯೆಂದರೆ ಅದು ಭಾವನೆಗಳನ್ನು ಚಿತ್ರಿಸುವ ಬಣ್ಣದ ಲೋಕವೇ ಸರಿ. ಜತೆಗೆ ಅದು ಆತ್ಮಾವಲೋಕನದ ಕಡೆ ಹೊರಳಿಕೊಂಡಾಗ ದಿನದಿನವೂ ಹೊಸತನ್ನು ಕಲಿಯುತ್ತಿರುವ ಶಿಕ್ಷಕನನ್ನು ಪ್ರತಿಬಿಂಬಿಸುತ್ತದೆ. ಸಮೃದ್ಧವಾದ ಒಳನೋಟಗಳನ್ನು ಒಳಗೊಂಡ ಇವುಗಳಲ್ಲಿ ಕೆಲವನ್ನು ಆಯ್ದು ಶಿಕ್ಷಕರ ತರಬೇತಿ ಕಾರ್ಯಕ್ರಮಗಳಲ್ಲಿ ಕಡ್ಡಾಯವಾಗಿ ಶಿಕ್ಷಕರ ಓದಿಗೆ ಕೊಡಬಹುದು. ಸುಮಾರು ಒಂದು ದಶಕದ ಹಿಂದೆ

ಶಿಕ್ಷಕರು ಯಾವುದೇ ಶೈಕ್ಷಣಿಕ ಲೇಖನಗಳನ್ನು ಓದಲು ಹಿಂದೆಮುಂದೆ ನೋಡುತ್ತಿದ್ದರು ಎಂಬುದನ್ನು ಗಮನಿಸಿದರೆ ಪ್ರಗತಿ ಗೋಚರವಾಗುತ್ತದೆ. 2005ರಲ್ಲಿ ಉತ್ತರಕಾಶಿಯ ಶಾಲೆಗಳಿಗೆ 'ಪ್ರವಾಹ್' ಮುಂತಾದ ಪತ್ರಿಕೆಗಳನ್ನು ಕಳುಹಿಸುತ್ತಿದ್ದರು. ಹಲವು ತಿಂಗಳುಗಳಿಗೊಮ್ಮೆ ಶಿಕ್ಷಕರೆಲ್ಲರನ್ನೂ ಸೇರಿಸಿ ಆ ಪತ್ರಿಕೆಯಲ್ಲಿನ ಪ್ರಬಂಧಗಳನ್ನು ಚರ್ಚಿಸುವಂತೆ ಪ್ರೋತ್ಸಾಹಿಸಲಾಗುತ್ತಿತ್ತು. 2017ರ ಹೊತ್ತಿಗೆ ಪ್ರವಾಹ್ ಪತ್ರಿಕೆಯು ಅರವತ್ತನಾಲ್ಕು ಪುಟಗಳ ಪ್ರಕಟಣೆಯಾಗಿ ಬೆಳೆದು, ಅದಕ್ಕೆ ಲೇಖನಗಳನ್ನು ಶಿಕ್ಷಕರೇ ಕೊಡುಗೆಯಾಗಿ ನೀಡತೊಡಗಿದ್ದರು.

ಹಲವು ಶಿಕ್ಷಕರು ನಿರ್ದಿಷ್ಟ ವಿಷಯಗಳಲ್ಲಿ ತಮಗೆ ಇರುವ ಜ್ಞಾನದ ಕೊರತೆಯನ್ನು ನಿರಂತರ ಸ್ವವಿಕಾಸದ ಮೂಲಕ ತುಂಬಿಸಿಕೊಳ್ಳುತ್ತಾರೆ. ಉದಾಹರಣೆಗೆ, ವಿಜ್ಞಾನದ ಬೋಧನೆಯಲ್ಲಿ ಪರಿಣತರು ಎಂದು ಹೆಸರು ಪಡೆದ ಕೆಲವು ಶಿಕ್ಷಕರು ಮೂಲತಃ ವಿಜ್ಞಾನ ವಿಷಯದಲ್ಲಿ ಪದವಿಯನ್ನೇ ಪಡೆದಿರಲಿಲ್ಲ. ಅವರು ಬೋಧನೆಯಲ್ಲಿ ಎಷ್ಟು ಮುತುವರ್ಜಿ ವಹಿಸುತ್ತಿದ್ದಾರೆ ಎಂಬುದು ಪಾಠದ ಬಗ್ಗೆ ಅವರು ಸಿದ್ಧಪಡಿಸುವ ಯೋಜನೆ, ಟಿಪ್ಪಣಿ ಹಾಗೂ ಪ್ರಯೋಗಗಳಿಂದ ಗೊತ್ತಾಗುತ್ತದೆ. ಅನೇಕ ಶಿಕ್ಷಕರು ದೂರ–ಶಿಕ್ಷಣದ ಕೋರ್ಸ್‌ಗಳ ಮೂಲಕ ಮತ್ತಷ್ಟು ಶೈಕ್ಷಣಿಕ ವಿದ್ಯಾರ್ಹತೆಯನ್ನು ಗಳಿಸಿಕೊಂಡಿದ್ದಾರೆ. ಈ ಶಿಕ್ಷಕರು ನನ್ನೊಡನೆ ತಮ್ಮ ವ್ಯಕ್ತಿತ್ವವನ್ನು ಬಿಚ್ಚಿಕೊಂಡ ಪರಿ ಅನನ್ಯವಾಗಿತ್ತು, ಅದರಲ್ಲಿ ಮುಚ್ಚುಮರೆಯಾಗಲಿ ಕಪಟವಾಗಲಿ ಇರಲಿಲ್ಲ; "ನಮ್ಮ ಶಾಲೆ ಈಗ ಏನೋ "ಬಿ" ವರ್ಗದಲ್ಲಿರಬಹುದು, ಅದು ಬೇಗನೆ "ಎ" ವರ್ಗ ಪಡೆಯಬಹುದು" ಎಂಬ ವಿಶ್ವಾಸ ಅವರದ್ದು. ತಮ್ಮದಕ್ಕಿಂತ ಒಳ್ಳೆಯದಾದ ಶಾಲೆಗಳು ಕಡಿಮೆಯೆಂದರೆ ಇಪ್ಪತ್ತಾದರೂ ಇವೆ ಎಂದು ಅವರು ಪ್ರಾಂಜಲವಾಗಿ ಒಪ್ಪಿಕೊಂಡು ಕೆಲವು ಹೆಸರುಗಳನ್ನೂ ಹೇಳಿದರು. "ನೀವು ಅಲ್ಲಿಗೆ ಖಂಡಿತಾ ಹೋಗಬೇಕು" ಎಂಬ ಮಾತನ್ನೂ ಸೇರಿಸಿದರು. ತಮಗೆ ವಿಷಯ ಜ್ಞಾನದ ಕೊರತೆ ಇರುವುದು, ಇಂಗ್ಲಿಷ್ ಪಾಠ ಮಾಡುವ ಸಾಮರ್ಥ್ಯ ಸಾಕಷ್ಟು ಇಲ್ಲದೇ ಇರುವುದು, ಇದಾವುದನ್ನೂ ಮುಚ್ಚಿಡಲಿಲ್ಲ. ತಮ್ಮ ಶಾಲೆ ಸಂಪನ್ಮೂಲಕ್ಕಾಗಿ ಹೋರಾಟ ನಡೆಸಬೇಕಾದ ಪರಿಸ್ಥಿತಿಯನ್ನೂ ಹೇಳಿದರು. ಅವರ ಮಾತಿನುದ್ದಕ್ಕೂ ಶಾಲೆಯ ಬಗೆಗಿನ ಹೆಮ್ಮೆ, 'ಇದು ನನ್ನದು' ಎಂಬ ಪ್ರೀತಿ ಧಾರಾಳವಾಗಿ ಒಸರುತ್ತಿದ್ದುದನ್ನು ಗಮನಿಸದೆ ಇರಲಾಗಲಿಲ್ಲ. ತಮ್ಮ ಶಾಲೆಯ ಮಕ್ಕಳು ಒಳ್ಳೆಯ ಶಿಕ್ಷಣ ಪಡೆಯುತ್ತಿದ್ದಾರೆ ಎಂಬ ವಿಶ್ವಾಸ ಅವರಲ್ಲಿತ್ತು. ಊರಿನ ಜನ ಅದನ್ನು ಬೇಗನೆ ಕಂಡುಕೊಳ್ಳುವರೆಂಬ ಆಶಾವಾದವೂ ಅವರಲ್ಲಿತ್ತು; ಅದನ್ನು ಅವರು ವ್ಯಕ್ತಪಡಿಸಿದ ರೀತಿ ಹೀಗಿತ್ತು: "ನೀವು ನೋಡುತ್ತಾ ಇರಿ, ಅಲ್ಲಿಗೆ ಹೋದ ಮಕ್ಕಳು ಇಲ್ಲಿಗೇ ವಾಪಸ್ ಬರುತ್ತಾರೆ."

ಇಲ್ಲಿನ ಮಕ್ಕಳ ಕಲಿಕೆಯ ಮಟ್ಟ ಸುಧಾರಿಸಿದೆಯೇ ಎಂಬ ಪ್ರಶ್ನೆಗೆ ಈ ಎಲ್ಲಾ ಶಾಲೆಗಳಲ್ಲಿ ನಮಗೆ ಸಿಕ್ಕ ಉತ್ತರ ಧನಾತ್ಮಕ. ಮಕ್ಕಳ ಕೈಬರಹ ದುಂಡಗಿತ್ತು. ಅವರಿಗೆ ಹೊಸ ವಾಕ್ಯಗಳನ್ನು ಪೂರ್ತಿಯಾಗಿ ಓದಲು, ಬರೆಯಲು ಬರುತ್ತಿದ್ದವು. ಕ್ರಮವಿಧಿ ಸಮಸ್ಯೆ ಬಿಡಿಸುವುದು ಮಾತ್ರವಲ್ಲದೆ ಮನಸ್ಸಿನಲ್ಲೇ ಗುಣಾಕಾರ, ಭಾಗಾಕಾರ, ಮಾಡುವ

ಸಾಮರ್ಥ್ಯವೂ ಸೇರಿ ಶಬ್ದ ರಚನೆಯ ಸಮಸ್ಯೆ ಬಗೆಹರಿಸುವುದು ಇತ್ಯಾದಿ ತಿಳಿದಿದ್ದವು. ಉನ್ನತ ಮಟ್ಟದ ಆಲೋಚನಾ ಕ್ರಮ ಅವರಿಗೆ ಸಿದ್ಧಿಸಿದಂತಿತ್ತು. ಹೆಚ್ಚು ಬುದ್ಧಿಶಾಲಿ ಮಕ್ಕಳು ಇತರ ಮಕ್ಕಳಿಗೆ ಸಹಾಯ ಮಾಡುವುದನ್ನು ಗಮನಿಸಿದೆವು. ಶಿಕ್ಷಕರಿಗೆ ಪ್ರತಿಯೊಂದು ವಿಷಯಕ್ಕೆ ಸಂಬಂಧಪಟ್ಟಂತೆ ಪ್ರತಿ ವಿದ್ಯಾರ್ಥಿಯ ಕಲಿಕೆಯ ಮಟ್ಟದ ಬಗ್ಗೆ ಅರಿವಿತ್ತು. ನಿರಂತರ ಸಮಗ್ರ ಮೌಲ್ಯಮಾಪನವನ್ನು (ಅಅಇ–ಪದಕೋಶ ನೋಡಿ) ಅನೇಕ ಶಿಕ್ಷಕರು ಅದರ ನೈಜ ಅರ್ಥದಲ್ಲಿ ಅನುಷ್ಠಾನಗೊಳಿಸುತ್ತಿದ್ದರು. ಅವರು ನಿಗದಿತ ಚೌಕಟ್ಟನ್ನೂ ಮೀರಿ ಮಗುವಿನ ಕಲಿಕೆಯನ್ನು ಕುರಿತಾದ ತಮ್ಮ ಒಳನೋಟಗಳನ್ನೂ ದಾಖಲಿಸುತ್ತಿದ್ದರು; ಮಗುವಿಗೆ ಬೇಕಾದ ಹೆಚ್ಚಿನ ಗಮನವನ್ನೂ ಬೆಂಬಲವನ್ನೂ ನೀಡಲು ಅದನ್ನು ಬಳಸುತ್ತಿದ್ದರು. ಶಾಲೆಗಳು ಸಮಾಜದ ನಿಜವಾದ ಸೂಕ್ಷ್ಮ ಪ್ರತಿಬಿಂಬ ಅನ್ನುತ್ತಾರೆ; ನಾನು ಭೇಟಿ ನೀಡಿದ ಶಾಲೆಗಳಂತೂ ಸಮತಾಭಾವಕ್ಕೂ ಗುಣಮಟ್ಟಕ್ಕೂ ಮತ್ತೆ ಸ್ಥಾನವನ್ನು ತಂದುಕೊಟ್ಟಿದ್ದವು. ಮಾತ್ರವಲ್ಲದೆ ಪ್ರತಿಯೊಂದು ಮಗುವಿಗೂ ನಮ್ಮ ಶಿಕ್ಷಣ ವ್ಯವಸ್ಥೆ ಗುಣಮಟ್ಟದ ಶಾಲಾ ಶಿಕ್ಷಣವನ್ನು ಒದಗಿಸುವುದೆಂಬ ಭರವಸೆಯನ್ನು ತುಂಬಿದವು.

ನಮ್ಮ ದೇಶದ ಶಿಕ್ಷಣ ವ್ಯವಸ್ಥೆಯ ಸಂಕೀರ್ಣ ಸ್ವರೂಪವನ್ನು ಸಹ ಗಣನೆಗೆ ತೆಗೆದುಕೊಳ್ಳಬೇಕು. ಒಂದೆಡೆಯಲ್ಲಿ ಸಾಮಾಜಿಕ–ಆರ್ಥಿಕ ಪಲ್ಲಟವು ಸಾರ್ವಜನಿಕ ಮತ್ತು ಖಾಸಗಿ ಶಾಲೆಗಳ ನಡುವೆ ದೊಡ್ಡದಾದ ಅಂತರವನ್ನು ಸೃಷ್ಟಿಸುತ್ತಿದೆ. ಇನ್ನೊಂದೆಡೆ ವೈವಿಧ್ಯಗಳ ಈ ವಿಶಾಲ ದೇಶದಲ್ಲಿ ಒಂದು ದಶಲಕ್ಷಕ್ಕೂ ಹೆಚ್ಚಿನ ಶಾಲೆಗಳನ್ನು ನಡೆಸಬೇಕಾದ ಹೊಣೆಗಾರಿಕೆ ಇದೆ. ಒಂದು ಜಿಲ್ಲೆಯ ಒಂದು ಬ್ಲಾಕ್ ಅಥವಾ ತಾಲ್ಲೂಕು ಸುಮಾರು ಇನ್ನೂರೈವತ್ತು ಪ್ರಾಥಮಿಕ ಶಾಲೆಗಳನ್ನು ಹೊಂದಿರುತ್ತದೆ; ಅವುಗಳಲ್ಲಿ ಒಂದು ಸಾವಿರ ಶಿಕ್ಷಕರು ಕಾರ್ಯನಿರ್ವಹಿಸುತ್ತಾರೆ. ಒಂದು ಸಾಮಾನ್ಯ ಜಿಲ್ಲೆಯು ಆ ರೀತಿಯ ಆರೇಳು ಬ್ಲಾಕ್‌ಗಳನ್ನು ಒಳಗೊಂಡಿದ್ದು ಸುಮಾರು ಎರಡು ಸಾವಿರ ಶಾಲೆಗಳನ್ನು ಹೊಂದಿರುತ್ತದೆ. ಸ್ಕ್ಯಾಂಡಿನೇವಿಯನ್ ದೇಶಗಳನ್ನು ಸಾರ್ವಜನಿಕ ಶಿಕ್ಷಣ ಕ್ಷೇತ್ರದಲ್ಲಿ ಅನುಕರಣೀಯವೆಂದು ಪರಿಗಣಿಸಲಾಗಿರುವುದರಿಂದ, ಭಾರತದಲ್ಲಿನ ಒಂದು ವಿಶಾಲವಾದ ಜಿಲ್ಲೆಯಲ್ಲಿರುವ ಪ್ರಾಥಮಿಕ ಶಾಲೆಗಳ ಸಂಖ್ಯೆಯು, ನಾರ್ವೇ ದೇಶದ ಒಟ್ಟು ಶಾಲೆಗಳ ಸಂಖ್ಯೆಗೆ ಸಮನಾಗುತ್ತದೆಂಬುದು ಇಲ್ಲಿ ಪ್ರಸ್ತುತವಾಗುತ್ತದೆ. ನಮ್ಮ ಗ್ರಾಮೀಣ ಪ್ರದೇಶದ ಒಂದು ಬ್ಲಾಕ್‌ನ ಅಧಿಕಾರಿಗಳೊಡನೆ ಯಾರೇ ಆದರೂ ಒಂದಿಷ್ಟು ಸಮಯವನ್ನು ಕಳೆದರೆ ಅವರುಗಳು ಅಲ್ಲಿ ನಿರ್ವಹಿಸಬೇಕಾದ ಕಾರ್ಯಬಾಹುಳ್ಯವನ್ನು ತಿಳಿಯಬಹುದಾಗಿದೆ. ನಾನು ಒಮ್ಮೆ ಓರ್ವ ಕ್ಷೇತ್ರ ಶಿಕ್ಷಣಾಧಿಕಾರಿಯ ಜತೆಗೆ (BEO) ಹಲವಾರು ದಿನಗಳನ್ನು ಕಳೆದೆ. ಅವರ ದಿನಚರಿ ಹಾಗೂ ಅವರ ಮೇಲಿರುವ ಕಾರ್ಯಭಾರದ ಒತ್ತಡವನ್ನೂ ತಿಳಿದುಕೊಳ್ಳಲು ಅವರನ್ನು ನೆರಳಿನಂತೆ ಹಿಂಬಾಲಿಸಿದೆ. ಅವರ ಅಮೂಲ್ಯವಾದ ದಿನದಲ್ಲಿ ಒಂದು ನಿಮಿಷವನ್ನು ಕೂಡ ಅವರು ಪೋಲು ಮಾಡಲಿಲ್ಲ. ಜೀಪೊಂದನ್ನು ತಾವೇ ಚಲಾಯಿಸುತ್ತ ಅವರು ಆ ಬ್ಲಾಕ್‌ನಲ್ಲಿ ಹಲವಾರು ಶಾಲೆಗಳಿಗೆ ಭೇಟಿ ನೀಡಿದರು.

ಎಲ್ಲಾ ಕಡೆ ಸಭೆಗಳನ್ನು ನಡೆಸಿದರು. ಜೊತೆಗೆ ತಮ್ಮ ಕಛೇರಿಯ ಸಿಬ್ಬಂದಿಗಳೊಡನೆ ಮೊಬೈಲ್ ಮೂಲಕ ಸಂಪರ್ಕದಲ್ಲಿರುತ್ತಿದ್ದರು. ಅವರ ಬಿಳಿ ಬಣ್ಣದ ಷರಟು ಮಧ್ಯಾಹ್ನದ ಹೊತ್ತಿಗೆ ಮಾಸಿ ಕಂದು ಬಣ್ಣಕ್ಕೆ ತಿರುಗುತ್ತಿತ್ತು. ಅದಕ್ಕಿಂತಲೂ ಹೆಚ್ಚು ಕಷ್ಟಪಟ್ಟು ಕೆಲಸ ಮಾಡುವುದು ಅಂದರೆ ಏನು ಎಂದು ನನಗೆ ತಿಳಿಯದು. ಈ ಕ್ಷೇತ್ರ ಶಿಕ್ಷಣಾಧಿಕಾರಿ ವಿರಳರಲ್ಲಿ ವಿರಳರು. ಅವರ ಬಹುತೇಕ ಇತರ ಸಹೋದ್ಯೋಗಿಗಳು ರಾಜಕೀಯ ಎಳೆತ– ಸೆಳೆತಗಳಿಗೂ ಒತ್ತಡಕ್ಕೂ ಸಿಲುಕಿ ನಲುಗುತ್ತಾರೆ. ನಿಸ್ಪೃಹ, ಪರಿಣತ ಹಾಗೂ ಸಹೃದಯಿ ಅಧಿಕಾರಿಗಳನ್ನೂ ಈ ಶ್ರೇಣೀಕೃತ ವ್ಯವಸ್ಥೆಯು ಉಸಿರು ಕಟ್ಟುವಂತೆ ಮಾಡುತ್ತದೆ. ಇದರ ಪರಿಣಾಮವಾಗಿ ಅನೇಕರು ತಮ್ಮ ಸುಪರ್ದಿಯ ಶಾಲೆಗಳು ಹಾಗೂ ಶಿಕ್ಷಕರಿಗೆ ಸಾಕಷ್ಟು ಗಮನ ನೀಡಲು ಅಸಮರ್ಥರಾಗಿದ್ದಾರೆ.

ಉತ್ತಮ ಶಿಕ್ಷಕರು ಈ ನಿರ್ಬಂಧಗಳ ನಡುವೆಯೇ ತಮಗೆ ಸಾಧ್ಯವಾಗುವ ಒಳ್ಳೆ ಕಾರ್ಯ ಮಾಡುತ್ತಾರೆ. ಆದರೆ ಈ ದೀರ್ಘವಾದ ಪ್ರಯಾಸದ ಪ್ರಯಾಣದಲ್ಲಿ ಸಂಪನ್ಮೂಲಗಳ ಕೊರತೆಯ ಜೊತೆಗೆ, ಸಾಕಷ್ಟು ಆಡಳಿತಾತ್ಮಕ ಹಾಗೂ ಶೈಕ್ಷಣಿಕ ಬೆಂಬಲವೂ ಇಲ್ಲದೆ ಕಾಲ ಸರಿದಂತೆ ಬಳಲಿ ಬೆಂಡಾಗುವ ಸ್ಥಿತಿಗೆ ತಲುಪಿ ಅವರಲ್ಲನೇಕರು ನಿರಾಶೆಗೆ ಶರಣಾಗುತ್ತಾರೆ. ಬೇರೆಲ್ಲ ವೃತ್ತಿಗಳಿಗಿಂತ ಶಿಕ್ಷಕ ವೃತ್ತಿ ಸಾಕಷ್ಟು ಭಿನ್ನವಾಗಿರುತ್ತದೆ. ಪ್ರತಿ ತರಗತಿಯೂ ಭಿನ್ನವಾಗಿರುತ್ತದೆ. ಪ್ರತಿ ವಿದ್ಯಾರ್ಥಿ ಸಮೂಹವೂ ಭಿನ್ನವಾಗಿರುತ್ತದೆ. ಪ್ರತಿದಿನವೂ ಭಿನ್ನವಾಗಿರುತ್ತದೆ. ಶಿಕ್ಷಕರು ತರಗತಿಗೆ ಪ್ರತಿದಿನವೂ ಹೊಸ ಚೈತನ್ಯವನ್ನು ತುಂಬಬೇಕಾದದ್ದು ಅವರ ವೃತ್ತಿಯ ಅನನ್ಯ ಅಗತ್ಯವಾಗಿರುತ್ತದೆ. ಅವರು ಏಕಕಾಲದಲ್ಲಿ ಅನೇಕ ಪ್ರಯಾಸದ ಹೊಣೆಗಾರಿಕೆಗಳನ್ನು ಪೂರೈಸುವ ಕಾರ್ಯಗಳಲ್ಲಿ ತೊಡಗಿರುತ್ತಾರೆ. ಖಾಸಗಿ ಶಾಲೆಗಳಿಂದ ಮಕ್ಕಳನ್ನು ಮರಳಿ ತಮ್ಮ ಶಾಲೆಗೆ ಸೆಳೆಯುವುದು, ಸಮುದಾಯದೊಡನೆ ಸಂಬಂಧಗಳನ್ನು ಬೆಸೆಯುತ್ತಾ ಇರುವ ಸಂಬಂಧವನ್ನು ಬಲಪಡಿಸುವುದು, ಶಾಲೆಯ ಗುರಿಗಳನ್ನು ಹಾಗೂ ಕಾಣ್ಕೆಗಳನ್ನು ಪೋಷಕರಿಗೆ ದಾಟಿಸುವುದು, ಪೋಷಕರು ಶಾಲಾ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದನ್ನು ಖಾತ್ರಿಪಡಿಸಿಕೊಂಡು ಮಕ್ಕಳ ಪ್ರಗತಿಯ ಬಗ್ಗೆ ಆಗಿಂದಾಗ್ಗೆ ತಿಳಿಸಿ ಹೇಳುವುದು, ಈ ಪ್ರಕ್ರಿಯೆಯಲ್ಲಿ ಪೋಷಕರೊಂದಿಗೆ ಶಾಲೆಯ ಸಂಬಂಧವನ್ನು ಬಲಪಡಿಸುವುದು. ಇವೆಲ್ಲವನ್ನೂ ಮಾಡುತ್ತಲೇ ಪೋಷಕರಿಗೆ ನೀಡಿರುವ ಮೂಲ ಭರವಸೆಯಾದ ಮಕ್ಕಳ ಸುರಕ್ಷತೆ ಮತ್ತು ಕಲಿಕೆ ಇವುಗಳನ್ನು ಈಡೇರಿಸಲು ಶ್ರಮ ಪಡುತ್ತಿರುತ್ತಾರೆ. ನೈರಾಶ್ಯ ಕಾಡಿದಾಗ ಶಾಲೆಗಳಿಗೆ ಶ್ರದ್ಧಾವಂತ ಶಿಕ್ಷಕರು ಮತ್ತು ಮುಖ್ಯ ಶಿಕ್ಷಕರು ಹೊತ್ತು ತರುವ ಈ ಚೈತನ್ಯ ಮತ್ತು ಉತ್ಸಾಹಗಳು ಬತ್ತಿ ಹೋಗುತ್ತವೆ. "ಯಾರಿಗೂ ನನ್ನ ಬಗ್ಗೆ ಕಾಳಜಿ ಇಲ್ಲ" ಅಥವಾ "ನಾನೊಬ್ಬನೇ ಯಾಕೆ ಏಗಬೇಕು" ಎಂಬ ಭಾವನೆಗೆ ಅವರು ತುತ್ತಾದಾಗ ಹೀಗಾಗುತ್ತದೆ.

ಇಂತಹ ಶಿಕ್ಷಕರಿಗೆ ವ್ಯವಸ್ಥೆಯ ಬೆಂಬಲದ ಅಗತ್ಯವಿದೆ. ಅವರಿಗೆ ಬೆಂಬಲವು ಬ್ಲಾಕ್ ಮತ್ತು ಜಿಲ್ಲಾ ಮಟ್ಟಗಳ ಮೇಲುಸ್ತುವಾರಿ ಅಧಿಕಾರಿಗಳಿಂದ ಬರಬೇಕು; ಅವರ ಸೇವೆಯನ್ನು ಪಡೆದುಕೊಳ್ಳುತ್ತಿರುವ ಸಮಾಜದಿಂದ ದೊರೆಯಬೇಕು. ಹತಾಶೆಯಿಂದ

ಪುಟಿದೇಳಬಲ್ಲ ಸಾಮರ್ಥ್ಯವಿರುವ ಈ ಶಿಕ್ಷಕರಿಗೆ ಬೇಕಾಗಿರುವುದು ಪರಿಶ್ರಮಕ್ಕೆ ಸ್ವಲ್ಪ ಮನ್ನಣೆ ಮತ್ತು 'ನಾವು ನಿಮ್ಮ ಬೆಂಬಲಕ್ಕಿದ್ದೇವೆ' ಎಂಬುದನ್ನು ತೋರಿಸುವಂತಹ, ವ್ಯವಸ್ಥೆಯನ್ನು ಸುಧಾರಿಸುವ ಚಿಕ್ಕಪುಟ್ಟ ಕ್ರಮಗಳು. ಈ ನಿಟ್ಟಿನಲ್ಲಿ ಬ್ಲಾಕ್ ಶಿಕ್ಷಣಾಧಿಕಾರಿಗಳೂ ಜಿಲ್ಲಾ ಸಾರ್ವಜನಿಕ ಶಿಕ್ಷಣಾಧಿಕಾರಿಗಳೂ ಯಾವ ಕ್ರಮಗಳನ್ನು ಕೈಗೊಳ್ಳಬಹುದು? ಕೆಲವು ಮಂದಿ ಶಿಕ್ಷಕರಿಂದ ಹಾಗೂ ಮುಖ್ಯ ಶಿಕ್ಷಕರಿಂದ ಬಂದ ಕೆಲವು ಸಲಹೆಗಳು ಹೀಗಿವೆ. ಈ ಸಲಹೆಗಳು ತೀರಾ ಸಾಮಾನ್ಯವೆಂಬಂತೆ ಕಾಣಿಸಬಹುದಾದರೂ ಅವುಗಳ ಶಕ್ತಿಯು ಅವುಗಳ ಸರಳತೆಯಲ್ಲಡಗಿದೆ:

✳ ಇಂಥ ಅನೇಕ ಶಾಲೆಗಳಿಗೆ ಬೋಧನೆಯನ್ನೂ ಕಲಿಕೆಯ ಸೌಲಭ್ಯಗಳನ್ನೂ ಸುಧಾರಿಸಲು ತುರ್ತಾಗಿ ಹೆಚ್ಚಿನ ಶಿಕ್ಷಕರ ಅಗತ್ಯವಿದೆ. ಸಂಪನ್ಮೂಲಗಳಿಗಾಗಿ ಅವರು ಕಾಡಿ ಬೇಡುವಂತಾಗಬಾರದು. ವಿಶೇಷವಾಗಿ ಕಾರ್ಯಕ್ಷಮತೆಯನ್ನು ಸಾಧಿಸಿ ತೋರಿಸಿರುವ ಶಾಲೆಗಳಲ್ಲಿ ಇಂತಹ ಪರಿಸ್ಥಿತಿಗೆ ಅವಕಾಶವಿರಬಾರದು.

✳ ಅನೇಕ ಹಳ್ಳಿಗಳಲ್ಲಿ ಮುಖ್ಯ ಶಿಕ್ಷಕರು ಶಾಲೆಯ ಅಭಿವೃದ್ಧಿಗಾಗಿ ಸಮುದಾಯದ ವಿಭಿನ್ನ ಹಿತಾಸಕ್ತಿಗಳುಳ್ಳ ವ್ಯಕ್ತಿಗಳನ್ನು ಒಗ್ಗೂಡಿಸುವ ಯತ್ನದಲ್ಲಿ ಶಕ್ತಿ ಮೀರಿ ಶ್ರಮಿಸಿ ಹೈರಾಣಾಗಿದ್ದಾರೆ. ಇಂಥ ಸಂದರ್ಭದಲ್ಲಿ ಓರ್ವ ಮೇಲಧಿಕಾರಿ ಮುಖ್ಯ ಶಿಕ್ಷಕರಿಗೆ ಸಹಾಯ ಮಾಡಬೇಕು.

✳ ಒಳ್ಳೆಯ ಶಾಲೆಗಳು, ಬಹುತೇಕ ಸಂದರ್ಭಗಳಲ್ಲಿ ಮುಖ್ಯ ಶಿಕ್ಷಕರ ಸಕ್ರಿಯ ನಾಯಕತ್ವದ ಫಲವಾಗಿ ಚಲನಶೀಲವಾಗಿರುತ್ತವೆ. ಅಂತಹ ಶಾಲಾ ನಾಯಕರನ್ನು ವರ್ಗಾವಣೆ ಮಾಡಿದಾಗ ಆ ಸ್ಥಾನಕ್ಕೆ ಅವರಿಗಿಂತ ಕಡಿಮೆ ಸಾಮರ್ಥ್ಯದ ವ್ಯಕ್ತಿ ಬಂದ ಸಂದರ್ಭದಲ್ಲಿ ಬ್ಲಾಕ್ ಶಿಕ್ಷಣಾಧಿಕಾರಿಯು ಅವರಿಗೆ ಸಲಹೆ, ಸೂಚನೆಗಳನ್ನು ನೀಡಿ ಬೆಂಬಲವಾಗಿ ನಿಂತು ಶಾಲೆಯ ಗುಣಮಟ್ಟ ಕುಸಿಯದಿರುವಂತೆ ನೋಡಿಕೊಳ್ಳಬೇಕು.

✳ ಎಲ್ಲ ಶಿಕ್ಷಕರೂ ಸಮುದಾಯದ ವಿಶ್ವಾಸ ಮತ್ತು ಭರವಸೆಯನ್ನು ಗಳಿಸಿಕೊಳ್ಳುವ ಮಹತ್ವದ ಬಗ್ಗೆ ಮಾತನಾಡಿದ್ದಾರೆ. ಖಾಸಗಿ ಶಾಲೆಗಳಿಂದ ಮಕ್ಕಳನ್ನು ಹಿಂದಕ್ಕೆ ಕರೆಸಿಕೊಂಡು ದಾಖಲಾತಿಯನ್ನು ಹೆಚ್ಚಿಸಬೇಕೆಂದು ಅವರೆಲ್ಲ ಹೇಳುತ್ತಾರೆ. ಈ ಕಾರ್ಯವನ್ನು ಮಾಡಿದರೆ ಮಾತ್ರ ತಮ್ಮ ಶಾಲೆ ಉತ್ತಮವೆಂದು ಸಮುದಾಯ ಸ್ವೀಕರಿಸಿದಂತೆ ಎಂದು ಅವರು ಭಾವಿಸುತ್ತಾರೆ. ಐದು ಉತ್ತಮ ಶಾಲೆಗಳಲ್ಲಿ ಒಂದು ಶಾಲೆ ಮಾತ್ರ ತನ್ನ ಗುಣಮಟ್ಟ ಹಾಗೂ ಸಾಮರ್ಥ್ಯದ ಬಗ್ಗೆ ಪರಿಣಾಮಕಾರಿಯಾಗಿ ಸಮುದಾಯಕ್ಕೆ ತಿಳಿಸುವ ನೈಪುಣ್ಯವನ್ನು ಹೊಂದಿರುತ್ತದೆ. ಇತರ ಶಾಲೆಗಳಿಗೆ ಈ ನಿಟ್ಟಿನಲ್ಲಿ ನೆರವಿನ ಆವಶ್ಯಕತೆಯಿದೆ. ಈ ಕಾರ್ಯವನ್ನು ಕೈಗೊಳ್ಳಲು ಬ್ಲಾಕ್ ಶಿಕ್ಷಣಾಧಿಕಾರಿಗಳೂ ಅವರ ತಂಡದವರೂ ಆಂದೋಲನವೊಂದನ್ನು ರೂಪಿಸಬಹುದು. ಬಹುತೇಕ ಶಾಲೆಗಳು ಈಗಾಗಲೇ ತಮ್ಮ ವಾರ್ಷಿಕೋತ್ಸವವನ್ನೂ ಸ್ವಾತಂತ್ರ್ಯ ದಿನಾಚರಣೆಯನ್ನೂ ಉತ್ತಮ ವೇದಿಕೆಗಳನ್ನಾಗಿ ಬಳಸಿಕೊಂಡು ಮಕ್ಕಳ ಕಲಿಕೆ ಹಾಗೂ ಪ್ರತಿಭೆಗಳನ್ನು ಸಮುದಾಯದ ಮುಂದೆ ಪ್ರದರ್ಶಿಸುತ್ತಿದೆ. ಜನ

*ನಕ್ಷೆ 2: ದಾಖಲಾತಿ ಮತ್ತು ಉಳಿಸಿಕೊಳ್ಳುವುದರಲ್ಲಿ ಗಣನೀಯ ಪ್ರಮಾಣದ ಸುಧಾರಣೆ*




*ಮೂಲ : ದತ್ತಾಂಶವನ್ನು ಈ ಲೇಖಕರು ಭೇಟಿ ನೀಡಿದ ಶಾಲೆಗಳಿಂದ ಸಂಗ್ರಹಿಸಲಾಗಿದೆ*

ಸೇರುವ ಇಂತಹ ಸಂದರ್ಭಗಳಲ್ಲಿ ಅಧಿಕಾರಿಗಳು ಹಾಜರಿದ್ದರೆ ಸರ್ಕಾರಿ ಶಾಲೆಗಳಿಗೆ ತಮ್ಮ ಮಕ್ಕಳನ್ನು ಸೇರಿಸಲು ಪೋಷಕರಿಗೆ ಪ್ರೇರಣೆ ದೊರೆಯುತ್ತದೆ. ಒಳ್ಳೆಯ ಶಾಲೆಗಳನ್ನು ಅವುಗಳ ಪಾಡಿಗೆ ಬಿಟ್ಟು ಬಿಡುವ ಬದಲು ಸರ್ಕಾರದ ಅಧಿಕಾರಿಗಳೂ ತಳಮಟ್ಟದಲ್ಲಿ ಕಾರ್ಯೋನ್ಮುಖವಾಗಿರುವ ಸರ್ಕಾರೇತರ ಸಂಸ್ಥೆಗಳೂ ಪ್ರಚಾರಾಂದೋಲನಕ್ಕೆ ಅಗತ್ಯವುಳ್ಳ ಮಾಹಿತಿ ಹಾಗೂ ಸಾಮಗ್ರಿಗಳನ್ನು ಒದಗಿಸಿ ಬೆಂಬಲಿಸಬೇಕು. ಇವುಗಳ ಮೂಲಕ ಪ್ರಚಾರವನ್ನು ಸೃಷ್ಟಿಸಿ ದಾಖಲಾತಿಯನ್ನು ಹೆಚ್ಚಿಸಿಕೊಳ್ಳಲು ನೆರವಾಗಬೇಕು. ಇಂತಹ ಪ್ರಚಾರಾಂದೋಲನಗಳು ಈ ಕೆಳಗಿನ ಅಂಶಗಳನ್ನೊಳಗೊಂಡಿರಬಹುದು:

* ಮಕ್ಕಳ ಸಾಧನೆಯ ಬಗೆಗೆ ಬದ್ಧತೆಯ ಭರವಸೆಯನ್ನು ಕೊಡುವ, ಸರಳ ಭಾಷೆಯಲ್ಲಿ ಇರುವ ಭಿತ್ತಿಪತ್ರವೊಂದನ್ನು ಶಾಲೆಯಲ್ಲಿ ಹಾಗೂ ಊರ ಚೌಕದಲ್ಲಿ ಎಲ್ಲರಿಗೂ ಕಾಣಿಸುವಂತೆ ಪ್ರದರ್ಶಿಸುವುದು. ಇದು ಬಲು ಸುಲಭವಾಗಿ ಮಾಡಬಹುದಾದ ಕಾರ್ಯ. ಈಚೆಗೆ ಕರ್ನಾಟಕದ ಶಿಕ್ಷಣ ಇಲಾಖೆ ಇಂತಹ ಭಿತ್ತಿಪತ್ರವೊಂದನ್ನು ಹೊರತಂದಿದೆ.
* ಸ್ವತಂತ್ರವಾದ ರಾಷ್ಟ್ರೀಯ ಅಥವಾ ರಾಜ್ಯಮಟ್ಟದ ಶಾಲಾಗುಣಮಟ್ಟ ಮೌಲ್ಯಮಾಪನ ಫಲಿತಾಂಶಗಳನ್ನು ಮಕ್ಕಳ ಕಲಿಕೆಯ ಪ್ರಗತಿಯ ಪುರಾವೆಯೆಂದು ಪ್ರಕಟಿಸಿ ಪ್ರದರ್ಶಿಸಬೇಕು. ಅಲ್ಲದೆ ಸಮುದಾಯದ ದೃಷ್ಟಿಯಲ್ಲಿ ಬಹುದೊಡ್ಡ ಸಾಧನೆ ಎಂದು ಪರಿಗಣಿತವಾಗಿರುವ ನವೋದಯ ವಿದ್ಯಾಲಯ ಮತ್ತು ಮೊರಾರ್ಜಿ ದೇಸಾಯಿ ಶಾಲೆಗಳಲ್ಲಿ ತಮ್ಮ ಶಾಲೆಯಿಂದ ಪ್ರವೇಶ ಗಳಿಸಿರುವ (ಈ ಶಾಲೆಗಳ ಬಗ್ಗೆ ಹೆಚ್ಚಿನ ಮಾಹಿತಿಗಾಗಿ ಪದಸೂಚಿಯನ್ನು ನೋಡಿ) ಮಕ್ಕಳ ಪಟ್ಟಿಯನ್ನು ಸಹ ಪ್ರಕಟಿಸಿ ಪ್ರದರ್ಶಿಸಬೇಕು.
* ಬ್ಲಾಕ್ ಮತ್ತು ಜಿಲ್ಲಾಮಟ್ಟದ ಕ್ರೀಡೆ, ಸಂಗೀತ, ಕಲೆ, ಚರ್ಚಾ ಸ್ಪರ್ಧೆ, ಪ್ರಬಂಧ ಬರಹ, ವಿಜ್ಞಾನ–ಗಣಿತ ಮುಂತಾದ ಸ್ಪರ್ಧೆಗಳಲ್ಲಿ ಶಾಲೆ ಮಾಡಿದ ಸಾಧನೆಗಳನ್ನು ಪ್ರಚುರಪಡಿಸಬೇಕು.
* ಶಾಲಾ ಉತ್ಸವ/ಮೇಳ ಮುಂತಾದ ದೊಡ್ಡ ಕಾರ್ಯಕ್ರಮಗಳಲ್ಲಿ ವಿಜ್ಞಾನ, ಇತಿಹಾಸ ಮತ್ತು ರಾಜ್ಯಶಾಸ್ತ್ರಗಳ ನಿರ್ದಿಷ್ಟ ವಿಷಯಗಳನ್ನು ಆಯ್ಕೆ ಮಾಡಿಕೊಂಡು ಅವುಗಳಲ್ಲಿ ಮಕ್ಕಳ ಕಲಿಕೆ ಮತ್ತು ಕೌಶಲಗಳನ್ನು ಜನರಿಗೆ ಅನಾವರಣಗೊಳಿಸಬೇಕು.
* ಬೆಳಗಿನ ಶಾಲಾ ಪ್ರಾರ್ಥನೆಯ ಸಂದರ್ಭದಲ್ಲಿ ಸಮುದಾಯದವರನ್ನು ಆಮಂತ್ರಿಸಿ ಮಕ್ಕಳ ಸರ್ವಾಂಗೀಣ ಬೆಳವಣಿಗೆಗೆ ಶಾಲಾಸಿಬ್ಬಂದಿ ನೀಡುವ ಗಮನವು ಅವರ ಗಮನಕ್ಕೆ ಬರುವಂತೆ ಮಾಡಬೇಕು. ಈ ಮೂಲಕ ತರಗತಿ ಕೊಠಡಿಗಳು, ಗ್ರಂಥಾಲಯ, ತೋಟ, ಅಡುಗೆ ಮನೆ, ಶೌಚಾಲಯ ಇವೆಲ್ಲ ಸುಸ್ಥಿತಿಯಲ್ಲಿರುವುದನ್ನು ಅವರೇ ವೀಕ್ಷಿಸುವಂತಾಗುತ್ತದೆ.

ಈ ಎಲ್ಲ ಚಟುವಟಿಕೆಗಳ ಒಟ್ಟು ಸ್ವರೂಪವು ಶಾಲೆಯನ್ನು ಹೇಗೆ ನಡೆಸಲಾಗುತ್ತಿದೆ

ಎಂಬ ಚಿತ್ರಣವನ್ನು ನೀಡುತ್ತದೆ. ಇದರಿಂದ ತಮ್ಮ ಮಕ್ಕಳಿಗೆ ಆ ಶಾಲೆಯಲ್ಲಿ ಉತ್ತಮ ವಿದ್ಯಾಭ್ಯಾಸ ದೊರೆಯುವ ಭರವಸೆ ಸಮುದಾಯಕ್ಕೆ ದೊರೆಯುತ್ತದೆ.

ಭಾರತದಲ್ಲಿ 2021ರ ವೇಳೆಗೆ 0–14 ವಯೋಮಾನದ ಸುಮಾರು 37.2 ಕೋಟಿ ಮಕ್ಕಳು ಹಾಗೂ 15–29 ವಯೋಮಾನದ ಸುಮಾರು 36.7 ಕೋಟಿ ಯುವಜನರು ಇರುವರೆಂದು ವಿಶ್ವಬ್ಯಾಂಕಿನ 2017ರ ವರದಿ ಅಂದಾಜು ಮಾಡಿದೆ. ಈ ಮಕ್ಕಳ ಭವಿಷ್ಯದ ಜೀವನ ಹೇಗಿರುತ್ತದೆ? ಅವರು ರಾಷ್ಟ್ರಜೀವನದಲ್ಲಿ ಯಾವ ರೀತಿಯಲ್ಲಿ ಭಾಗೀದಾರರಾಗುತ್ತಾರೆ ಎಂಬುದನ್ನು ಅವರಿಗೆ ದೊರೆಯುವ ಶಿಕ್ಷಣದ ಗುಣಮಟ್ಟವೇ ನಿರ್ಧರಿಸುತ್ತದೆ. ಸಮಾನ ಗುಣಮಟ್ಟದ ಶಿಕ್ಷಣವನ್ನು ಒದಗಿಸಲಾಗದ ವ್ಯವಸ್ಥೆಯಲ್ಲಿ ಗ್ರಾಮೀಣ ಭಾರತದಲ್ಲಿನ ಅವಕಾಶವಂಚಿತ ಸಾಮಾಜಿಕ–ಆರ್ಥಿಕ ಹಿನ್ನೆಲೆಯಿಂದ ಬಂದಿರುವ ಮಕ್ಕಳು ತೀವ್ರ ಸಂಕಷ್ಟವನ್ನು ಅನುಭವಿಸುತ್ತಿದ್ದಾರೆ. ಇದಕ್ಕೆ ನೈತಿಕ ಹೊಣೆಯನ್ನು ನಮ್ಮಲ್ಲಿ ಪ್ರತಿಯೊಬ್ಬರೂ ಹೊರಬೇಕಾಗಿದೆ.

ಇಪ್ಪತ್ತನೇ ಶತಮಾನದಲ್ಲಿ ಭಾರತದ ಶಿಕ್ಷಣದ ರೂವಾರಿಯಾಗಿದ್ದ ದಿವಂಗತ ಜೆ.ಪಿ. ನಾಯಕ್ ಅವರು ಭಾರತದ ಶಿಕ್ಷಣವನ್ನು ಕುರಿತ ತಮ್ಮ ಉತ್ಕೃಷ್ಟ ಕೃತಿಯನ್ನು, **'ಈಕ್ವಾಲಿಟಿ, ಕ್ವಾಲಿಟಿ ಅಂಡ್ ಕ್ವಾಂಟಿಟಿ: ದಿ ಎಲ್ಯೂಸಿವ್ ಟ್ರಯಾಂಗಲ್ ಇನ್ ಇಂಡಿಯನ್ ಎಜುಕೇಶನ್'** (Equality, Quality and Quantity: The Elusive Triangle in Indian Education) ಎಂದು ಕರೆದರು. **"ಸರ್ವ ಶಿಕ್ಷಣ ಅಭಿಯಾನ"** ಮುಂತಾದ ಚಾರಿತ್ರಿಕ ಉಪಕ್ರಮಗಳ ಮೂಲಕ ಭಾರತವು ಜನವಸತಿ ಇರುವೆಡೆಯಲ್ಲಿ ಒಂದು ಪ್ರಾಥಮಿಕ ಶಾಲೆಯನ್ನು ಒದಗಿಸಲು ಸಮರ್ಥವಾಗಿದ್ದು ವಿದ್ಯಾರ್ಥಿಗಳಿಗೆ ಶಿಕ್ಷಣದ ಜೊತೆಗೆ, ಮಧ್ಯಾಹ್ನದ ಬಿಸಿಯೂಟದ ವ್ಯವಸ್ಥೆಯನ್ನೂ ಮಾಡಿದೆ. (ಇದು ವಿಶ್ವದಲ್ಲೇ ಒಂದು ಅತ್ಯಂತ ಬೃಹತ್ತಾದ ಯೋಜನೆ). ಇದರ ಪರಿಣಾಮವಾಗಿ 2002ರಲ್ಲಿ ಶೇಕಡ 72ರಷ್ಟು ಇದ್ದ ದಾಖಲಾತಿಯು (6–14 ವಯೋಮಾನದ 22.2 ಕೋಟಿ ಮಕ್ಕಳ ಪೈಕಿ 5.9 ಕೋಟಿ ಮಕ್ಕಳು ಶಾಲೆಯಿಂದ ಹೊರಗಿದ್ದಾಗ) ಇತ್ತೀಚಿನ ವರ್ಷಗಳಲ್ಲಿ ಶೇಕಡ 99ಕ್ಕೆ ಏರಿದೆ. ಶಾಲೆಗಳಲ್ಲಿ ಹಾಜರಾತಿ ಹೆಚ್ಚಾಗಿದ್ದು 8ನೇ ತರಗತಿಯವರೆಗೂ ಶಾಲೆಗಳಲ್ಲಿ ಉಳಿಯುವ ಮಕ್ಕಳ ಸಂಖ್ಯೆ ಶೇಕಡ 42 ರಿಂದ (2002) ಇದೀಗ ಶೇಕಡ 80ರವರೆಗೂ ಹೆಚ್ಚಿದೆ. (ನಕ್ಷೆ – 2 ನೋಡಿ.)

ಆದರೆ ಜೆ. ಪಿ. ನಾಯಕ್ ಅವರು ತೋರಿಸಿದಂತೆ ಕೈಜಾರುತ್ತಿರುವ ತ್ರಿಕೋನದ ಮೂರನೆಯ ತ್ರಿಭುಜ ಅಂದರೆ ಶಿಕ್ಷಣದ ಗುಣಮಟ್ಟವನ್ನು ಸಾಧಿಸಲು ಅಸಾಧ್ಯವಾಗಿಯೇ ಉಳಿದಿದೆ. ಸರ್ಕಾರಿ ಶಾಲೆಗಳನ್ನು ಸುಧಾರಿಸಲು ಬಂದಿರುವ ಸಲಹೆ–ಸೂಚನೆಗಳು ಮುಖ್ಯವಾಗಿ ಶಿಕ್ಷಕರ ಹೊಣೆಗಾರಿಕೆ, ಅವರಿಗೆ ಕೊಡಬೇಕಾದ ಪ್ರೋತ್ಸಾಹಕ ಕ್ರಮಗಳು, ಶಾಲೆಗಳಲ್ಲಿ ತಂತ್ರಜ್ಞಾನದ ಬಳಕೆ ಮತ್ತಿತರ ಸಾಮರ್ಥ್ಯ ಸಂಬಂಧಿತ ಕ್ರಮಗಳ ಸುತ್ತವೇ ಗಿರಕಿ ಹೊಡೆದಿವೆ; ಇವುಗಳಿಂದ ಯಾವ ಉಪಯೋಗವೂ ಆಗಿಲ್ಲ.

ನಿರಂತರವಾಗಿ ಕಾಡುವ ಈ ಸಮಸ್ಯೆಯ ನಿವಾರಣೆಯ ಬಗೆಗಿನ ಧೋರಣೆ ಇತ್ತೀಚಿನ ದಿನಮಾನದಲ್ಲಿ ಬದಲಾಗುತ್ತಿರುವುದು ಸ್ವಾಗತಾರ್ಹವಾದ ವಿಷಯ.

ಶಿಕ್ಷಣದಲ್ಲಿ ಶಿಕ್ಷಕರ ಮಹತ್ವಕ್ಕೆ ಹಾಗೂ ಅವರ ವೃತ್ತಿಪರ ಬೆಳವಣಿಗೆಗೆ ಆದ್ಯತೆ ನೀಡಬೇಕು ಎಂಬುದಕ್ಕೆ ಮನ್ನಣೆ ಸಿಗುತ್ತಿದೆ. ಸರ್ಕಾರಿ ಗ್ರಾಮೀಣ ಶಾಲೆಗಳೊಂದಿಗೆ ಹಲವಾರು ವರ್ಷಗಳಿಂದ ತಳಮಟ್ಟದಲ್ಲಿ ಕೆಲಸ ಮಾಡುತ್ತಿರುವವರಿಗೆ ಶಿಕ್ಷಕರ ಶಿಕ್ಷಣಕ್ಕೆ ಮಹತ್ವ ದೊರೆಯುತ್ತಿರುವುದು ಸ್ವಾಗತಾರ್ಹವಾಗಿದೆ. ಶಾಲಾ ಗುಣಮಟ್ಟದ ಸುಸ್ಥಿರ ಸುಧಾರಣೆಯು ಕೇವಲ ಕೆಲವು ನಿರ್ದಿಷ್ಟ ಅಂಶಗಳನ್ನು ಬಗೆಹರಿಸುವುದರಿಂದ ಬರುವುದಿಲ್ಲವೆಂಬುದನ್ನು ಇದು ಸೂಚಿಸುತ್ತದೆ. ಸುಸಜ್ಜಿತರಾದ ಹಾಗೂ ಎಲ್ಲ ಬಗೆಗಳಲ್ಲಿ ತಯಾರಾದ ಶಿಕ್ಷಕರನ್ನು ಸೃಷ್ಟಿಸುವ ಪ್ರಮುಖ ವಿಷಯಕ್ಕೆ ಗಮನಹರಿಸಿದಾಗ ಮಾತ್ರ ಇದನ್ನು ಸಾಧಿಸಬಹುದು. ಇದಕ್ಕೆ ಕಿರುದಾರಿಗಳಿಲ್ಲ. ನಮ್ಮ ದೇಶದ ಶಿಕ್ಷಕರ ಶಿಕ್ಷಣ ವ್ಯವಸ್ಥೆಯ ಪುನಾರಚನೆಯ ಕಾರ್ಯ ಸುದೀರ್ಘವೂ ಕಷ್ಟಕರವೂ ಆಗಿದೆ. ಈ ಕಾರ್ಯಕ್ರಮವನ್ನು ನಾವು ಎಷ್ಟು ಸಮರ್ಥವಾಗಿ ರೂಪಿಸುತ್ತೇವೆ, ನಾಲ್ಕು ವರ್ಷಗಳ, ಸಮಗ್ರರೂಪದ ಶಿಕ್ಷಕ ಶಿಕ್ಷಣ ಕಾರ್ಯಕ್ರಮವನ್ನು ಹೇಗೆ ರಚಿಸುತ್ತೇವೆ ಎಂಬುದರ ಮೇಲೆ, ಮುಂದೆ ಕೆಲವೇ ವರ್ಷಗಳಲ್ಲಿ ಭಾರತದ ಪ್ರೌಢ ನಾಗರಿಕರಾಗಿ ದೇಶದ ಆಗುಹೋಗುಗಳನ್ನು ನಿಭಾಯಿಸತಕ್ಕಂತಹ 37 ಕೋಟಿ ಮಕ್ಕಳ ಭವಿಷ್ಯ ಅವಲಂಬಿಸಿದೆ. ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಆಮೂಲಾಗ್ರ ಸುಧಾರಣೆಯನ್ನು ಏಕಕಾಲದಲ್ಲಿ ಮಾಡಬೇಕಾಗಿರುವ ಇನ್ನೂ ಹಲವು ವಿಚಾರಗಳಿವೆ. ಆದರೆ ಶಿಕ್ಷಕರನ್ನು ಅಭಿವೃದ್ಧಿಪಡಿಸುವ ಕೆಲಸ ಮಾತ್ರ ಅವಶ್ಯಕವಾಗಿ ಮತ್ತು ತುರ್ತಾಗಿ ಆಗಬೇಕಾದುದು.

ಈ ವಿಷಯಕ್ಕೆ ಸಂಬಂಧಿಸಿ ಬಲು ಮಹತ್ವದ ಪ್ರಶ್ನೆ ಇರುವುದು ನಮ್ಮ ಪದವಿ ಶಿಕ್ಷಣದ ಬಗ್ಗೆ. ಇದು ತುಂಬಾ ದುರ್ಬಲವಾಗಿದ್ದು ಭಾವೀ ಶಿಕ್ಷಕರಿಗೆ ವಿಷಯಜ್ಞಾನವನ್ನು ಒದಗಿಸಲು ವಿಫಲವಾಗಿದೆ. ನಮ್ಮ ಶಿಕ್ಷಕರು ಅವರ ವಿಷಯಗಳಲ್ಲಿ ನಿಜವಾಗಿ ಸಮರ್ಥರಾಗಬೇಕಾದರೆ ಪದವಿ ಕಾರ್ಯಕ್ರಮಗಳು ಅವರು ಆಯ್ಕೆ ಮಾಡಿಕೊಂಡಿರುವ ವಿಷಯಗಳಲ್ಲಿ ಆಳವಾದ ಹಾಗೂ ವಿಸ್ತಾರವಾದ ಜ್ಞಾನವನ್ನು ಒದಗಿಸಬೇಕಾಗುತ್ತದೆ. ನಮ್ಮ ಪದವಿ ಕಾರ್ಯಕ್ರಮಗಳ ಅತ್ಯಂತ ಶಿಥಿಲಗೊಂಡಿರುವ ಗುಣಮಟ್ಟವನ್ನು ಮೂಲಕಾರಣವೆಂದು ಗುರುತಿಸದ ಹೊರತು ಶಾಲಾ ಶಿಕ್ಷಣದ ಗುಣಮಟ್ಟದ ಬಗ್ಗೆ ಚರ್ಚಿಸುವುದು ಅಸಾಧ್ಯ.

ಶಿಕ್ಷಣದಲ್ಲಿ ಸಮತೆ ಮತ್ತು ಗುಣಮಟ್ಟದ ಸಾಧನೆಗಾಗಿ ಭಾರತ ನಡೆಸಿರುವ ಹುಡುಕಾಟದಲ್ಲಿ 1966ರ ಕೊಠಾರಿ ಆಯೋಗದ ವರದಿ, 1986ರ ರಾಷ್ಟ್ರೀಯ ಶಿಕ್ಷಣ ನೀತಿ ಹಾಗೂ 2005ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಇವುಗಳು ಮೈಲುಗಲ್ಲುಗಳಾಗಿವೆ. ಮುಂದಿನ ಹೊಸ ರಾಷ್ಟ್ರೀಯ ಶಿಕ್ಷಣ ನೀತಿಯು ಸಹ ಭಾರತದಲ್ಲಿ ಸಾರ್ವಜನಿಕ ಶಿಕ್ಷಣವನ್ನು ಕ್ರಾಂತಿಕಾರಕವಾಗಿ ರೂಪಾಂತರಗೊಳಿಸುವ ಮಹತ್ತ್ವಪೂರ್ಣ ದಾಖಲೆಗಳಲ್ಲಿ ಒಂದೆಂದು ಸಾಬೀತಾಗಬಹುದು. ಆ ಶಿಕ್ಷಣ ನೀತಿಯು ಶಿಕ್ಷಕ ಶಿಕ್ಷಣದ ಬಗ್ಗೆ ಸ್ಪಷ್ಟ ಸಲಹೆಗಳನ್ನೇನಾದರೂ ಒದಗಿಸಿದರೆ, ಶಿಕ್ಷಕರ ತಯಾರಿಗೆ ಹೂಡಬೇಕಾದ ಸಂಪನ್ಮೂಲಗಳನ್ನು ಗುರುತಿಸಿದರೆ ಮತ್ತು ಅದಕ್ಕೆ ಪೂರಕವಾದ ವ್ಯವಸ್ಥಿತ, ರಚನಾತ್ಮಕ ಸುಧಾರಣೆಗಳನ್ನು ಸೂಚಿಸಿದರೆ ನಮ್ಮ ಸಾರ್ವಜನಿಕ ಶಿಕ್ಷಣ

ವ್ಯವಸ್ಥೆಯನ್ನು ಬಲಪಡಿಸುವ ನಿಟ್ಟಿನಲ್ಲಿ ಮಹತ್ವಪೂರ್ಣ ಕೊಡುಗೆಯನ್ನು ನೀಡಿದಂತಾಗುತ್ತದೆ. ನಮ್ಮ ದೇಶದ ಶೇಕಡ 60ರಷ್ಟು ಮಕ್ಕಳಿಗೆ ಜೀವಸೆಲೆಯಾಗಿ ಒದಗುತ್ತಿರುವುದು ಸರ್ಕಾರಿ ಶಾಲೆ ಮಾತ್ರ ಎಂಬುದೇ ವಾಸ್ತವ. ಸರ್ಕಾರಿ ಶಾಲೆಯ ಮೇಲೆ ಸಂಪೂರ್ಣವಾಗಿ ಅವಲಂಬಿತರಾದ ಮಕ್ಕಳು ಸಮಾನತೆಯ ಆಧಾರದಲ್ಲಿ ಗುಣಮಟ್ಟದ ಶಿಕ್ಷಣ ಪಡೆಯಲು ಸಾಧ್ಯವಾದಾಗ ಮಾತ್ರ, ನಮ್ಮ ಸಂವಿಧಾನದಲ್ಲಿ ನಿರೂಪಿಸಲಾಗಿರುವ ಆದರ್ಶಗಳ ಸಾಕಾರದ ಕಡೆಗೆ ಮುನ್ನಡೆಯುವ ಭರವಸೆಯನ್ನು ಹೊಂದಬಹುದು.

# 1

# ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಾಗಿ ಮುಖ್ಯ ಶಿಕ್ಷಕರು

ಗ್ರಾಮೀಣ ಸರ್ಕಾರಿ ಶಾಲೆಗಳು ಎದುರಿಸುತ್ತಿರುವ ಸಮಸ್ಯೆಗಳು ಒಂದೆರಡಲ್ಲ. ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಅತ್ಯಂತ ಪ್ರತಿಕೂಲ ಪರಿಸ್ಥಿತಿಯಲ್ಲಿರುವ ಮಕ್ಕಳು ಈ ಶಾಲೆಗಳಿಗೆ ಹೋಗುತ್ತಾರೆ. ಈ ಮಕ್ಕಳಲ್ಲಿ ಶೇಕಡ 50ರಷ್ಟು ಮಂದಿ ಮೊದಲ ತಲೆಮಾರಿನ ಕಲಿಕೆದಾರರಾಗಿದ್ದು, ಅವರ ಪೋಷಕರು ದಿನಗೂಲಿ ಕೆಲಸಗಾರರಾಗಿರುತ್ತಾರೆ. ಈ ಪರಿಸ್ಥಿತಿಯಲ್ಲಿ ತಮ್ಮದು ಉತ್ತಮ ಶಾಲೆಯೆಂದು ಅಲ್ಲಿನ ಮುಖ್ಯೋಪಾಧ್ಯಾಯರು ನಿರೂಪಿಸಬೇಕಾಗುತ್ತದೆ. ಶಾಲೆಯು ಮಕ್ಕಳ ಕಾಳಜಿ ವಹಿಸುತ್ತಿದೆ, ಅವರು ಚೆನ್ನಾಗಿ ಕಲಿಯುತ್ತಿದ್ದಾರೆ ಎಂಬುದನ್ನು ತೋರಿಸಬೇಕಾಗುತ್ತದೆ. ಸಮುದಾಯದೊಂದಿಗಿನ ಸಂಬಂಧವನ್ನು ಚೆನ್ನಾಗಿರಿಸಿಕೊಂಡು ಮತ್ತೆ ಮತ್ತೆ ಬಲಪಡಿಸುತ್ತ ಇರಬೇಕಾಗುತ್ತದೆ. ಜೊತೆಗೆ ಎದುರಾಗುವ ಸಮಸ್ಯೆಗಳನ್ನೆಲ್ಲ ಬಗೆಹರಿಸುತ್ತ ಸಂಪನ್ಮೂಲಗಳನ್ನು ಕ್ರೋಡೀಕರಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಈ ಮುಖ್ಯೋಪಾಧ್ಯಾಯರು ಒಂದು ಸಂಸ್ಥೆಯ ಕಾರ್ಯನಿರ್ವಹಣಾಧಿಕಾರಿಯಂತೆ ಪಾತ್ರ ನಿರ್ವಹಿಸಬೇಕಾಗುತ್ತದೆ.

ಸಮುದಾಯದೊಡನೆ ಉತ್ತಮ ಸಂಬಂಧ ಇಟ್ಟುಕೊಳ್ಳುವುದು ಹಾಗೂ ಮಕ್ಕಳು ಖಾಸಗಿ ಶಾಲೆಗಳಿಂದ ಮತ್ತೆ ತಮ್ಮ ಶಾಲೆಗೆ ಬರುವಂತೆ ಮನವೊಲಿಸುವದು ತಮ್ಮ ಮುಖ್ಯ ಕಾರ್ಯಗಳಲ್ಲಿ ಪ್ರಧಾನವಾದವುಗಳೆಂದು ಮುಖ್ಯ ಶಿಕ್ಷಕರು ಭಾವಿಸಿರುವುದನ್ನು ನಾನು ನನ್ನ ಭೇಟಿಯ ಸಮಯದಲ್ಲಿ ಕಂಡುಕೊಂಡೆ. ಈ ಕಾರ್ಯವನ್ನು ಅವರು ಸಹೋದ್ಯೋಗಿಗಳಿಗೆ ವಹಿಸದೆ ತಾವೇ ವೈಯಕ್ತಿಕವಾಗಿ ಸಮುದಾಯದೊಂದಿಗೆ ತೊಡಗಿಸಿಕೊಳ್ಳುತ್ತಿದ್ದರು. ಇದಕ್ಕಾಗಿ ತಾವು ಮಾಡಬೇಕಾದ ತ್ರಿಮುಖ ಸಂವಹನ ಕಾರ್ಯತಂತ್ರ ಏನು ಎಂಬುದು ಕ್ರಿಯಾಶೀಲ ಮುಖ್ಯ ಶಿಕ್ಷಕರಿಗೆ ತಿಳಿದಿದೆ; ಒಂದನೆಯದಾಗಿ ಶಾಲೆಯ ಕಾಣ್ಕೆ ಹಾಗೂ ಧ್ಯೇಯೋದ್ದೇಶ ಏನು ಎಂಬ ಸ್ಪಷ್ಟವಾದ ಗೊತ್ತುಗುರಿಗಳನ್ನು ರೂಪಿಸುವುದು, ಎರಡನೆಯದಾಗಿ ಸಮುದಾಯದ ಸದಸ್ಯರನ್ನು ವೈಯಕ್ತಿಕವಾಗಿ ಹಾಗೂ ಸಮೂಹದಲ್ಲಿ ಸಂಪರ್ಕಿಸಿ ಈ ಕಾಣ್ಕೆಯನ್ನು ಅವರ ಮುಂದೆ ಇರಿಸುವುದು ಹಾಗೂ ಮೂರನೆಯದಾಗಿ ಮಕ್ಕಳ ಕ್ಷೇಮಕ್ಕಾಗಿ ಹಾಗೂ ಕಲಿಕೆಗಾಗಿ ಕಾರ್ಯವೆಸಗುವ ತಮ್ಮ ಬದ್ಧತೆಯನ್ನು ವಿವಿಧ ವಿಧಾನಗಳಿಂದ ಪ್ರಚುರಪಡಿಸುವುದು.

ಈ ಕ್ರಮಗಳಿಂದ ಸಮುದಾಯವು ನಿಸ್ಸಂದೇಹವಾಗಿ ಸಕಾರಾತ್ಮಕವಾಗಿ ಪ್ರತಿಸ್ಪಂದಿಸಲು ಪ್ರಾರಂಭಿಸುತ್ತದೆ. ಇಂತಹ ಸುಗಮ ವಾತಾವರಣ ನಿರ್ಮಾಣಗೊಂಡ ಮೇಲೆ ಶಾಲೆಯ ನಿರ್ವಹಣೆಯ ಎಲ್ಲಾ ಆಯಾಮಗಳಲ್ಲಿ ನಿರಂತರ ಹಾಗೂ ಸುಸ್ಥಿರ ಸುಧಾರಣೆ ತರಲು ಮುಖ್ಯ ಶಿಕ್ಷಕರು ಇತರ ಕ್ರಮಗಳನ್ನು ಕೈಗೊಳ್ಳುತ್ತಾರೆ. ಈ ಎಲ್ಲಾ ಪ್ರಕ್ರಿಯೆಗಳಲ್ಲಿ ಸಮುದಾಯದೊಂದಿಗೆ ಪಾರದರ್ಶಕವಾದ ಸಂವಹನವನ್ನು ನಡೆಸುತ್ತಾರೆ. ಖರ್ಚು ವೆಚ್ಚದ ದಾಖಲೆಗಳನ್ನು ಎಲ್ಲರೊಂದಿಗೆ ಹಂಚಿಕೊಂಡು ಸರ್ವವೇದ್ಯವಾದ ಸುಧಾರಣೆಗಳನ್ನು ಪ್ರದರ್ಶಿಸಿ ಅವರ ವಿಶ್ವಾಸವನ್ನೂ ಭರವಸೆಯನ್ನೂ ಗಳಿಸಲು ಶಕ್ತರಾಗುತ್ತಾರೆ.

ಪೋಷಕರು ಹೆಚ್ಚು ವಿದ್ಯಾವಂತರಲ್ಲವಾದರೂ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಬೇಕೆಂಬ ಹಂಬಲವನ್ನು ಉಳ್ಳವರು. ಶಾಲೆಯು ಚೆನ್ನಾಗಿ ನಡೆಯುತ್ತಿದೆಯೇ ಇಲ್ಲವೇ ಎಂಬ ಸೂಕ್ಷ್ಮ ಗ್ರಹಿಕೆ ಅವರಿಗೆ ಇರುತ್ತದೆ. ಈ ಗ್ರಹಿಕೆ ಅವರಿಗೆ ಉಂಟಾದರೆ ಮಕ್ಕಳ ಹಾಜರಿಯಲ್ಲಿ ಗಮನಾರ್ಹ ಏರಿಕೆ ಕಂಡುಬರುತ್ತದೆ. ಜೀವನ ನಿರ್ವಹಣೆಗಾಗಿ ಕುಟುಂಬದ ವಲಸೆ, ಒಡಹುಟ್ಟಿದವರನ್ನು ನೋಡಿಕೊಳ್ಳುವ ಜವಾಬ್ದಾರಿ, ವ್ಯವಸಾಯದ ಕಾಲ ಹಾಗೂ ಹಬ್ಬಗಳು ಮುಂತಾದ ಸಂದರ್ಭಗಳಲ್ಲಿ ತಮ್ಮ ಕುಟುಂಬಗಳಿಗೆ ಸಹಾಯ ಮಾಡಬೇಕಾಗಿರುವುದರಿಂದ ಹಾಜರಾತಿ ಪ್ರಮಾಣ ಕಡಿಮೆಯಾಗುತ್ತದೆ. ಇವೆಲ್ಲಾ ಒತ್ತಡಗಳ ನಡುವೆಯೂ ಬದ್ಧತೆಯುಳ್ಳ ಮುಖ್ಯ ಶಿಕ್ಷಕರು ನಿಯತ ಹಾಜರಾತಿಯ ಸಂಸ್ಕೃತಿಯನ್ನು ಸೃಷ್ಟಿ ಮಾಡಿದ್ದಾರೆ. ಮುಖ್ಯ ಶಿಕ್ಷಕರು ಮತ್ತು ಇತರ ಶಿಕ್ಷಕರು ಪ್ರತಿಯೊಬ್ಬ ಪೋಷಕರ ಮೊಬೈಲ್ ಫೋನ್ ಸಂಖ್ಯೆಗಳನ್ನು ಹೊಂದಿರುತ್ತಾರೆ. ವಿದ್ಯಾರ್ಥಿಯು ಗೈರು ಹಾಜರಾದಾಗ ಅವನ/ಳ ಪೋಷಕರನ್ನು ಸಂಪರ್ಕಿಸುತ್ತಾರೆ. ಇದು ಪೋಷಕರಿಗೆ ಅವರ ಮಕ್ಕಳನ್ನು ನಿಯತವಾಗಿ ಶಾಲೆಗೆ ಕಳುಹಿಸುವಂತೆ ಸೂಕ್ಷ್ಮವಾಗಿ ನೆನಪಿಸುವುದಷ್ಟೇ ಅಲ್ಲದೆ ಶಾಲೆಯು ಅವರ ಸ್ನೇಹಿತನಂತೆ ಮಕ್ಕಳ ಬೆಳವಣಿಗೆಯಲ್ಲಿ ಸಮಾನ ಪಾತ್ರ ವಹಿಸುತ್ತದೆಂಬುದನ್ನು ಪುಷ್ಟೀಕರಿಸುತ್ತದೆ.

ಕೆಲವು ತಿಂಗಳುಗಳ ಹಿಂದೆ ವಿಶ್ವವಿದ್ಯಾಲಯವೊಂದರ ವಿಚಾರ ಸಂಕಿರಣದಲ್ಲಿ ಅಂತಹ ಬದ್ಧತೆಯುಳ್ಳ ನಾಯಕತ್ವದ ಮೂಲ ಅಂಶಗಳನ್ನು ಪಟ್ಟಿ ಮಾಡುವಂತೆ ಕೇಳಲಾಗಿತ್ತು. ಈ ಕೆಳಗಿನ ಅಂಶಗಳನ್ನು ನಾನು ಅವರ ಮುಂದಿಟ್ಟಿದ್ದೆ:

✶ ಅನೇಕ ಶಾಲೆಗಳು ಸ್ಪಷ್ಟವಾಗಿ ನಿರೂಪಿಸಿದ ಗುರಿಗಳನ್ನು ಹೊಂದಿರಬಹುದು. ಆದರೆ ಈ ಶಾಲೆಗಳಲ್ಲಿ (ಈ ಅಧ್ಯಾಯದಲ್ಲಿ ಆ ಶಾಲೆಗಳ ಬಗ್ಗೆ ಬರೆದಿದ್ದೇನೆ) ಗುರಿಗಳು ಫಲಕದಲ್ಲೋ ಮಾತಿನಲ್ಲೋ ಕಾಣಿಸಿಕೊಂಡು ಮಾಯವಾಗುವುದಿಲ್ಲ; ಅವು ಪ್ರತಿದಿನದ ವಿವರವಾದ ಯೋಜನೆಗಳಲ್ಲಿ ಮತ್ತು ಕ್ರಿಯೆಗಳಲ್ಲಿ ಅಡಕಗೊಂಡು ಸಾಕಾರಗೊಳ್ಳುತ್ತವೆ. ಕಾಣ್ಕೆಯನ್ನು ವಾಸ್ತವಿಕತೆಯನ್ನಾಗಿ ಪರಿವರ್ತಿಸಲು ಮುಖ್ಯ ಶಿಕ್ಷಕರುಗಳು ತೋರುತ್ತಿರುವ ಈ ಬದ್ಧತೆಯ ಪ್ರಭಾವ ಶಿಕ್ಷಕರ ಕಾರ್ಯ ಮತ್ತು ಧೋರಣೆಯ ಮೇಲೆ ಆಗಿರುವುದನ್ನು ಮೇಲ್ನೋಟಕ್ಕೇ ಗುರುತಿಸಬಹುದಾಗಿದೆ.

✶ ಸಮುದಾಯದೊಂದಿಗೆ ಒಳ್ಳೆಯ ಸಂಬಂಧದ ಮಹತ್ವವೇನೆಂದು ಎಲ್ಲಾ ಮುಖ್ಯ ಶಿಕ್ಷಕರಿಗೂ ತಿಳಿದಿರುವುದೇ ಆಗಿದೆ. ಆದರೆ ತಮ್ಮ ಪರಿಶ್ರಮ ಹಾಗೂ ಮಕ್ಕಳ

ಕಲಿಕೆಯನ್ನು ಮತ್ತು ಪ್ರಗತಿಯನ್ನು ಅತ್ಯಂತ ಪರಿಣಾಮಕಾರಿಯಾಗಿ ಪೋಷಕರಿಗೆ ಮುಟ್ಟಿಸುವ ಸಾಮರ್ಥ್ಯವನ್ನು ಹೊಂದಿರುವುದೇ ಪರಿಣಾಮಕಾರಿ ನಾಯಕತ್ವದ ವಿಶಿಷ್ಟ ಗುಣವಾಗಿದೆ. ಇಂತಹ ನಾಯಕ ಇರುವ ಶಾಲೆಗಳಲ್ಲಿ ಮಕ್ಕಳ ಮೇಳ, ವಾರ್ಷಿಕ ದಿನಾಚರಣೆ, ಸ್ವಾತಂತ್ರ್ಯ ದಿನಾಚರಣೆ ಮುಂತಾದ ಕಾರ್ಯಕ್ರಮಗಳನ್ನು ಸಂಪ್ರದಾಯದ ಪಾಲನೆಗಷ್ಟೆ ಎಂಬಂತೆ ಆಚರಿಸದೆ ಅವುಗಳನ್ನು ಮಕ್ಕಳ ಸರ್ವಾಂಗೀಣ ಪ್ರಗತಿಯ ಪ್ರದರ್ಶನದ ವೇದಿಕೆಗಳನ್ನಾಗಿ ಉಪಯೋಗಿಸಿಕೊಳ್ಳುತ್ತಾರೆ. ಇವುಗಳ ಪರಿಣಾಮ ಏನು ಎಂಬುದರ ಸ್ಪಷ್ಟವಾದ ಕಲ್ಪನೆಯೂ ನಾಯಕನಿಗೆ ಇರುತ್ತದೆ, ಆ ಪರಿಣಾಮ ಶಾಲೆಯ ಮಕ್ಕಳ ಹಾಜರಾತಿಯ ಹೆಚ್ಚಳದಲ್ಲಿ ಪ್ರತಿಫಲಿತವಾಗುತ್ತದೆ.

✳ ಯೋಜನೆ ಮತ್ತು ಸಿದ್ಧತೆಗಳಿಗೆ ಸಂಬಂಧಿಸಿದಂತೆ ಅವರಿಗೆ ದೈನಂದಿನ, ಮಧ್ಯಕಾಲೀನ ಹಾಗೂ ದೀರ್ಘಕಾಲಿಕ ಮುಂದಾಲೋಚನೆ ಇರುವುದನ್ನು ನಾನು ಗಮನಿಸಿದ್ದೇನೆ. ಕಾಲಕಾಲಕ್ಕೆ ಆದ್ಯತೆಗಳನ್ನು ಗುರುತಿಸಿಕೊಂಡು ಅವುಗಳನ್ನು ಜಾರಿಗೊಳಿಸುತ್ತ, ಗುರಿ ಸಾಧನೆಯ ಸಹಜ ಪ್ರಗತಿಯ ಮಾರ್ಗದಲ್ಲಿ ಸಾಗುತ್ತಾರೆ.

✳ ಶಾಲೆಯ ದೈನಂದಿನ ಕಾರ್ಯಗಳ ನಿರ್ವಹಣೆಯೊಂದಿಗೆ ಶಾಲೆಯ ನಿರ್ಣಾಯಕ ಪ್ರಕ್ರಿಯೆಗಳ ಮೇಲೆ ತಮ್ಮ ತೀಕ್ಷ್ಣ ದೃಷ್ಟಿಯನ್ನಿಟ್ಟಿರುತ್ತಾರೆ. ಬೆಳಗಿನ ಪ್ರಾರ್ಥನಾ ಸಭೆಯಿಂದ ಹಿಡಿದು ಗ್ರಂಥಾಲಯದ ನಿರ್ವಹಣೆ ಮತ್ತು ಬಳಕೆ, ಮಕ್ಕಳ ಕಲಿಕೆಯ ಪ್ರಗತಿಯ ಕೂಲಂಕಷ ದಾಖಲೆ ತಯಾರಿಕೆ ಮತ್ತು ಅವರ ಪ್ರಗತಿಯ ಬಗ್ಗೆ ಸಹ-ಶಿಕ್ಷಕರೊಂದಿಗೆ ಪರ್ಯಾಲೋಚನೆ ಮುಂತಾದ ಅನೇಕ ಕಾರ್ಯಗಳ ಜವಾಬ್ದಾರಿಯನ್ನು ಮುಖ್ಯ ಶಿಕ್ಷಕರು ವಹಿಸಬೇಕಾಗುತ್ತದೆ. ಇವೆಲ್ಲಾ ನಿಯಮಿತ ಕಾರ್ಯಗಳಾಚೆಗೆ ಹೋಗಿ ಅವರು ಅಸಾಧಾರಣವಾದ ಆಂತರಿಕ ಪ್ರೇರಣೆಯನ್ನೂ ನಾಯಕತ್ವವನ್ನೂ ಪ್ರದರ್ಶಿಸಿ, ಅನೇಕ ಕೆಲಸಗಳನ್ನು ಶಾಲೆಯ ಒಳಿತಿಗಾಗಿ ಮಾಡುತ್ತಿರುತ್ತಾರೆ. ಶಾಲೆಯ ಮೂಲಸೌಕರ್ಯಗಳಿಗೆ ಸಮುದಾಯದಿಂದ ಬೇಕಾದ ಹಣಕಾಸಿನ ವ್ಯವಸ್ಥೆ ಮಾಡುವುದು, ಮಕ್ಕಳ ಸುರಕ್ಷತೆ ಮತ್ತು ಆರೋಗ್ಯ, ಶುಚಿತ್ವಗಳ ಬಗ್ಗೆ ಎಚ್ಚರ ವಹಿಸುವುದು, ಸಮುದಾಯ, ಗ್ರಾಮ ಪಂಚಾಯ್ತಿ ಹಾಗೂ ಬ್ಲಾಕ್ ಕಚೇರಿಗಳಿಂದ ಸಂಪನ್ಮೂಲ ಕ್ರೋಡೀಕರಿಸುವುದು, ಅಗತ್ಯ ಬಿದ್ದಾಗ ತಮ್ಮ ಸ್ವಂತ ಹಣವನ್ನೇ ನೀಡುವುದು, ಮಕ್ಕಳ ಕಲಿಕೆಯ ಮೇಲೆ ನಿಗಾ ವಹಿಸುವುದು ಹಾಗೂ ವಿಶೇಷವಾಗಿ ಗಮನ ನೀಡಬೇಕಾದ ಮಕ್ಕಳ ಬಗ್ಗೆ ಹೆಚ್ಚಿನ ಆಸ್ಥೆ ವಹಿಸುವುದು – ಇವೆಲ್ಲವನ್ನೂ ನಿರ್ವಹಿಸುವ ಮೂಲಕ ಯಜಮಾನನಂತೆ ಕೆಲಸ ಮಾಡುತ್ತಾರೆ. ದೊಡ್ಡ ಶಾಲೆಗಳಲ್ಲಿ ಶಿಕ್ಷಕರ ಪಾತ್ರ ನಿರ್ಣಾಯಕವೆಂದು ಅರಿತಿರುವ ಮುಖ್ಯ ಶಿಕ್ಷಕರು, ಅವರನ್ನು ಪ್ರೋತ್ಸಾಹಿಸಿ ಮಾರ್ಗದರ್ಶನ ನೀಡುತ್ತಾರೆ; ಶಿಕ್ಷಕರು ತಮ್ಮ ನಿರಂತರ ಬೆಳವಣಿಗೆಗಾಗಿ ವೃತ್ತಿಪರ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಹಾಜರಾಗುವಂತೆ ಪ್ರೋತ್ಸಾಹಿಸುತ್ತಾರೆ.

'ಕರ್ತವ್ಯದ ಚೌಕಟ್ಟನ್ನೂ ದಾಟಿ ಕೆಲಸಮಾಡುವುದು' ಎಂಬುದು ಸಾಧಾರಣವಾಗಿ ಬಳಸುವ ಕ್ಲೀಷೆಯ ನುಡಿ. ಆದರೆ ಇದನ್ನು ಈ ಮುಖ್ಯ ಶಿಕ್ಷಕರಿಗೆ ಅನ್ವಯಿಸಿದಾಗ ಅದು ಸಾರ್ಥಕವೆನಿಸುತ್ತದೆ. ಕಷ್ಟಗಳಿಂದ ಬೇಗನೇ ಚೇತರಿಸಿಕೊಂಡು ಪುಟಿದೆದ್ದು ಸಮಸ್ಯೆಗಳಿಗೆ ಧೀರವಾದ ಜಾಣತನದ ನಿರ್ಧಾರ ಕೈಗೊಳ್ಳುವ ಚೈತನ್ಯ ಇವರಲ್ಲಿ ಕಂಡುಬರುತ್ತದೆ.

# “ಹೋರಾಡಿ”

**ಕೃಷ್ಣಕುಮಾರ್ ಶರ್ಮ**
ಸರ್ಕಾರಿ ಪ್ರಾಥಮಿಕ ಶಾಲೆ, ರವೀಂದ್ರ ನಗರ್, ರುದ್ರಪುರ್‌ಬ್ಲಾಕ್
ಉಧಮ್‌ಸಿಂಗ್‌ನಗರ್ ಜಿಲ್ಲೆ, ಉತ್ತರಾಖಂಡ್

ಇತರ ಅನೇಕ ಜಿಲ್ಲಾ ಕೇಂದ್ರಗಳಿಗೆ ಹೋಲಿಸಿದರೆ ರುದ್ರಪುರ್ ಹೆಚ್ಚು ನಗರೀಕರಣಗೊಂಡಿದೆ. ಇತ್ತೀಚಿನ ವರ್ಷಗಳಲ್ಲಿ ಅದು SIIDCUL[1] ಕೈಗಾರಿಕಾ ಪ್ರದೇಶದಿಂದಾಗಿ ಪಂತನಗರ್‌ನಲ್ಲಿ ಒಂದು ಕೈಗಾರಿಕಾ ಕೇಂದ್ರವಾಗಿದೆ. ಅಲ್ಲಿ ಹಲವಾರು ಪ್ರಮುಖ ಕಂಪೆನಿಗಳು ಕಾರ್ಖಾನೆಗಳನ್ನು ಸ್ಥಾಪಿಸಿವೆ. ಇದರ ಪರಿಣಾಮವಾಗಿ ಉತ್ತರಪ್ರದೇಶ, ಬಿಹಾರ ಮತ್ತು ಒಡಿಶಾ ರಾಜ್ಯಗಳಿಂದ ಅನೇಕ ಕುಶಲ ಹಾಗೂ ಅರೆ–ಕುಶಲ ಕಾರ್ಮಿಕರು ಮತ್ತು ಕೂಲಿ ಕೆಲಸಗಾರರು ಉದ್ಯೋಗದ ಸಲುವಾಗಿ ಬಂದು ರುದ್ರಪುರದಲ್ಲಿ ನೆಲೆಸಿದ್ದಾರೆ. ರವೀಂದ್ರ ನಗರ್ ಎಂಬುದು ರುದ್ರಪುರ್ ಒಳಗಿನ ಒಂದು ಸಣ್ಣ ಬಸ್ತಿಯಾಗಿದ್ದು ಈ ಕೈಗಾರಿಕೆಯ ಕಾರ್ಮಿಕರಲ್ಲಿ ಬಹುತೇಕರಿಗೆ ಆಸರೆಯಾಗಿದೆ. ಇಂತಹ ವಾಸಸ್ಥಳಗಳು ಸಾಮಾನ್ಯವಾಗಿ ಚಹಾ ಮಾರುವವರು, ಪಕೋಡ, ಮೋಮೋ ವ್ಯಾಪಾರಿಗಳು ಮುಂತಾದವರಿಗೆ ಜೀವನೋಪಾಯವನ್ನು ಕಲ್ಪಿಸಿಕೊಟ್ಟಿರುವುದು ಅಸಹಜವೇನಲ್ಲ. ಈ ಮೊಹಲ್ಲಾ ತನ್ನದೇ ಆದ ಕರಾಳ ಮುಖವನ್ನೂ ಹೊಂದಿದೆ. ಕುಡಿತ, ಜೂಜಾಟ, ಮಾದಕ ವಸ್ತುಗಳ ಮಾರಾಟ, ಸಣ್ಣ ಪಟ್ಟಣದ ಹಿಂಸೆಯ ಘಟನೆಗಳು, ಸುಲಿಗೆ, ಗೂಂಡಾಗಿರಿ ಮುಂತಾದ ವಿದ್ಯಮಾನಗಳಿಗೂ ಸಾಕ್ಷಿಯಾಗಿದೆ.

ರವೀಂದ್ರನಗರ್‌ನ ಸರ್ಕಾರಿ ಪ್ರಾಥಮಿಕ ಶಾಲೆಯ ಸ್ಥಿತಿ–ಗತಿಯನ್ನು ಅರ್ಥ ಮಾಡಿಕೊಳ್ಳಲು ಈ ಹಿನ್ನೆಲೆಯನ್ನು ತಿಳಿದುಕೊಳ್ಳುವ ಅಗತ್ಯವಿದೆ. ಈ ಶಾಲೆಯು ಎದುರಿಸುತ್ತಿರುವ ಸವಾಲುಗಳು ಇತರ ಸರ್ಕಾರಿ ಶಾಲೆಗಳಿಗಿಂತ ಸ್ವಲ್ಪ ಮಟ್ಟಿಗೆ ಭಿನ್ನವಾಗಿವೆ. ಆದರೆ ಪ್ರತಿಯೊಂದು ಮಗುವಿಗೂ ಗುಣಮಟ್ಟದ ಶಿಕ್ಷಣವನ್ನೊದಗಿಸುವ ಉದ್ದೇಶವು ಒಂದೇ ಆಗಿದೆ. ಶಾಲೆಯೇನೂ ತುಂಬಾ ಹಳೆಯದಲ್ಲ. ಅದನ್ನು 2008ರಲ್ಲಿ ಸ್ಥಾಪಿಸಲಾಗಿದೆ. ಸುಮಾರು ನೂರು ಮಕ್ಕಳು ದಾಖಲಾಗಿದ್ದು ಇಬ್ಬರು ಶಿಕ್ಷಕರಿದ್ದಾರೆ. ಅವರಲ್ಲೊಬ್ಬರು ಹಿಂದೆ ‘ಶಿಕ್ಷಾ ಮಿತ್ರ’ (ಅರೆ–ಕಾಲಿಕ ಶಿಕ್ಷಕರು)ರಾಗಿದ್ದರು. ಶಾಲೆ ಸ್ಥಾಪಿತವಾದ ಮೇಲೆ ಸ್ವಲ್ಪ ದಿನಗಳಲ್ಲಿ ಕೀರ್ತಿ ನಿಧಿ ಶರ್ಮ (KNS) ಎಂಬುವವರನ್ನು ಈ ಶಾಲೆಗೆ ನೇಮಕಾತಿ ಮಾಡಿಕೊಳ್ಳಲಾಯಿತು. ಒಂದು ಆಡಳಿತ ಸಂಸ್ಥೆಯ ಹಾಗೂ ಒಂದು ವೈದ್ಯಕೀಯ ಕಾಲೇಜಿನ ಆಡಳಿತವನ್ನು ನಿರ್ವಹಿಸಿದ ಅನುಭವ ಅವರಿಗಿತ್ತು. ಸಮಾಜಶಾಸ್ತ್ರದಲ್ಲಿ ಎಂ.ಎ. ಮತ್ತು ಬಿ.ಎಡ್. ಪದವೀಧರರಾಗಿದ್ದ ಕೆಎನ್‌ಎಸ್ ಬಲುಬೇಗ ತಾವು ಎದುರಿಸಬೇಕಾದ ಕಠಿಣ ಪರಿಸ್ಥಿತಿಯನ್ನು ಹಾಗೂ ಸವಾಲುಗಳನ್ನು ಅರ್ಥಮಾಡಿಕೊಂಡರು. ನಿಯೋಜಿತ ಮುಖ್ಯ ಶಿಕ್ಷಕರಾಗಿದ್ದ ಅವರು ಶಾಲೆಯು

1 State Infrastructure and Industrial Development Corporation of Uttarakhand Ltd., a Government of Uttarkhand Enterprise.

ಸಮರ್ಪಕವಾಗಿ ಕಾರ್ಯ ನಿರ್ವಹಿಸಲು ಶಕ್ತಿ ಮೀರಿ ಶ್ರಮಿಸಿದರು. 2011ರಲ್ಲಿ ದಾಖಲಾತಿಯು ನೂರ ಐವತ್ತಾರಕ್ಕೇರಿದರೂ ಪ್ರಾಥಮಿಕ ಶಾಲೆಯ ವಯೋಮಾನದ ಅನೇಕ ಬಾಲಕರು ದಾಖಲಾಗಿರಲಿಲ್ಲ, ಅವರನ್ನು ಮನೆಯವರು ದುಡಿಮೆಗೆ ಬಳಸಿಕೊಳ್ಳುತ್ತಿದ್ದರು. ಇನ್ನು ಕೆಲವು ಹುಡುಗರು ಸಣ್ಣ ಪುಟ್ಟ ಸಮಾಜ ವಿರೋಧಿ ಕೃತ್ಯಗಳಲ್ಲಿ ತೊಡಗಿ ಸ್ಥಳೀಯ ರೌಡಿ ಗುಂಪಿನ ಓರ್ವ ಮುಖ್ಯಸ್ಥಳಿಗೆ ಸಹಾಯ ಮಾಡುತ್ತಿದ್ದರು. ಆ ಮಹಿಳಾ ರೌಡಿ ಅಲ್ಲಿ ಈಗಲೂ ಸಕ್ರಿಯವಾಗಿದ್ದಾಳೆ.

ಕೆಎನ್‌ಎಸ್‌ರಿಗೆ ತಮ್ಮ ಮಿತಿಗಳ ಅರಿವಿತ್ತು. ಅವರು ಒಳ್ಳೆಯ ಆಡಳಿತಗಾರರೂ ಪ್ರಾಮಾಣಿಕ ಶಿಕ್ಷಕರೂ ಆಗಿದ್ದರು ಎಂಬುದು ನಿಜ; ಆದರೆ ಅವರಿಗೆ ಶಾಲೆಗೆ ಬೇಕಾದ ಹೆಚ್ಚಿನ ಸೌಲಭ್ಯಗಳನ್ನು ಕೇಳಿ ಪಡೆಯುವಂತಹ ಬಲವಾದ ವ್ಯಕ್ತಿತ್ವವಿರಲಿಲ್ಲ ಅಥವಾ ಸಮುದಾಯದಿಂದ ಬೆಂಬಲ ಸಿಕ್ಕೀತು ಎಂಬ ವಿಶ್ವಾಸವೂ ಅವರಿಗೆ ಇರಲಿಲ್ಲ. ಶಾಲೆಗೆ ಓರ್ವ ಮುನ್ನುಗ್ಗಿ ಕೆಲಸ ಮಾಡುವ ಧೈರ್ಯಶಾಲಿ ನಾಯಕನ ಆವಶ್ಯಕತೆಯಿದೆ ಎಂಬುದನ್ನು ಅವರು ಮನಗಂಡಿದ್ದರು. ಒಂದು ಜಿಲ್ಲಾ ಮಟ್ಟದ ಸಭೆಯಲ್ಲಿ ಅವರು ಕೃಷ್ಣಕುಮಾರ್ ಶರ್ಮ (KKS) ಎಂಬುವರ ಬಗ್ಗೆ ತಿಳಿದು ಅಲ್ಲೇ ಅವರನ್ನು ಭೇಟಿಯಾದರು. ಶರ್ಮ ಗದರ್‌ಪುರ್ ಎಂಬಲ್ಲಿ ಶಿಕ್ಷಕರಾಗಿದ್ದರು. ಅವರು ಕೆಎನ್‌ಎಸ್‌ಗೆ ಅನೇಕ ರೀತಿಯಲ್ಲಿ ವಿರುದ್ಧ ಗುಣಗಳ ವ್ಯಕ್ತಿಯಾಗಿದ್ದರು. ಮುಚ್ಚುಮರೆ ಇಲ್ಲದ, ಚುರುಕು ಬುದ್ಧಿಯ ನೇರ ವ್ಯಕ್ತಿಯಾಗಿದ್ದರು. 1993ರಲ್ಲಿ ಶಿಕ್ಷಣ ಇಲಾಖೆಯನ್ನು ಸೇರಿದಾಗಿನಿಂದಲೂ ಕೃಷ್ಣಕುಮಾರ್ ಶರ್ಮ ಅವರ ವ್ಯಕ್ತಿತ್ವ ಹಾಗೇ ಇತ್ತು. “ಸಂಘರ್ಷಕ್ಕಿಳಿದರೆ ಸತ್ಯವು ಜಯಿಸುತ್ತದೆ” ಎಂದು ಅವರು ಒಂದು ಬಗೆಯ ನಾಟಕೀಯ ಶೈಲಿಯಲ್ಲಿ ಹೇಳುತ್ತಿದ್ದರು. ಗದರ್‌ಪುರದ ಒಂದು ಪ್ರಾಥಮಿಕ ಶಾಲೆಯಲ್ಲಿ ಆರು ವರ್ಷ ಕಳೆದ ಬಳಿಕ (2007–13) ಕೃಷ್ಣಕುಮಾರ್ ಶರ್ಮರನ್ನು ಅವರ ಬಡ್ತಿಯನ್ನು ಕಡೆಗಣಿಸಿ ಸಣ್ಣ ಶಾಲೆಯೊಂದಕ್ಕೆ ವರ್ಗಾವಣೆ ಮಾಡಲಾಯಿತು. ಅವರು ಇದರ ವಿರುದ್ಧ ಸವಾಲೆಸೆದು ಗೆಲುವು ಸಾಧಿಸಿ ರವೀಂದ್ರ ನಗರಕ್ಕೆ ಮುಖ್ಯ ಶಿಕ್ಷಕರಾಗಿ ಬಡ್ತಿ ಪಡೆದರು. ರವೀಂದ್ರ ನಗರಕ್ಕೆ ಅವರ ವರ್ಗಾವಣೆ ಒಂದು ಶಿಕ್ಷೆ ಎಂದು ಮೇಲಧಿಕಾರಿಗಳು ಭಾವಿಸಿದರು. ಅದರಿಂದ ಅವರು ಉಡುಗಿಯೇ ಹೋಗುತ್ತಾರೆ ಎಂಬುದು ಅವರ ಎಣಿಕೆಯಾಗಿತ್ತು. ಆದರೆ ಕೀರ್ತಿನಿಧಿ ಶರ್ಮ ಅವರನ್ನು ಅಲ್ಲಿಗೆ ಆಮಂತ್ರಿಸಿದ್ದರೆಂಬುದು ಅಧಿಕಾರಿಗಳಿಗೆ ತಿಳಿದಿರಲಿಲ್ಲ. ಕೃಷ್ಣಕುಮಾರ್ ಶರ್ಮ ಕಣ್ಣು ಮಿಟುಕಿಸುತ್ತಾ ಹೇಳುತ್ತಾರೆ– “ರುದ್ರಪುರ್ ನನ್ನ ಸ್ವಂತ ಊರೆಂದು ಅವರಿಗೆ ಗೊತ್ತಿರಲಿಲ್ಲ. ಮೇಲಾಗಿ ಇಲ್ಲಿ ನನಗೆ ಬಡ್ತಿಯೂ ಸಿಕ್ಕಿತು.”

ಅವರು ರವೀಂದ್ರ ನಗರಕ್ಕೆ ಬಂದ ಕೂಡಲೇ ಇಬ್ಬರು ಶಿಕ್ಷಕರೂ ಜೊತೆಗೂಡಿ ಶಾಲೆಯ ಸ್ಥಿತಿಗತಿಗಳ ಅವಲೋಕನ ಮಾಡಿದರು. ತಮ್ಮ ಮುಂದಿರುವ ಸವಾಲನ್ನು ಧೈರ್ಯದಿಂದಲೂ ನವೀನ ತಂತ್ರಗಳಿಂದಲೂ ಎದುರಿಸಬೇಕೆಂದು ಕೆಕೆಎಸ್ ಅರ್ಥ ಮಾಡಿಕೊಂಡರು; ಸವಾಲುಗಳು ಅವರಿಗೆ ಇಷ್ಟದ ವಿಷಯವೂ ಕೂಡಾ. ಮೊದಲ ಹೆಜ್ಜೆಯಾಗಿ ಶಾಲಾ ಸೌಲಭ್ಯಗಳನ್ನು ಸುಧಾರಿಸಲು ಜನರನ್ನೂ ಸಂಪನ್ಮೂಲಗಳನ್ನೂ ಸೇರಿಸಲು ತೀರ್ಮಾನಿಸಿದರು. ಕೆಲವು ವಿಶಾಲ ಹೃದಯಿ ಕೈಗಾರಿಕೋದ್ಯಮಿಗಳನ್ನು

ಗುರುತಿಸಿ ಅವರ ನೆರವಿನಿಂದ ಶಾಲೆಯ ಸುತ್ತ ಆವರಣ ಗೋಡೆಯನ್ನು ಕಟ್ಟಿಸಿದರು. ಈ ಹಿಂದೆ ಪ್ರವಾಹ ಸಮಯದಲ್ಲಿ ನದಿಯ ನೀರು ಆವರಣದಲ್ಲೆಲ್ಲ ನುಗ್ಗಿ ತೊಂದರೆಯಾಗುತ್ತಿತ್ತು. ಗೋಡೆಯ ನಿರ್ಮಾಣದೊಂದಿಗೆ ತೊಂದರೆ ನಿವಾರಣೆಯಾಯಿತು. ಶೌಚಾಲಯವನ್ನೂ ಅಡುಗೆ ಮನೆಯನ್ನೂ ಕಟ್ಟಿಸಲಾಯಿತು.

ಇಷ್ಟು ಕೆಲಸಗಳಾದ ಮೇಲೆ ಕೆಕೆಎಸ್ ಅವರು ಎಲ್ಲರಿಗೂ ನಿಚ್ಚಳವೂ ಧೀರವೂ ಆದ ಒಂದು ಸಂದೇಶವನ್ನು ರವಾನಿಸಿದರು. 'ಈ ಶಾಲೆಗೆ ಬರುವ ಮಕ್ಕಳು ಇಲ್ಲಿ ಸಾಕಷ್ಟು ಶಿಕ್ಷಕರಿದ್ದಾರೋ ಇಲ್ಲವೋ, ಈ ಶಾಲೆಯಲ್ಲಿ ಮೂಲ ಸೌಕರ್ಯಗಳು ಇವೆಯೋ ಇಲ್ಲವೋ ಎಂಬುದರ ಬಗ್ಗೆ ಚಿಂತಿಸಬೇಕಾಗಿಲ್ಲ. ತಾವು ಮೊದಲನೇ ಪೀಳಿಗೆಯ ಕಲಿಕೆದಾರರು ಎಂದೂ ಅವರು ಹಿಂಜರಿಯಬೇಕಾಗಿಲ್ಲ. ಇಲ್ಲಿ ಕಲಿಯಲು ಬರುವುದು ಅವರ ಗುರಿಯಾಗಬೇಕು. ಪ್ರತಿಯೊಂದು ಮಗುವಿಗೂ ಒಳ್ಳೆಯ ಶಿಕ್ಷಣವನ್ನು ನೀಡುವುದು ನಮ್ಮ ಜವಾಬ್ದಾರಿ.' ಕೆಕೆಎಸ್ ಮತ್ತು ಕೆಎನ್ಎಸ್ ಇಬ್ಬರೂ ಇಡೀ ಬಸ್ತಿಯನ್ನು ಸುತ್ತಿ ಶಾಲೆಗೆ ಸೇರದಿರುವ ಮಕ್ಕಳನ್ನು ಶಾಲೆಗೆ ತರುವ ಯತ್ನ ಮಾಡಿದರು. ಒಂದು ಹಂತದಲ್ಲಿ ಅವರಿಗೆ ಸ್ಥಳೀಯ ಗೂಂಡಾಗಳಿಂದ ಬೆದರಿಕೆಯೂ ಬಂತು. "ನೀವು ಅನಾವಶ್ಯಕವಾಗಿ ತೊಂದರೆಗಳನ್ನು ಮೈಮೇಲೆ ಎಳೆದುಕೊಳ್ಳುತ್ತಿದ್ದೀರಿ. ಇವರು ನಮ್ಮ ಹುಡುಗರು, ನಮ್ಮ ಕೆಲಸ ಮಾಡುತ್ತಿದ್ದಾರೆ. ಅವರ ತಂಟೆಗೆ ಬರಬೇಡಿ" ಎಂದು ಒಬ್ಬ ಸ್ಥಳೀಯ ಗೂಂಡಾ ಅವರಿಗೆ ಎಚ್ಚರಿಕೆ ನೀಡಿದ. ಆದರೆ ಕೃಷ್ಣಕುಮಾರ್ ಶರ್ಮ ವಿಚಲಿತರಾಗಲಿಲ್ಲ. ಜನರಲ್ಲಿ ಜಾಗೃತಿ ಮೂಡಿಸಲು ಮಾದಕ ದ್ರವ್ಯ, ಕುಡಿತ ಮತ್ತು ಕೌಟುಂಬಿಕ ಹಿಂಸೆಯ ವಿರುದ್ಧದ ಬೀದಿ ನಾಟಕಗಳನ್ನು ಬಸ್ತಿಯಲ್ಲಿ ನಿಯತವಾಗಿ ಆಡಿಸಿದರು. ತಮ್ಮ ಶಾಲೆಯು ಶೈಕ್ಷಣಿಕ ಪ್ರಸಾರ ಕಾರ್ಯದಲ್ಲಿ ಗಂಭೀರವಾಗಿ ತೊಡಗಿಸಿಕೊಂಡಿದೆ ಎಂದು ಜನರಿಗೆ ತಿಳಿಸಲು ಅವರು ಈ ಮಾರ್ಗವನ್ನು ಆರಿಸಿಕೊಂಡಿದ್ದರು. ತಮ್ಮ ನಾಟಕೀಯ ಶೈಲಿಯಲ್ಲಿ ಪೋಷಕರೊಂದಿಗೆ ಮಾತನಾಡುತ್ತಾ ಯಾವ ಪೋಷಕರು ಶಿಕ್ಷಣವನ್ನು ಗಂಭೀರವಾಗಿ ಪರಿಗಣಿಸುತ್ತಾರೋ ಅಂತಹವರ ಮಕ್ಕಳನ್ನು ಮಾತ್ರ ಪ್ರವೇಶಕ್ಕೆ ಪರಿಗಣಿಸಲಾಗುತ್ತದೆ; ಇನ್ನುಳಿದವರು ಬೇರೆ ಶಾಲೆಗಳಿಗೆ ಹೋಗಬಹುದು ಎಂದು ಹೇಳಿದರು. ಪೋಷಕರನ್ನು ಓಲೈಸುವ ಮೂಲಕ ಅವರ ಮಕ್ಕಳನ್ನು ಕಳುಹಿಸುವಂತೆ ಬೇಡುವ ಬದಲಾಗಿ ಅವರು ಪೋಷಕರು ಶಿಕ್ಷಣವನ್ನು ಗಂಭೀರವಾಗಿ ಪರಗಣಿಸದಿದ್ದರೆ ತಮ್ಮ ಶಾಲೆಯಲ್ಲಿ ಅಂತಹವರ ಮಕ್ಕಳಿಗೆ ಸ್ಥಳವಿಲ್ಲವೆಂದು ಹೇಳಿಬಿಡುತ್ತಿದ್ದರು.

ಶಾಲೆಯ ಒಳಗೆ ಕೆಕೆಎಸ್ ಹಾಗೂ ಕೆಎನ್ಎಸ್ ಇಬ್ಬರೂ ಮಕ್ಕಳನ್ನು ತುಂಬಾ ಅಕ್ಕರೆಯಿಂದಲೂ ಜತನದಿಂದಲೂ ನೋಡಿಕೊಳ್ಳುತ್ತಿದ್ದರು. ಈ ಮಕ್ಕಳಲ್ಲಿ ಬಹುತೇಕರು ಬಡ ಹಾಗೂ ಕಷ್ಟಕರ ಸ್ಥಿತಿಯಲ್ಲಿರುವ ಕುಟುಂಬಗಳಿಂದ ಬಂದವರು ಎಂಬ ಸಂಪೂರ್ಣ ಅರಿವು ಅವರಿಗೆ ಇತ್ತು. ಈ ಮಧ್ಯೆ ಶಿಕ್ಷಾಮಿತ್ರರಾಗಿದ್ದ ರಾಜಕುಮಾರಿ ಎಂಬುವರನ್ನು ಖಾಯಂ ನೆಲೆಯ ಸಹಾಯಕ ಶಿಕ್ಷಕರಾಗಿ ಮತ್ತು ಇನ್ನೋರ್ವ ಶಿಕ್ಷಕಿಯಾಗಿ ಗೀತಾ ಎಂಬುವರನ್ನು ಹತ್ತಿರದ ಶಾಲೆಯೊಂದರಿಂದ ನಿಯೋಜನೆಯ ಮೇರೆಗೆ ಕರೆಸಿಕೊಳ್ಳುವಲ್ಲಿ ಕೆಕೆಎಸ್ ಅವರು ಯಶಸ್ವಿಯಾದರು. 2017ರಲ್ಲಿ

ದಾಖಲಾತಿಯು 187ಕ್ಕೆ ಏರಿತು (ನೂರಾಹತ್ತು ಹುಡುಗಿಯರು ಹಾಗೂ ಎಪ್ಪತ್ತೇಳು ಬಾಲಕರು). ಆದರೆ ಆ ಊರಿನಲ್ಲಿ ಇನ್ನೂ ಅನೇಕ ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಿರುವ ವಿಷಯ ಕೆಕೆಎಸ್ ಅವರಿಗೆ ತಿಳಿದಿತ್ತು. ಈ ಮಕ್ಕಳನ್ನೂ ಶಾಲೆಗೆ ಕರೆತರುವ ಪ್ರಯತ್ನಗಳನ್ನು ಅವರು ಮಾಡದೆ ಬಿಡಲಿಲ್ಲ.

ಈ ಶಾಲೆಯೊಳಗೆ ಶಿಕ್ಷಕರ ಗಮನವು ಕಲಿಕೆಯ ಮೇಲೆ ಕೇಂದ್ರೀಕೃತವಾಗಿತ್ತು; ಏನೇ ಬಂದರೂ ತಮ್ಮ ಶಾಲೆಯ ಮಕ್ಕಳು ಕಂಠಪಾಠ ಪದ್ಧತಿಯ ದಾಸರಾಗಬಾರದೆಂಬ ದೃಢವಾದ ಸಂಕಲ್ಪ ಇಬ್ಬರೂ ಶರ್ಮರದ್ದಾಗಿತ್ತು. ಕೆಕೆಎಸ್ ಹೀಗೆ ಹೇಳುತ್ತಾರೆ: 'ಸಾಂಪ್ರದಾಯಿಕ ವಿಧಾನದ ಪರೀಕ್ಷೆಗಳಲ್ಲಿ ನನ್ನ ಶಾಲೆಯ ಮಕ್ಕಳಿಗೆ ಸಾಧಾರಣ ಮಟ್ಟದ ಅಂಕವಷ್ಟೇ ದೊರೆತೀತು ಎಂಬ ಅರಿವು ನಮಗಿದೆ. ಮಕ್ಕಳು ಎಷ್ಟು ಚೆನ್ನಾಗಿ ಕಂಠಪಾಠ ಮಾಡಿದ್ದಾರೆ, ಅದು ಯಾವ ಪ್ರಮಾಣದಲ್ಲಿ ಉತ್ತರ ಪತ್ರಿಕೆಗೆ ವರ್ಗಾವಣೆಯಾಗುತ್ತದೆ ಎಂಬುದನ್ನಷ್ಟೇ ಈ ಪರೀಕ್ಷೆಗಳು ಅಳೆಯುವುದೇ ಅದಕ್ಕೆ ಕಾರಣ. ನಮ್ಮ ಮಕ್ಕಳು ವಿಷಯದ ಮೂಲ ಪರಿಕಲ್ಪನೆಯನ್ನು ಅರ್ಥಮಾಡಿಕೊಂಡು ಅದನ್ನು ತಮ್ಮದೇ ಮಾತುಗಳಲ್ಲಿ ಅಭಿವ್ಯಕ್ತಿಪಡಿಸಲು ಸಮರ್ಥರಾಗಬೇಕೆಂಬುದು ನಮ್ಮ ಉದ್ದೇಶ. ಮಕ್ಕಳು ಪ್ರಶ್ನೆ ಕೇಳಬೇಕು, ಪ್ರಶ್ನೆ ಕೇಳುವುದಿಲ್ಲ ಎಂದಾದರೆ ನಾವು ಚೆನ್ನಾಗಿ ಕಲಿಸುವುದಿಲ್ಲ ಎಂದೇ ಅರ್ಥ; ಅಂದರೆ ನಮ್ಮ ಶಾಲೆಯ ಶೈಕ್ಷಣಿಕ ವ್ಯವಸ್ಥೆ ಸೋಲುತ್ತಿದೆ ಎಂದೂ ಅರ್ಥ.' ಇಲ್ಲಿನ ಶಿಕ್ಷಕರು ಅತ್ಯಂತ ಶ್ರಮವಹಿಸಿ ಪ್ರತಿಯೊಂದು ಮಗುವಿನ ಕಲಿಕೆಯನ್ನು ವಿವರವಾಗಿ ಪ್ರಗತಿಯ ದಾಖಲೆಯಲ್ಲಿ ದಾಖಲಿಸಿರುತ್ತಾರೆ. ಪ್ರತಿಯೊಂದು ಮಗುವೂ ಕಲಿಯುವುದನ್ನು ಖಾತ್ರಿ ಪಡಿಸುವುದು ಒಂದು ನಿಜವಾದ ಸವಾಲೆಂಬುದು ಈ ದಾಖಲೆಯನ್ನು ನೋಡಿದಾಗ ಸ್ಪಷ್ಟವಾಗುತ್ತದೆ. ಈ ಕಲಿಕೆಯ ಪ್ರಗತಿಯ ದಾಖಲೆಗಳು ಶಿಕ್ಷಕರ ಮೌಲ್ಯಮಾಪನದ ಪ್ರಾಮಾಣಿಕತೆಯನ್ನೂ ಪ್ರತಿಬಿಂಬಿಸುತ್ತವೆ. ಇವು ಇತರರನ್ನು ಮೆಚ್ಚಿಸುವುದಕ್ಕಲ್ಲ. ಕೀರ್ತಿ ನಿಧಿ ಶರ್ಮ ಹೀಗೆ ಹೇಳುತ್ತಾರೆ – "ಸರಾಸರಿ ಹಾಜರಾತಿ ಪ್ರಮಾಣ ಸುಮಾರು ಶೇಕಡ 75ರಷ್ಟಿದೆ. ಮದುವೆ, ಹಬ್ಬ ಮುಂತಾದ ಸಂದರ್ಭಗಳಲ್ಲಿ ಅದು ಮತ್ತಷ್ಟು ಕಡಿಮೆಯಾಗುತ್ತದೆ. ಆಗ ಮಕ್ಕಳು ದೀರ್ಘಕಾಲ ತಮ್ಮ ಸ್ವಂತ ಊರುಗಳಿಗೆ ಹೋಗುತ್ತಾರೆ. ಕೆಕೆಎಸ್ ಹೇಳುತ್ತಾರೆ, 'ಮಕ್ಕಳು ಕಲಿಕೆಯನ್ನು ಪ್ರೀತಿಸುವಂತಾಗಬೇಕು. ಪುಸ್ತಕ ಓದುವುದು ಅವರಿಗೆ ಇಷ್ಟವಾಗಬೇಕು. ಹೊಸ ವಿಷಯ ತಿಳಿದುಕೊಳ್ಳುವ ಕುತೂಹಲ ಅವರಲ್ಲಿ ಮೂಡಬೇಕು. ನಮಗೆ ಬೇಕಾದ್ದು ಏನು? ಮಕ್ಕಳು ಕಲಿಕೆಯಲ್ಲಿ ಮುಂದುವರಿಯುವ ಆಸಕ್ತಿಯನ್ನು ಬೆಳೆಸಿಕೊಳ್ಳಬೇಕು. ಹುಡುಗಿಯರೂ ಕಲಿಕೆಯನ್ನು ಮುಂದುವರಿಸಬೇಕು. ನಮ್ಮಲ್ಲಿ ಐದನೇ ತರಗತಿ ಪೂರೈಸಿದ ಮಕ್ಕಳನ್ನು ನಾವು ಕರೆದೊಯ್ದು ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಆರನೇ ತರಗತಿಗೆ ಸೇರಿಸುತ್ತೇವೆ.'

ಫೌಂಡೇಷನ್‌ನ ಜೊತೆಗಿನ ಕೆಕೆಎಸ್ ಅವರ ಸಂಬಂಧ ಕುತೂಹಲಕರವಾದದ್ದು. "ಕಲಿಕಾ ಖಾತ್ರಿ ಕಾರ್ಯಕ್ರಮವು (Program - LGP ಪದಸೂಚಿ ನೋಡಿ) ಉಧಮ್‌ಸಿಂಗ್‌ನಗರದಲ್ಲಿ ಜಾರಿಯಾದ ದಿನಗಳಲ್ಲಿ ಫೌಂಡೇಷನ್ ಮೊತ್ತ ಮೊದಲು ಕಾರ್ಯವನ್ನು ಪ್ರಾರಂಭಿಸಿದಾಗ ಕೃಷ್ಣಕುಮಾರ್ ಶರ್ಮರು ಬಾಜ್‌ಪುರ್ ಬ್ಲಾಕ್‌ನ

ಶಿಕ್ಷಕರ ಸಂಘದ ಅಧ್ಯಕ್ಷರಾಗಿದ್ದರು. ಅವರಿಗೆ ಫೌಂಡೇಷನ್‌ನ ಉದ್ದೇಶಗಳ ಬಗ್ಗೆ ಆತಂಕಗಳಿದ್ದವು. 2007ರಲ್ಲಿ ಗದರ್‌ಪುರಕ್ಕೆ ಹೋದ ಮೇಲೆ ಫೌಂಡೇಷನ್ ಕಲಿಕಾ ಮೌಲ್ಯಮಾಪನ ಸುಧಾರಣೆಯ ಕಾರ್ಯಕ್ರಮವನ್ನು ಪರಿಚಯಿಸಿದ ರೀತಿಯನ್ನು ನೋಡಿ ಅವರಿಗೆ ಮನವರಿಕೆಯಾಯಿತು. ತನ್ನ ಗ್ರಹಿಕೆ ತಪ್ಪಾಯಿತೆಂಬ ಭಾವ ಅವರಲ್ಲಿ ಮೂಡಿ ಶಿಕ್ಷಕರ ಸಂಘದ ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆ ಕೊಟ್ಟು ಈ ಕಾರ್ಯಕ್ರಮದಲ್ಲಿ ಪೂರ್ಣ ಮನಸ್ಸಿನಿಂದ ತೊಡಗಿಕೊಂಡರು. ಭಾರದ್ವಾಜ್ ಎಂಬವರು ಆಗ ಗದರ್‌ಪುರದ ಬಿಇಓ ಆಗಿದ್ದು ಅವರೊಬ್ಬ ಸಜ್ಜನರಾಗಿದ್ದರು; ಕೆಕೆಎಸ್ ಅವರು ಭಾರದ್ವಾಜರನ್ನು ಗುರುವೆಂದು ಭಾವಿಸಿ ಗೌರವಿಸುತ್ತಿದ್ದರು. ಅವರಿಬ್ಬರೂ ಸೇರಿ ಬ್ಲಾಕ್ ಸಂಪನ್ಮೂಲ ಕೇಂದ್ರ (BRC)ವನ್ನು ಶಿಕ್ಷಕರ ನಡುವಿನ ಶೈಕ್ಷಣಿಕ ಚರ್ಚೆಗಳಿಗಾಗಿ ಮೀಸಲಾದ ಒಂದು ಕ್ರಿಯಾಶೀಲ ಕೇಂದ್ರವನ್ನಾಗಿ ಮಾಡಲು ಮುಂದಾದರು.

'ಆ ದಿನಗಳಲ್ಲಿ ವಾಟ್ಸ್ಯಾಪ್ ಇರಲಿಲ್ಲ. ನಾವು ಬಿಆರ್‌ಸಿಯಲ್ಲಿ ಸಭೆ ಕರೆದಾಗ ಪ್ರತಿಯೊಬ್ಬ ಶಿಕ್ಷಕನಿಗೂ ಫೋನ್ ಕರೆ ಮಾಡಿ ತಿಳಿಸಬೇಕಾಗಿತ್ತು. ಶಿಕ್ಷಕರು ಬರಲು ಪ್ರಾರಂಭಿಸಿದರು. ಎಲ್ಲ ಸಭೆಗಳನ್ನೂ ಶಾಲೆ ಮುಗಿದ ಮೇಲೆ ನಡೆಸಲಾಗುತ್ತಿತ್ತು. ಶಿಕ್ಷಕರ ಸಂಘವು ಇದನ್ನು ವಿರೋಧಿಸಿತು. ಆದರೆ ನಾವು ಅದನ್ನು ಲೆಕ್ಕಿಸಲಿಲ್ಲ. ಸಹಾಯಕ ಬ್ಲಾಕ್ ಸಂಪನ್ಮೂಲ ಅಧಿಕಾರಿ (ABRC) ಅನೂಪ್ ದತ್ತ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿ (BEO) ಭಾರದ್ವಾಜ್ ಅವರ ವರ್ಗಾವಣೆಯ ಅನಂತರವೂ ಅದನ್ನು ಮುಂದುವರಿಸಿದೆವು' ಎಂದು ಕೆಕೆಎಸ್ ಪ್ರಾರಂಭದ ದಿನಗಳಲ್ಲಿ ಈ ಶೈಕ್ಷಣಿಕ ಸುಧಾರಣೆಯ ಪ್ರಯತ್ನದ ಕತೆಯನ್ನು ಮುಂದಿಟ್ಟರು. ಬಹುದಿನಗಳ ಅನಂತರ ಗದರ್‌ಪುರ್‌ನಲ್ಲಿ ಸ್ವಯಂ ಶಿಕ್ಷಕರ ವೇದಿಕೆ (VTF) ಪ್ರಾರಂಭವಾದಾಗ ಕೃಷ್ಣಕುಮಾರ್ ಶರ್ಮರವರು ತಪ್ಪದೆ ಭಾಗವಹಿಸುವ ಸಕ್ರಿಯ ಸದಸ್ಯರಾಗಿದ್ದು ತಮಗೆ ಆಸಕ್ತಿಯುಳ್ಳ ವಿಷಯಗಳಲ್ಲಿ ಚರ್ಚೆಯನ್ನು ಮುನ್ನಡೆಸುತ್ತಿದ್ದರು. "ಈಗ ವಿಟಿಎಫ್ ಭದ್ರವಾಗಿ ಬೇರೂರಿದೆ, ಅನೇಕ ಶಿಕ್ಷಕರು ತಮ್ಮ ಮನೆಗಳಿಗೆ ಸಮೀಪದ ಶಿಕ್ಷಕರ ಕಲಿಕಾ ಕೇಂದ್ರ (TLC)ಗಳಲ್ಲಿ ಸೇರುತ್ತಿದ್ದಾರೆ. ಇದೊಂದು ಒಳ್ಳೆಯ ಉಪಕ್ರಮ. ಶಿಕ್ಷಕರಿಗೆ ಇದರಲ್ಲಿ ಆಸಕ್ತಿ ಇದೆ. ಅನೇಕರು ಬರುತ್ತಿದ್ದಾರೆ. 'ಇನ್‌ಸೇ ಮಿಲಿಯೆ' ಎಂಬ ಕಾರ್ಯಕ್ರಮವನ್ನೂ ಪ್ರಾರಂಭಿಸಿದ್ದೇವೆ. ಅದರಲ್ಲಿ ಸಾಧನೆ ಮಾಡಿರುವ ಶಿಕ್ಷಕರು ತಮ್ಮ ಅನುಭವಗಳನ್ನು ಹಂಚಿಕೊಳ್ಳುತ್ತಾರೆ..."

ಕೃಷ್ಣಕುಮಾರ್ ಶರ್ಮರು ಭಾಷಾ ಬೋಧನೆ ಬಗೆಗಿನ ಬೇಸಿಗೆಯ ಹಾಗೂ ಚಳಿಗಾಲದ ಶಿಬಿರಗಳೆರಡರಲ್ಲೂ ಭಾಗವಹಿಸಿದ್ದಾರೆ. ಅಲ್ಲಿ ಅವರು ಉತ್ತಮ ಸುಗಮಗಾರರ (facilitator) ಪಾತ್ರದ ಮೌಲ್ಯವನ್ನು ಗುರುತಿಸಿದರು. ಅವರ ಸಹೋದ್ಯೋಗಿ ಕೀರ್ತಿ ನಿಧಿ ಶರ್ಮರು ಫೌಂಡೇಷನ್‌ನ ದಿನೇಶ್‌ಪುರದ ಕಚೇರಿಯಲ್ಲಿ ನಡೆದ ಶಾಲಾ ನಾಯಕತ್ವ ಅಭಿವೃದ್ಧಿ ಕಾರ್ಯಕ್ರಮದಲ್ಲೂ (SLDP ಪದಸೂಚಿ ನೋಡಿ) ಇಂಗ್ಲಿಷ್ ಭಾಷಾ ಬೋಧನೆ ಕಾರ್ಯಾಗಾರದಲ್ಲೂ ಭಾಗವಹಿಸಿದ್ದರು. ಫೌಂಡೇಷನ್‌ನ ಉಧಮ್‌ಸಿಂಗ್‌ನಗರದ ಜಿಲ್ಲಾ ಸಂಸ್ಥೆಯು ಶಿಕ್ಷಕರು ಬರೆದ ಲೇಖನಗಳನ್ನು ಸೇರಿಸಿ ಭಾಷಾ ಕಲಿಕೆಗೆ ಸಂಬಂಧಿಸಿದ ಸಂಕಲನವನ್ನು ಹೊರತರಲು

ನಿರ್ಧರಿಸಿದಾಗ, ಕೃಷ್ಣಕುಮಾರ್ ಶರ್ಮ ಮುಂದಾಳತ್ವ ವಹಿಸಿದರು. 'ಕೋಶಿಷ್ ಜಾರಿ ಹೈ' ಎಂಬ ಹೆಸರಿನ ಆ ಸಂಕಲನ ಒಳ್ಳೆಯ ಶಿಕ್ಷಕರನ್ನು ಗುರುತಿಸಿ ಅವರ ಕಾರ್ಯಕ್ಕೆ ಧ್ವನಿಗೂಡಿಸುವ ಪ್ರಯತ್ನ ಎಂದು ಕೆಕೆಎಸ್ ಹೇಳುತ್ತಾರೆ.

ಕೆಕೆಎಸ್ ಮತ್ತು ಕೆಎನ್‌ಎಸ್ ಅವರು ಅತ್ಯಂತ ಆಪ್ತ ಸ್ನೇಹಿತರು. ಕೆಎನ್‌ಎಸ್ ಅವರ ತಂದೆ ಶಾಲೆಯೊಂದರ ನಿವೃತ್ತ ಪ್ರಾಂಶುಪಾಲರಾಗಿದ್ದು ಸಂಸ್ಕೃತ ಶಿಕ್ಷಕರಾಗಿದ್ದರು. 'ಕೋಶಿಷ್ ಜಾರಿ ಹೈ' ಸಂಕಲನವನ್ನು ಕೆಕೆಎಸ್ ಅವರು ಈ ಹಿರಿಯರಿಂದ ಬಿಡುಗಡೆ ಮಾಡಿಸಿದರು. ಈ ಇಬ್ಬರು ಶಿಕ್ಷಕರೂ ತಮ್ಮ ಸಂಬಳದಿಂದ ತಿಂಗಳಿಗೆ 2000/- ರೂ.ಗಳಷ್ಟು ಹಣವನ್ನು ಶಾಲೆಯಲ್ಲಿ ಮಕ್ಕಳಿಗೆ ಅಗತ್ಯವಿರುವ ವಸ್ತುಗಳನ್ನು ಕೊಳ್ಳಲು ನೀಡುತ್ತಾರೆ ಎಂಬುದು ನಮಗೆ ಕೆಲವು ಸ್ಥಳೀಯರಿಂದ ತಿಳಿಯಿತು. ಇದನ್ನು ಪ್ರಸ್ತಾಪಿಸಲು ಯತ್ನಿಸಿದಾಗ ಅವರಿಬ್ಬರೂ ಅದನ್ನು ನಿರ್ಲಕ್ಷಿಸಿ "ಇದು ಏನೇನೂ ಅಲ್ಲ; ಇನ್ನೂ ಹೆಚ್ಚಿನ ದೇಣಿಗೆ ನೀಡುವ ಸಹೃದಯರಾದ ಸ್ಥಳೀಯ ಆಸ್ಪತ್ರೆಯ ವೈದ್ಯರನ್ನು ನೋಡಿ (ಆ ವೈದ್ಯರು ಶಾಲೆಗೆ ನಿಯತವಾದ ಕಾಣಿಕೆ ನೀಡುತ್ತಾರೆ). ಅಂತಹವರ ಕೊಡುಗೆಗಳನ್ನು ನೀವು ಗುರುತಿಸಬೇಕು" ಎಂದರು.

---

## "ನನ್ನ ಶಾಲೆ ಚೆನ್ನಾಗಿದೆಯೇ? ನನ್ನ ಮಕ್ಕಳೂ ಇಲ್ಲಿ ಓದುತ್ತಾರೆ!"

**ಅಯೂಬ್ ಖಾನ್**

ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕೋಳೂರು ಎಂ
ಶಹಾಪುರ ಬ್ಲಾಕ್, ಯಾದಗಿರಿ ಜಿಲ್ಲೆ, ಕರ್ನಾಟಕ

---

ಇಪ್ಪತ್ತೈದು ವರ್ಷಗಳ ಅನುಭವವಿರುವ ನಲವತ್ತೇಳು ವರ್ಷ ವಯಸ್ಸಿನ ಹಿರಿಯ ಅಯೂಬ್ ಖಾನ್ ಅವರು ಯಾದಗಿರಿ ಜಿಲ್ಲೆಯ ಅರಕೇರಾ (ಬಿ)ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯನ್ನು 1992ರಲ್ಲಿ ಸೇರಿದರು. ಗೌರವಾನ್ವಿತ ಶಿಕ್ಷಕರಾಗಿ ಅನೇಕ ವರ್ಷಗಳ ಸೇವೆಯ ನಂತರ 2009ರಲ್ಲಿ ಸುರಪುರ ಬ್ಲಾಕಿನ ಕನ್ನೆಲ್ಲಿಯ ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯ ಶಿಕ್ಷಕರಾದರು. ನಾಲ್ಕು ವರ್ಷಗಳ ಅನಂತರ ಕೋಳೂರಿನ ಹಿರಿಯ ಪ್ರಾಥಮಿಕ ಶಾಲೆಗೆ ಮುಖ್ಯ ಶಿಕ್ಷಕರಾಗಿ ವರ್ಗಾವಣೆಯಾದರು. ಆದರೆ ಅವರು ಕೋಳೂರಿನಲ್ಲಿ ಏನು ಮಾಡಿದರು ಎಂದು ಹೇಳುವ ಮೊದಲು ಕನ್ನೆಲ್ಲಿಯಲ್ಲಿ ಏನು ಮಾಡಿದರು ಎಂದು ಹೇಳುತ್ತೇನೆ.

ಕನ್ನೆಲ್ಲಿ ವಿವಿಧ ರಾಜಕೀಯ ಪಕ್ಷಗಳ ಪ್ರಭಾವಗಳಿರುವ ಒಂದು ದೊಡ್ಡ ಗ್ರಾಮ. ಸಾಮಾನ್ಯವಾಗಿ ಆ ಶಾಲೆಗೆ ಮುಖ್ಯೋಪಾಧ್ಯಾಯರಾಗಿ ಹೋಗಲು ಯಾರೂ ಇಷ್ಟಪಡುತ್ತಿರಲಿಲ್ಲ. ಕನ್ನೆಲ್ಲಿಯ ಶಾಲೆಯಲ್ಲಿ ಆರುನೂರ ಇಪ್ಪತ್ತೈದು ಮಕ್ಕಳಿದ್ದರು. ಶಾಲೆಗೆ ಸಮುದಾಯದಿಂದ ಯಾವ ಬೆಂಬಲವೂ ಸಿಗುತ್ತಿರಲಿಲ್ಲ; ಅಲ್ಲಿ ಕಲಿಸಲು ಕಲಿಯಲು ಸೂಕ್ತ ವಾತಾವರಣ ಇರಲಿಲ್ಲ. ಮಧ್ಯಾಹ್ನದ ಬಿಸಿಯೂಟ ಕಾರ್ಯಕ್ರಮದಲ್ಲಿಯೂ ತುಂಬಾ ಕೊರತೆಗಳಿದ್ದವು. ಸರಿಯಾಗಿ ಕೆಲಸ ಮಾಡಲು ಸಾಧ್ಯವಾಗದಿರುವ ದೆಸೆಯಿಂದ ಶಿಕ್ಷಕರಲ್ಲಿ ಹತಾಶ ಭಾವನೆ ಮೂಡಿತ್ತು. ಅವರು

ಸದಾಕಾಲ ಮುಂದೇನಾಗುವುದೊ ಎನ್ನುವ ಅನಿಶ್ಚಿತತೆಯಲ್ಲೇ ಇರುತ್ತಿದ್ದರು. ಅಯೂಬ್ ಖಾನ್ ಅಂತಹ ಶಾಲೆಯ ಜವಾಬ್ದಾರಿಯನ್ನು ವಹಿಸಿಕೊಂಡರು. ಅವರು ಅಲ್ಲಿ ಇದ್ದ ನಾಲ್ಕು ವರ್ಷಗಳಲ್ಲಿ ಅಳಿಸಲಾಗದ ಹಾಗೂ ಹೆಮ್ಮೆ ಪಟ್ಟುಕೊಳ್ಳಬಹುದಾದ ಛಾಪನ್ನು ಮೂಡಿಸಿದರು. ಅಯೂಬ್ ಆ ಶಾಲೆಯ ಓರೆಕೋರೆಗಳನ್ನು ಒಂದೊಂದಾಗಿ ಸರಿಪಡಿಸುತ್ತಾ ಬಂದರು. ಅದು ನಿಧಾನವಾದ ಮತ್ತು ಶ್ರಮದಾಯಕವಾದ ಕೆಲಸವೆಂಬುದನ್ನು ಅವರು ಅರಿತಿದ್ದರು. ಆದರೆ ಕನ್ನೆಲ್ಲಿಯ ಶಾಲೆಯ ಸಮಸ್ಯೆಗಳ ಪರಿಹಾರಕ್ಕೆ ಅದೊಂದೇ ಮಾರ್ಗವಾಗಿತ್ತು. ಅವರು ಯೋಜನೆಯನ್ನು ಹಾಕಿಕೊಂಡು ವ್ಯಕ್ತಿಗಳು, ಸಣ್ಣಗುಂಪುಗಳು, ಶಿಕ್ಷಕರು ಹಾಗೂ ಸಮುದಾಯದೊಂದಿಗೆ ಸಭೆಗಳನ್ನು ನಡೆಸಿದರು. ಕನ್ನೆಲ್ಲಿಗೆ ತಮ್ಮ ಮನೆಯನ್ನು ಬದಲಿಸಿ ಕುಟುಂಬವನ್ನು ಅಲ್ಲಿಗೆ ತಂದು ತಮ್ಮ ಮಕ್ಕಳನ್ನು ಅದೇ ಶಾಲೆಗೆ ಸೇರಿಸುವ ಮೂಲಕ ಕನ್ನೆಲ್ಲಿಯ ಬಗ್ಗೆ ತಮಗಿರುವ ವಿಶ್ವಾಸವನ್ನು ನಿರೂಪಿಸಿದರು. 2010ರಲ್ಲಿ ಅಯೂಬ್ ತಮ್ಮ ಶಾಲೆಯ ಕೆಲವು ಮಕ್ಕಳಿಗಾದರೂ "ಆದರ್ಶ ವಿದ್ಯಾಲಯಕ್ಕೆ" (ಪದಸೂಚಿ ನೋಡಿ) ಪ್ರವೇಶ ಕೊಡಿಸುವ ಸಿದ್ಧತಾ ಕಾರ್ಯದ ಮೇಲೆ ಗಮನ ಹರಿಸಿದ್ದರು. ಹದಿನೆಂಟು ವಿದ್ಯಾರ್ಥಿಗಳನ್ನು ಮೊರಾರ್ಜಿ ದೇಸಾಯಿ ಶಾಲೆಗಳಿಗೆ ಸೇರಲು ಅರ್ಹತೆ ಗಳಿಸುವಂತೆ ಪ್ರೋತ್ಸಾಹಿಸಿ ತಯಾರು ಮಾಡಿದ್ದರು. ಒಬ್ಬ ಪ್ರತಿಭಾವಂತ ವಿದ್ಯಾರ್ಥಿಯನ್ನು ಗುರುತಿಸಿ ಅವನು ನವೋದಯ ಶಾಲೆ ಸೇರುವಂತೆ ಮಾಡಿದರು. ಅನಂತರದ ವರ್ಷಗಳಲ್ಲೂ ಅವರು ಈ ಪ್ರಯತ್ನವನ್ನು ಮುಂದುವರಿಸಿದರು. ಅಯೂಬ್ ಅವರ ಹೆಸರು ಬಲು ಬೇಗ ಹರಡಿತು. ಅವರು ರಾಜ್ಯ ಸರ್ಕಾರದ 'ಜನಮೆಚ್ಚಿದ ಶಿಕ್ಷಕ' ಪ್ರಶಸ್ತಿಯನ್ನು ಪಡೆದರು. 2011ನೇ ವರ್ಷದ ಹೊತ್ತಿಗೆ ಅವರ ಶಾಲೆಯು "ಬಾಲಸ್ನೇಹಿ ಶಾಲಾ" ಕಾರ್ಯಕ್ರಮದಡಿ (CFSI) ವಿಶೇಷ ಶಾಲೆಗಳಲ್ಲಿ ಒಂದು ಎಂಬ ಮನ್ನಣೆ ಪಡೆಯಿತು. ಅವರು ತಮ್ಮ ಸಾಮರ್ಥ್ಯದಿಂದ ಶಾಲಾ ವಾತಾವರಣದಲ್ಲಿ ತಂದ ಸುಧಾರಣೆಗಳ ದೆಸೆಯಿಂದ ಶಾಲೆಗೆ 2012ರ ಮಾರ್ಚ್‌ನಲ್ಲಿ ಪರಿಸರ ಮಿತ್ರ (Parisaramitra) ಪ್ರಶಸ್ತಿಯೂ ದೊರಕಿತು.

ಜುಲೈ 2013ರಲ್ಲಿ ಅಯೂಬ್ ಅವರು ಕೋಳೂರಿಗೆ ಬಂದಾಗ ಆ ಶಾಲೆಯಲ್ಲಿ ಕೇವಲ ಮೂವರು ಶಿಕ್ಷಕರಿದ್ದರು. ಐನೂರು ವಿದ್ಯಾರ್ಥಿಗಳನ್ನು ಹೊಂದಿದ್ದ ಈ ಶಾಲೆಯಲ್ಲಿ ವಿದ್ಯಾರ್ಥಿ ಶಿಕ್ಷಕರ ಅನುಪಾತ ಯಾರನ್ನಾದರೂ ಎದೆಗುಂದಿಸುವಂತಿತ್ತು. ಆದರೆ ಅಲ್ಲಿನ ಸರಾಸರಿ ಹಾಜರಾತಿ ಶೇಕಡ ಮೂವತ್ತರಷ್ಟಿತ್ತು. ಅಲ್ಲಿನ ಒಟ್ಟು ದಾಖಲಾದ 494 ವಿದ್ಯಾರ್ಥಿಗಳ ಪೈಕಿ ಕೇವಲ ಸುಮಾರು ನೂರ ಅರವತ್ತು ವಿದ್ಯಾರ್ಥಿಗಳು ಮಾತ್ರ ಹಾಜರಾಗುತ್ತಿದ್ದರು. ಇದರಿಂದ ಅಯೂಬ್ ಅವರಿಗೆ ಅಲ್ಲಿನ ಸ್ಥಿತಿಗತಿ ನಿಚ್ಚಳವಾಯಿತು. ಇಲ್ಲಿ ಕೂಡಾ ಅವರು ಮೊದಲು ಶಿಕ್ಷಕರೊಂದಿಗೆ ಮತ್ತು ಅನಂತರ ಸಮುದಾಯದೊಡನೆ ಪರಸ್ಪರ ವಿಶ್ವಾಸದ ಸೇತುವೆಯನ್ನು ಕಟ್ಟಿದರು. ಕನ್ನೆಲ್ಲಿಯಂತೆ ಅವರು ಕೋಳೂರಿನಲ್ಲೇ ಮನೆ ಮಾಡಿಕೊಂಡರು; ತಮ್ಮ ಇಬ್ಬರು ಮಕ್ಕಳನ್ನು ಅದೇ ಶಾಲೆಗೆ ಸೇರಿಸಿದರು. ಈ ಸವಾಲನ್ನು ಎದುರಿಸುವಲ್ಲಿ ವಿಶ್ವಾಸಾರ್ಹ ವ್ಯಕ್ತಿಗಳು ತಮ್ಮ ಕಡೆ ಇರಬೇಕಾಗಿರುವುದರ ಅಗತ್ಯವನ್ನು ಮನಗಂಡ ಅಯೂಬ್ ಅಂತಹ ಕೆಲವು ಪ್ರಮುಖರು ತಮ್ಮೊಡನೆ ಇರುವುದನ್ನು ಖಾತ್ರಿಪಡಿಸಿಕೊಂಡರು. ಒಬ್ಬರು – ಅವರ ಹಳೆಯ ಸಹೋದ್ಯೋಗಿ

ಹಾಗೂ ಅವರ ಅತ್ಯಂತ ನಿಷ್ಠಾವಂತ ಸಹವರ್ತಿಗಳಲ್ಲೊಬ್ಬರಾಗಿದ್ದ ಸಿದ್ಧರಾಮ ಹಾಗೂ ಇನ್ನೊಬ್ಬರು ಅದೇ ಶಾಲೆಯಲ್ಲಿ ವಿದ್ಯಾರ್ಥಿಯಾಗಿದ್ದು 2002ರಿಂದ ಕೋಳೂರಿನಲ್ಲೇ ಶಿಕ್ಷಕರಾಗಿದ್ದ ಮಲ್ಲಿಕಾರ್ಜುನ್. ಮಲ್ಲಿಕಾರ್ಜುನ್ ಅವರಿಗಿದ್ದ ಶಾಲೆಯ ಬಗೆಗಿನ ಭಾವನಾತ್ಮಕ ಸಂಬಂಧ ಅಯೂಬ್ ಅವರಿಗೆ ಅನುಕೂಲವಾಯಿತು. ಅವರು ಈ ಯುವ ಶಿಕ್ಷಕನನ್ನು ಕೋಳೂರಿನ ಸರ್ಕಾರಿ ಶಾಲೆಯ ಭವಿಷ್ಯವನ್ನು ಪರಿವರ್ತಿಸುವ ಕಾರ್ಯಕ್ಕೆ ಸಹಯೋಗಿಯನ್ನಾಗಿ ಮಾಡಿಕೊಂಡರು.

ಶಾಲೆಯಲ್ಲಿ ಚೈತನ್ಯವನ್ನು ತುಂಬಿ ಸಮುದಾಯದ ವಿಶ್ವಾಸವನ್ನು ಗಳಿಸಲು ಮಾಡಬೇಕಾದ ಕೆಲವು ಪ್ರಮುಖ ಕಾರ್ಯಗಳನ್ನು ಅಯೂಬ್ ಗುರುತಿಸಿದರು. ಶಾಲಾ ಮೇಳಗಳು ಜನ ಸಮುದಾಯದ ಮೇಲೆ ಬೀರುವ ಪರಿಣಾಮ ಏನೆಂದು ಅವರಿಗೆ ತಿಳಿದಿತ್ತು. ಅವರು ಭಾರತದ ಸಂವಿಧಾನವನ್ನು ಕುರಿತಾಗಿ ಮೇಳವೊಂದನ್ನು ಸಂಘಟಿಸಿದರು. ಪೋಷಕರನ್ನು ಭೇಟಿ ಮಾಡಿ ಅವರ ಸಾಮರ್ಥ್ಯಕ್ಕನುಗುಣವಾಗಿ ನಿಧಿ ಸಂಗ್ರಹಿಸುವಂತೆ ಅಯೂಬ್ ತಮ್ಮ ಸಹೋದ್ಯೋಗಿಗಳಿಗೆ ಹೇಳಿದರು. ಹಣ ಸಂಗ್ರಹದ ಜೊತೆಗೆ ಸಮುದಾಯದೊಡನೆ ಸಂವಹನ ಸಾಧಿಸುವ ಒಂದು ಮಾರ್ಗವೂ ಅದಾಗಿತ್ತು. ಐವತ್ತೈದು ಸಾವಿರ ರೂಪಾಯಿ ಸಂಗ್ರಹವಾಯಿತು. ಈ ಮೇಳವು ಶಿಕ್ಷಕರನ್ನು, ವಿದ್ಯಾರ್ಥಿಗಳನ್ನು ಮತ್ತು ಸಮುದಾಯವನ್ನು ಒಟ್ಟಿಗೆ ತಂದು ಶಾಲೆಯಲ್ಲಿನ ಮಕ್ಕಳ ಕಲಿಕೆ ಮತ್ತು ಪ್ರಗತಿಯ ಬಗ್ಗೆ ಶಾಲೆಯ ಬದ್ಧತೆಯನ್ನು ನಿರೂಪಿಸಲು ಸಮರ್ಥವಾಯಿತು. ಜಿಲ್ಲಾ ಪಂಚಾಯಿತಿಯ ಅಧ್ಯಕ್ಷರೂ ಸುರಪುರ ಬ್ಲಾಕ್‌ನ ಶಾಸಕರೂ ಮೇಳದಲ್ಲಿ ಹಾಜರಿದ್ದರು. ಪೋಷಕರನ್ನು ಒಳಗೊಂಡಂತೆ ಅಲ್ಲಿಗೆ ಭೇಟಿ ನೀಡಿದವರೆಲ್ಲ ಶಾಲೆಯು ಸಂಘಟಿಸಿದ ಆ ಕಾರ್ಯಕ್ರಮವನ್ನು ಮೆಚ್ಚಿಕೊಂಡರು. ಅಯೂಬ್ ತಮ್ಮ ಮೊದಲ ಗುರಿಯನ್ನು ಸಾಧಿಸಿದರು. ಶಾಲೆಯು ಜನ ಸಮುದಾಯದಲ್ಲಿ ಏಕತೆಯನ್ನು ಮೂಡಿಸಿತ್ತು.

ಮಕ್ಕಳ ಕಲಿಕೆಯ ಮಟ್ಟ, ಹಾಜರಾತಿ ಹಾಗೂ ಮನೆಯಲ್ಲಿ ಇದ್ದ ಬೆಂಬಲದ ವಾತಾವರಣವನ್ನು ಅಯೂಬ್ ಸಭೆಗಳನ್ನು ನಡೆಸಿ ಶಿಕ್ಷಕರೊಂದಿಗೆ ಚರ್ಚಿಸಿದರು. ಶಿಕ್ಷಕರು ತಮ್ಮ ಜವಾಬ್ದಾರಿಯನ್ನು ಗಂಭೀರವಾಗಿ ತೆಗೆದುಕೊಂಡರು. ಮಕ್ಕಳಿಗೆ ನವೋದಯ, ಆದರ್ಶ ಮತ್ತು ಮೊರಾರ್ಜಿ ಶಾಲೆಗಳಿಗೆ ಪ್ರವೇಶ ಸಿಗುವಂತೆ ತಯಾರು ಮಾಡಲು ಸಹಾಯವಾಗುತ್ತದೆ ಎಂಬ ಉದ್ದೇಶದಿಂದ ಅಯೂಬ್ ಮಂಡ್ಯ ಮತ್ತು ದೊಡ್ಡಬಳ್ಳಾಪುರಗಳಿಂದ ಶಿಕ್ಷಕರನ್ನು ಕರೆಸಿಕೊಂಡರು. ಆ ಶಿಕ್ಷಕರು ಪ್ರವೇಶ ಪರೀಕ್ಷೆಗಳಿಗೆ ಸಾಮಾನ್ಯವಾಗಿ ಮಾನಕವಾದ ಹಲವಾರು ತರಗತಿಗಳ ಬಹು ಆಯ್ಕೆಯ ಪ್ರಶ್ನೆಗಳ (Multiple Choice Questions - MCQs) ಹಲವಾರು ಅವಧಿಗಳ ತರಗತಿಗಳನ್ನು ನಡೆಸಿ ಮಕ್ಕಳ ಬೌದ್ಧಿಕ ಸಾಮರ್ಥ್ಯದ ಪರೀಕ್ಷೆಗಳನ್ನು ಮಾಡಿದರು. ಆ ರೀತಿಯ ಅಭ್ಯಾಸಗಳು ಮತ್ತು ಶಿಸ್ತಿನ ದಿನಚರಿಗೆ ಒಂದು ನಿರ್ದಿಷ್ಟ ಉದ್ದೇಶ ಮತ್ತು ಅರ್ಥವಿರುತ್ತಿತ್ತು. ಶಿಕ್ಷಕ ಮಲ್ಲಿಕಾರ್ಜುನ್ ಮಾತಿನಲ್ಲಿ ಹೇಳುವುದಾದರೆ: "ಹಿಂದೆ ಶಾಲೆಗೆ ತೀವ್ರವಾಗಿ ನಾಯಕತ್ವ ಮತ್ತು ಸಮನ್ವಯದ ಕೊರತೆಯಿತ್ತು. ಆದರೆ ಈಗ ಎಲ್ಲದಕ್ಕೂ ಒಂದು ತುರ್ತು ಮತ್ತು ಉದ್ದೇಶ ಕೂಡಿ ಬಂದಿದೆ." ಶಿಕ್ಷಕರನ್ನು ಅಯೂಬ್ ಅವರು ಸಕ್ರಿಯವಾದ ಶಕ್ತಿಯುತ ತಂಡವಾಗಿ ಸಂಘಟಿಸಿದರು. ಶಿಕ್ಷಕರ ಪುನರವಲೋಕನದ

ಸಭೆಗಳನ್ನು ನಿಯತವಾಗಿ ನಡೆಸಿದರು. ವಿದ್ಯಾರ್ಥಿಗಳ ಪ್ರಗತಿಯ ನಿಯತಕಾಲಿಕ ಮೌಲ್ಯಮಾಪನ ಹಾಗೂ ಅನೌಪಚಾರಿಕವಾದ ದೈನಂದಿನ ಪರ್ಯಾಲೋಚನೆ ಇವುಗಳನ್ನು ಖಾತ್ರಿಪಡಿಸಿದರು. ಪೋಷಕರು ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಆಸಕ್ತಿ ವಹಿಸುವಂತೆ ಪ್ರೋತ್ಸಾಹಿಸಿ ಅವರಿಗೆ ಮಕ್ಕಳ ದಿನನಿತ್ಯದ ಪ್ರಗತಿಯ ಬಗ್ಗೆ ಮಾಹಿತಿಯನ್ನು ಒದಗಿಸಿದರು. ಸಮಯಕ್ಕೆ ಸರಿಯಾಗಿ ಪ್ರಾರಂಭವಾಗುವ ಬೆಳಗಿನ ಪ್ರಾರ್ಥನಾ ಸಭೆ ಶಾಲಾ ದಿನದ ಒಂದು ಮಹತ್ವಪೂರ್ಣ ಭಾಗವಾಯಿತು. ಅದು ಎಲ್ಲ ಮಕ್ಕಳಿಗೂ ಸಕ್ರಿಯವಾಗಿ ಭಾಗವಹಿಸುವ ಅವಕಾಶವನ್ನು ಒದಗಿಸಿತು.

"ಬಾಲಸ್ನೇಹಿ ಶಾಲಾ" ಕಾರ್ಯಕ್ರಮವು ಸುರಪುರದಲ್ಲಿ ನಡೆದ ಸಂದರ್ಭದಲ್ಲಿ ಅಯೂಬ್ ಅವರು ಅತ್ಯಂತ ಪ್ರಜ್ಞಾಪೂರ್ವಕ ಶಿಕ್ಷಕರುಗಳಲ್ಲಿ ಒಬ್ಬರಾಗಿದ್ದರು. ತಾವು ಕನ್ನೆಲ್ಲಿಯಲ್ಲಿದ್ದಾಗ ಶಾಲಾ ನಿರ್ವಹಣೆಯ ಹಲವಾರು ವಿಚಾರಗಳನ್ನು ತಿಳಿದುಕೊಂಡುದಾಗಿ ಅವರು ಹೇಳುತ್ತಾರೆ. "ನಲಿ–ಕಲಿ" ಕಾರ್ಯಕ್ರಮವನ್ನು ಅದರ ಉದ್ದೇಶಕ್ಕೆ ಅನುಸಾರವಾಗಿ ಜಾರಿಗೊಳಿಸಿದರೆ ಅದರ ನಿಜವಾದ ಶಕ್ತಿ ಏನು ಎಂಬುದೂ ತನಗೆ ಅಲ್ಲಿ ತಿಳಿಯಿತೆಂದು ಅವರು ಹೇಳುತ್ತಾರೆ ("ನಲಿ–ಕಲಿ"ಯ ಬಗೆಗಿನ ವಿವರಗಳಿಗಾಗಿ ಪದಸೂಚಿ ನೋಡಿ). ಶಾಲಾ ನಾಯಕತ್ವ ಅಭಿವೃದ್ಧಿ ಕಾರ್ಯಕ್ರಮಕ್ಕೆ (School Leadership Development Programme- SLDP) ಹಾಜರಾಗಿ ತಮ್ಮ ಯೋಜನಾ ಕಾರ್ಯದ ಭಾಗವಾಗಿ ಅಯೂಬ್ ಒಂದು ಪರಿಣಾಮಕಾರಿ ಶಾಲಾ ಗ್ರಂಥಾಲಯವನ್ನು ರೂಪಿಸಿದರಲ್ಲದೆ ಕಲಿಕೆಯಲ್ಲಿ ಹಿಂದೆ ಬಿದ್ದ ವಿದ್ಯಾರ್ಥಿಗಳಿಗಾಗಿ ಪರಿಹಾರ ಬೋಧನಾ ತರಗತಿಗಳನ್ನು ವಿನ್ಯಾಸಗೊಳಿಸಿದರು.

ಸಮಸ್ಯಾತ್ಮಕವಾಗಿದ್ದ ರಾಜಕೀಯವಾಗಿ ನಿಗಿನಿಗಿಯಾಗಿ ಉರಿಯುತ್ತಿದ್ದ ಸಮುದಾಯದೊಂದಿಗೆ ಅವರು ಜಾಣತನದಿಂದ ವ್ಯವಹರಿಸಿದರು. "ಸಮುದಾಯಕ್ಕೂ ಶಾಲೆಗೂ ಸಂಘರ್ಷ ಉಂಟಾದರೆ ಅದರಿಂದ ನಿಮ್ಮ ಮಕ್ಕಳಿಗೆ ತೊಂದರೆಯಾಗುತ್ತದೆ. ದಯವಿಟ್ಟು ಶಾಲೆಗೆ ರಾಜಕೀಯವನ್ನು ತರಬೇಡಿ. ನಮ್ಮಲ್ಲಿ ವಿಶ್ವಾಸವಿಡಿ. ನಿಮ್ಮ ಮಕ್ಕಳು ಚೆನ್ನಾಗಿ ಮುಂದೆ ಬರುತ್ತಾರೆ" ಎಂದು ಅವರು ಪದೇಪದೇ ಹೇಳುತ್ತಿದ್ದರು. ಅಯೂಬ್ ಶಾಲೆಯ ಹಣಕಾಸು ವ್ಯವಹಾರವನ್ನು ಪಾರದರ್ಶಕವಾಗಿಟ್ಟಿದ್ದರು. ಶಾಲೆಯ ಬ್ಯಾಂಕ್ ಪಾಸ್ ಬುಕ್ ಮತ್ತು ಬರೆದ ಚೆಕ್‌ಗಳ ಪ್ರತಿಗಳನ್ನು ಅವರು ಎಲ್ಲರೊಂದಿಗೆ ಹಂಚಿಕೊಂಡಿದ್ದರು. ಇದರಿಂದ ಸಾರ್ವಜನಿಕರಿಗೆ ಶಾಲೆಯು ಯಾವ ಬಾಬ್ತುಗಳಲ್ಲಿ ಎಷ್ಟು ಖರ್ಚು ಮಾಡುತ್ತಿದೆಯೆಂಬುದು ತಿಳಿಯುತ್ತಿತ್ತು. ಯಾವ ರೋಗಕ್ಕೆ ಯಾವ ಮದ್ದು ಕೊಡಬೇಕು ಎಂಬುದರಲ್ಲಿ ಅಯೂಬ್ ಚತುರರಾಗಿದ್ದರು. ಆ ಪ್ರದೇಶದಲ್ಲಿ ವಾಲ್ಮೀಕಿ ಜನಾಂಗದವರೇ ಹೆಚ್ಚಾಗಿರುವುದರಿಂದ ಶಾಲೆಯಲ್ಲಿ ವಾಲ್ಮೀಕಿ ದಿನಾಚರಣೆಯನ್ನು ಸಂಘಟಿಸಿದರು. ಅಂದು ಶಾಲೆಯ ಆವರಣವನ್ನು ಶುಚಿಮಾಡಿ ಸುಂದರವಾಗಿ ಅಲಂಕರಿಸಿದರು. ಇದರಿಂದ ಆ ಸಮುದಾಯದವರು ಸಂತೋಷಪಟ್ಟರು. ಆ ಶಾಲೆಯಲ್ಲಿ ಹನ್ನೆರಡು ವರ್ಷ ಸೇವೆ ಸಲ್ಲಿಸಿರುವ ಶಿಕ್ಷಕರಿಗೆ ಗೌರವ ಸೂಚಕವಾಗಿ ಒಂದು ಸಾರ್ವಜನಿಕ ಕಾರ್ಯಕ್ರಮವನ್ನು ಆಯೋಜಿಸಿ, ಆ ಶಿಕ್ಷಕರ ಪತಿ – ಪತ್ನಿಯರನ್ನೂ ಆಹ್ವಾನಿಸಿ ತಮ್ಮದೇ ವಿಶಿಷ್ಟ ರೀತಿಯಲ್ಲಿ ತಮ್ಮ ಸಂಘಟನಾ ಚಾತುರ್ಯವನ್ನು ತೋರಿದರು.

ಶಾಲೆಯಲ್ಲಿ ಹಾಜರಾತಿ ಪ್ರಮಾಣ 2013ರಲ್ಲಿನ ನೂರಾ ಅರವತ್ತರಿಂದ ಕ್ರಮೇಣ ಏರುತ್ತಾ 2017ರಲ್ಲಿ ಮೂರುನೂರ ಐವತ್ತಕ್ಕೆ ಬಂತು. ಹಿಂದೆ ವರ್ಗಾವಣೆ ಪತ್ರ ಪಡೆದು ಶಾಲೆಯನ್ನು ಬಿಟ್ಟು ಹೋಗಿದ್ದ ವಿದ್ಯಾರ್ಥಿಗಳು ಮರಳಿ ಅದೇ ಶಾಲೆಗೆ ಬರಲಾರಂಭಿಸಿದರು. ಅಯೂಬ್ ಅವರಲ್ಲಿ ಈಗ ಆತ್ಮವಿಶ್ವಾಸವೂ ಧೈರ್ಯವೂ ತುಂಬಿದೆ. ಈ ಶಾಲೆ ತಮ್ಮದು ಎಂಬ ಅವಿನಾಭಾವ ಅವರಲ್ಲಿದೆ. ಅಲ್ಲಿ ಅವರು ಒಂದು ಒಳ್ಳೆಯ ತಂಡವನ್ನು ಕಟ್ಟಿದ್ದಾರೆ. 2016ರಲ್ಲಿ ಅಯೂಬ್ ಜಿಲ್ಲಾ ಮಟ್ಟದ "ಉತ್ತಮ ಶಿಕ್ಷಕ ಪುರಸ್ಕಾರ" ವನ್ನು ಪಡೆದರು. ಕೋಳೂರು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಕೀರ್ತಿ ಸುತ್ತಲೂ ಹರಡಿದೆ. ಬದಲಾವಣೆಯ ಗಾಳಿ ಸುರಪುರದಾಚೆಗೂ ಬೀಸತೊಡಗಿದೆ. ತಮ್ಮ ಬ್ಲಾಕ್‌ನ ಮುಖ್ಯ ಶಿಕ್ಷಕರೆಲ್ಲರೂ ಕೋಳೂರಿನ ಶಾಲೆಗೆ ಹೋಗಿ ಅಯೂಬ್ ಶಾಲೆಯನ್ನು ನಡೆಸುವ ರೀತಿಯನ್ನು ನೋಡಿ ತಿಳಿಯುವಂತೆ ಪಕ್ಕದ ಬ್ಲಾಕಿನ ಶಿಕ್ಷಣಾಧಿಕಾರಿ ಹೇಳಿದರಂತೆ. ಕೋಳೂರಿನ ಶಾಲೆ ಈಗ ಮಾದರಿ ಶಾಲೆಯಾಗಿ ಬದಲಾಗಿದೆ.

---

## ನಿಮಗೆ ಎಂತಹ ಶಾಲೆ ಬೇಕು?

**ಹರೀಶ್‌ಚಂದ್ರ ಸಿಂಹ ರಾವತ್**

ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆ, ಶಿವಲಾಲ್‌ಪುರ್ ಡಲ್ಲು, ಕಾಶೀಪುರ್
ಉಧಮ್‌ಸಿಂಗ್‌ನಗರ ಜಿಲ್ಲೆ, ಉತ್ತರಾಖಂಡ್

---

ಕೆಲವು ಶಾಲೆಗಳು ಮುಖ್ಯೋಪಾಧ್ಯಾಯರ ಚೈತನ್ಯಶೀಲತೆಯಿಂದಲೂ ಸಾಮರ್ಥ್ಯದ ದೆಸೆಯಿಂದಲೂ ಉತ್ತಮವಾಗಿ ಕೆಲಸ ಮಾಡುತ್ತವೆ. ಶಾಲೆಯ ಪ್ರತಿಯೊಂದು ವಿಷಯದ ಮೇಲೂ ಅವರ ಕಾರ್ಯಶೀಲತೆಯ ಗುರುತನ್ನು ಕಾಣುವುದು ಸಾಧ್ಯ. ಅಂತಹ ನಾಯಕತ್ವದ ಗುಣವಿರುವ ವ್ಯಕ್ತಿಗಳು ಆ ಸ್ಥಳವನ್ನು ಬಿಟ್ಟಾಗ ಆ ಶಾಲೆ ಸಾಧಾರಣ ಮಟ್ಟಕ್ಕೆ ಕುಸಿದು ಹೋಗುವ ಅಪಾಯವೂ ಇರುತ್ತದೆ. ನಾನು ಭೇಟಿ ನೀಡಿದ ಹಲವಾರು ಶಾಲೆಗಳಿಗೆ ಈ ಎಚ್ಚರಿಕೆ ಅನ್ವಯವಾಗಬಹುದು. ನಾನು ಇದನ್ನು ಇಲ್ಲಿ ಹೇಳುವ ಕಾರಣವೆಂದರೆ ಶಿವಲಾಲ್‌ಪುರ್ ಡಲ್ಲುವಿನ ಮಾದರಿ ಪ್ರಾಥಮಿಕ ಶಾಲೆ ಅತ್ಯಂತ ಚಟುವಟಿಕೆಯಿಂದ ಕೂಡಿ ಪ್ರಗತಿಯನ್ನು ಕಂಡಿತ್ತು. ಈ ಶಾಲೆಯ ಅಭಿವೃದ್ಧಿ ಅದರ ಮುಖ್ಯ ಶಿಕ್ಷಕರ ಅಸಾಧಾರಣ ಕಾಣ್ಕೆ ಹಾಗೂ ಸಾಮರ್ಥ್ಯವನ್ನು ಅವಲಂಬಿಸಿತ್ತು.

ಹರೀಶ್‌ಚಂದ್ರ ಸಿಂಗ್ ರಾವತ್ ಅವರ ಹುಟ್ಟೂರು ಅಲ್ಮೋರ. 1996ರಲ್ಲಿ ಶಿಕ್ಷಣ ಇಲಾಖೆಯನ್ನು ಸೇರಿದರು. ಇಂಟರ್‌ಮೀಡಿಯಟ್ ಪೂರ್ಣಗೊಳಿಸಿ, ದೈಹಿಕ ಶಿಕ್ಷಣದಲ್ಲಿ ಪ್ರಮಾಣ ಪತ್ರ ಪಡೆದಿದ್ದಾರೆ. ಭಾಗೇಶ್ವರ್ ಜಿಲ್ಲೆಯಲ್ಲಿ ಆರು ವರ್ಷ ಸೇವೆ ಸಲ್ಲಿಸಿ ಅನಂತರ 2013ರವರೆಗೂ ಬರ್‌ಖೇಡಾಪಾಂಡೆ ಪ್ರಾಥಮಿಕ ಶಾಲೆಯಲ್ಲಿ ಕೆಲಸ ಮಾಡಿದರು. ಅದು ಆರುನೂರ ಐವತ್ತು ವಿದ್ಯಾರ್ಥಿಗಳನ್ನು ಹೊಂದಿದ್ದ ಬಹುದೊಡ್ಡ ಶಾಲೆಯಾಗಿತ್ತು. ಉಧಮ್‌ಸಿಂಗ್‌ನಗರದ ಬೇರೆ ಶಾಲೆಗಳೂ ದೊಡ್ಡವೇ ಆಗಿದ್ದವು. ಫೌಂಡೇಷನ್‌ನ ಜನ ಆ ಶಾಲೆಯನ್ನು ಸುಲಭವಾಗಿ ಮರೆಯಲು ಸಾಧ್ಯವಿಲ್ಲ. ಆ ಶಾಲೆ LGPಯಲ್ಲಿ ಭಾಗವಹಿಸಿದ ಸಂದರ್ಭದಲ್ಲಿ ಮೌಖಿಕ ಮೌಲ್ಯಮಾಪನಕ್ಕಾಗಿ ಜಿಲ್ಲೆಯ

ಅಧಿಕಾರಿಗಳು ಮೌಲ್ಯಮಾಪಕರ ಅನೇಕ ತಂಡಗಳನ್ನು ರಚಿಸಬೇಕಾಯಿತು. ಹರೀಶ್ ಅವರೂ ಮೌಲ್ಯಮಾಪಕರ ತಂಡದಲ್ಲಿದ್ದರು. ಆ ಜಿಲ್ಲೆಯ ಹಲವಾರು ಶಾಲೆಗಳಲ್ಲಿ ಈ ಮೌಲ್ಯಮಾಪನ ನಡೆಯಿತು.

2013ರಲ್ಲಿ ಹರೀಶ್ ಅವರು ಶಿವಲಾಲ್‌ಪುರ್ ಡಲ್ಲು ಶಾಲೆಗೆ ಮುಖ್ಯ ಶಿಕ್ಷಕರಾಗಿ ವರ್ಗಾವಣೆಯಾಗಿ ಬಂದರು. ಇದು ಕೇವಲ ಎಪ್ಪತ್ತು ಮಕ್ಕಳು ಮತ್ತು ಇಬ್ಬರು ಶಿಕ್ಷಕರನ್ನು ಹೊಂದಿದ್ದ ಅತಿ ಚಿಕ್ಕ ಶಾಲೆಯಾಗಿತ್ತು. ಅವರು ಅದರ ಜವಾಬ್ದಾರಿ ವಹಿಸಿಕೊಂಡವರೇ ಮೊದಲನೆಯದಾಗಿ ಶಾಲಾ ಆಡಳಿತ ಸಮಿತಿ (School Management Committee - SMC)ಯನ್ನು ಬಲಪಡಿಸಿದರು. ಸಮಿತಿಯ ಸದಸ್ಯರ ಜವಾಬ್ದಾರಿಗಳನ್ನು ವಿವರಿಸಿ ಶಾಲೆಯ ಸುಧಾರಣೆಗೂ ಪರಿಣಾಮಕಾರಿ ಕಾರ್ಯನಿರ್ವಹಣೆಗೂ ಸಮಿತಿಯ ಪಾತ್ರ ನಿರ್ಣಾಯಕವಾದುದೆಂದು ಮನವರಿಕೆ ಮಾಡಿದರು. ಇದಾದ ಅನಂತರ ಹರೀಶ್ ಎಲ್ಲ ಪೋಷಕರ ಮತ್ತು ಸಮುದಾಯದವರ ಸಭೆಯನ್ನು ಕರೆದು ಅವರಿಗೆ ಶಾಲೆಯ ಉದ್ದೇಶಗಳ ಬಗ್ಗೆ ವಿವರಿಸಿ ಆ ಗುರಿಗಳನ್ನು ಸಾಧಿಸಲು ಅವರ ಬೆಂಬಲ ಯಾವ ರೂಪದಲ್ಲೆಲ್ಲ ಬೇಕಾಗುವುದೆಂದು ತಿಳಿಸಿದರು. 'ಶಿಕ್ಷಕರು, ಪೋಷಕರು ಮತ್ತು ಮಕ್ಕಳು ಒಟ್ಟು ಸೇರಿದಾಗ ಮಾತ್ರ ಒಂದು ಶಾಲೆ ಚೆನ್ನಾಗಿ ನಡೆದೀತು' ಎಂಬ ಸೂತ್ರವನ್ನು ಅವರು ಬಿಡಿಸಿಟ್ಟರು.

ಬೆಳಗಿನ ಪ್ರಾರ್ಥನಾ ಸಭೆಯ ಗುಣಮಟ್ಟವನ್ನು ಹೆಚ್ಚಿಸಿ ಉಪಯುಕ್ತವನ್ನಾಗಿ ಮಾಡುವುದು ಅವರ ಮುಂದಿನ ಹೆಜ್ಜೆಯಾಗಿತ್ತು. "ಪ್ರಾರ್ಥನಾ ಸಭೆ ಎಲ್ಲರೂ ನೋಡುವಂತಹದು. ಮುಂದೆ ಶಾಲೆಯೊಳಗೆ ಏನು ನಡೆಯುತ್ತದೆ ಎಂಬುದರ ದಿಕ್ಸೂಚಿ ಅದು" ಎನ್ನುತ್ತಾರೆ ಹರೀಶ್. ಪ್ರಾರ್ಥನಾ ಸಭೆಯ ಜವಾಬ್ದಾರಿಯನ್ನು ಮಕ್ಕಳು ತೆಗೆದುಕೊಳ್ಳುವಂತೆ ಮಾಡಿದರು. ಪೋಷಕರು ಬಂದು ಸಭೆಯಲ್ಲಿ ವೀಕ್ಷಕರಾಗಿರುವಂತೆ ಪ್ರೋತ್ಸಾಹಿಸಿದರು. ಪೋಷಕರು ಮಕ್ಕಳನ್ನು ಖಾಸಗಿ ಶಾಲೆಯಿಂದ ಬಿಡಿಸಿ ಸರ್ಕಾರಿ ಶಾಲೆಗೆ ಸೇರಿಸಲು ಈ ಎರಡೇ ಕ್ರಮಗಳು ಸಾಕೆಂದು ಹರೀಶ್ ನಂಬುತ್ತಾರೆ. 2014ರ ವೇಳೆಗೆ ಮಕ್ಕಳ ಸಂಖ್ಯೆ ನೂರ ಇಪ್ಪತ್ತೆಂಟಕ್ಕೆ ಏರಿತು. ಈ ಮಧ್ಯೆ ಇನ್ನಷ್ಟು ಶಿಕ್ಷಕರ ಅಗತ್ಯ ಬಹಳ ತೀವ್ರವಾಗಿತ್ತು. ಇಲಾಖೆಯಲ್ಲಿ ಒಂದು ವಿಚಿತ್ರವಾದ ನಿಯಮವಿತ್ತು. 'ದುರ್ಗಮ' ಎಂದು ವರ್ಗೀಕರಿಸಲಾದ, ಪ್ರತಿಕೂಲ ಪರಿಸ್ಥಿತಿಯಲ್ಲಿರುವ ಶಾಲೆಗಳಿಗೆ, ಅಲ್ಲಿ ವಿದ್ಯಾರ್ಥಿ–ಶಿಕ್ಷಕ ಅನುಪಾತ ಅನುಕೂಲಕರವೇ ಇದ್ದರೂ ಹೆಚ್ಚು ಶಿಕ್ಷಕರನ್ನು ನೇಮಿಸಲಾಗುತ್ತಿತ್ತು; ಆದರೆ 'ಸುಗಮ' ಶಾಲೆಗಳಲ್ಲಿ ಈ ಅನುಪಾತ ಪ್ರತಿಕೂಲವಿದ್ದರೂ ಅವರಿಗೆ ಹೆಚ್ಚು ಶಿಕ್ಷಕರನ್ನು ಹೊಂದುವ ಭಾಗ್ಯ ದೊರೆಯುತ್ತಿರಲಿಲ್ಲ. ಅದೇನೇ ಇದ್ದರೂ ಇಲಾಖೆಯು ತನ್ನ ಕಾರ್ಯಾಚರಣೆಯಲ್ಲಿ ವಾಸ್ತವವನ್ನು ಮನಗಂಡು ತತ್‌ಕ್ಷಣದ ಅಗತ್ಯಗಳನ್ನು ಪರಿಗಣಿಸಿ ಶಿಕ್ಷಕರನ್ನು "ದುರ್ಗಮ"ದಿಂದ "ಸುಗಮ" ಶಾಲೆಗಳಿಗೆ ನಿಯೋಜನೆಯ ಮೇಲೆ ಕಳುಹಿಸಿ ಕೊಡುತ್ತದೆ. ಹೀಗಾಗಿ 2014–15ರಲ್ಲಿ ಹರೀಶ್ ಅವರ ಶಾಲೆಗೆ ಇಬ್ಬರು ಶಿಕ್ಷಕರು ಬಂದರು.

2014ರಲ್ಲಿ ಹರೀಶ್ ಅವರು ಶಾಲೆಯಲ್ಲಿ ವಾರ್ಷಿಕೋತ್ಸವದ ಕಾರ್ಯಕ್ರಮವನ್ನು ಮೊದಲ ಬಾರಿಗೆ ಸಂಘಟಿಸಲು ತೀರ್ಮಾನಿಸಿದರು. ಅದು ಶಾಲೆಯ ಅಸ್ತಿತ್ವದ

ಇಪ್ಪತ್ತನೆಯ ವರ್ಷವಾಗಿತ್ತು. ಅದು ಪ್ರಾಣಿಗಳಿಗೆ ಸಂಬಂಧಿಸಿದ ವಿಷಯಕ್ಕೆ ಆಧಾರಿತವಾಗಿರಬೇಕೆಂದು ಅವರು ನಿರ್ಧರಿಸಿದರು. ಉತ್ತರಾಖಂಡ್ ರಾಜ್ಯದ "ಕಾರ್ಬೆಟ್ ರಾಷ್ಟ್ರೀಯ ಉದ್ಯಾನ" ವಿಷಯವು ಈ ವರ್ಧಂತಿಯ ಕೇಂದ್ರಬಿಂದುವಾಯಿತು. ಮಕ್ಕಳು ವನ್ಯಪ್ರಾಣಿಗಳ ವಿಷಯವನ್ನು ತಿಳಿದುಕೊಳ್ಳುವುದು ಇದರ ಉದ್ದೇಶವಾಗಿತ್ತು. ಮಕ್ಕಳು ಸಿಂಹದ ಗುಹೆ, ಕರಡಿಯ ಮನೆ, ಗೋಶಾಲೆ, ಗುಡ್ಡ, ಹರಿಯುವ ನದಿ ಮುಂತಾದವುಗಳ ಮಾದರಿಗಳನ್ನು ಮಾಡಿ ಆ ಶಿಕ್ಷಣ ಮೇಳದಲ್ಲಿ ಪ್ರದರ್ಶಿಸಿದರು. ಮಕ್ಕಳಿಗೆ ತಿಂಡಿಯ ಅಂಗಡಿಗಳನ್ನು ಇಡಲು ಹರೀಶ್ ಪ್ರೋತ್ಸಾಹಿಸಿದರು. ಅವರಲ್ಲಿ ಉದ್ಯಮಶೀಲತೆಯನ್ನು ಮೂಡಿಸುವುದು ಅವರ ಉದ್ದೇಶವಾಗಿತ್ತು. ಹರೀಶ್ ಕೂಡಾ ಮಕ್ಕಳೊಡನೆ ಸೇರಿ ತಾನೂ ಒಂದು ಅಂಗಡಿಯನ್ನು ಇಟ್ಟಿದ್ದರು. ಈ ಕಾರ್ಯಕ್ರಮಕ್ಕೆ ನಿಧಿಯ ಆವಶ್ಯಕತೆಯಿತ್ತು. ಹರೀಶ್ ಸ್ವಂತ ಹಣದಿಂದ ಹತ್ತುಸಾವಿರ ರೂಪಾಯಿಗಳನ್ನು ಕೊಡುಗೆಯಾಗಿ ನೀಡಿದರು. ಅವರ ಸಹೋದ್ಯೋಗಿಗಳೂ ದೇಣಿಗೆ ನೀಡಿದರು. ಆ ಬಗ್ಗೆ ಶಿಕ್ಷಕರಿಗೆ ಸಂತೋಷವೇ ಇದೆ, "ನಮ್ಮ ಈ ಉದ್ಯೋಗ ನಮ್ಮ ಮಕ್ಕಳಿಗೆ ಒಳ್ಳೆಯ ಬದುಕನ್ನು ಕೊಟ್ಟಿದೆ. ಹೀಗಿರುವಾಗ ಅಷ್ಟೇನೂ ಉತ್ತಮ ಸ್ಥಿತಿಯಲ್ಲಿ ಇಲ್ಲದ ಈ ಮಕ್ಕಳಿಗಾಗಿ ನಾವು ಇಷ್ಟನ್ನು ಮಾಡಿದರೆ ಅದೇನೂ ದೊಡ್ಡ ವಿಚಾರ ಅಲ್ಲ". "ಕಲಿಕೆ ಖಾತ್ರಿ ಕಾರ್ಯಕ್ರಮದ" (Learning Guarantee Programme - LGP) ದಿನಗಳಿಂದಲೂ ಹರೀಶ್ ಅವರು ಫೌಂಡೇಷನ್‌ನೊಂದಿಗೆ ಹೊಂದಿರುವ ಸಂಬಂಧಗಳು ಈಗಲೂ ಬಲವಾಗಿಯೇ ಉಳಿದಿವೆ. ಅವರು ನಮ್ಮೊಡನೆ, "ಫೌಂಡೇಷನ್‌ನ ಸಂಜಯ್ ಯಾದವ್ ಮತ್ತು ಹರೇಂದ್ರ ಬಿಷ್ಟ್ ಅವರು ಈ ವರ್ಧಂತಿಯ ಯೋಜನೆ ರೂಪಿಸಲು ನೆರವಾದರು. ಸಂಪೂರ್ಣ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವಲ್ಲಿ ಅವರ ಸಹಾಯ ತುಂಬಾ ಇದೆ. ಅವರು ತಮ್ಮ ಬಾಲ ಶೋಧ ಮೇಳಗಳ ಅನುಭವವನ್ನು ನಮ್ಮ ಕಾರ್ಯಕ್ರಮದಲ್ಲಿ ಉಪಯೋಗಿಸಿದರು." ಎಂದು ಹೇಳಿದರು. ಈ ಕಾರ್ಯಕ್ರಮವು ಶಾಲೆಗೆ ಜನಪ್ರಿಯತೆಯನ್ನು ತಂದುಕೊಟ್ಟಿತು. ಜನಸಮುದಾಯದಲ್ಲಿ ಶಾಲೆಯ ಬಗ್ಗೆ ಹಿಂದೆಂದೂ ಕಾಣದ ಸದಭಿಪ್ರಾಯ ಮೂಡಿತು ಎಂದು ಹರೀಶ್ ಹೇಳುತ್ತಾರೆ. ಮುಂದಿನ ವರ್ಷವೂ ಶಾಲೆಯಲ್ಲಿ ವರ್ಧಂತಿಯನ್ನು ಇನ್ನೊಂದು ವಿಷಯದ ಮೇಲೆ ಅದ್ದೂರಿಯಿಂದ ಆಚರಿಸಿದರು. ಹರೀಶ್ ಈ ಬಾರಿ ವೇದಿಕೆಯನ್ನೂ ಬೆಳಕಿನ ವ್ಯವಸ್ಥೆಯನ್ನೂ ವಿಭಿನ್ನ ರೀತಿಯಲ್ಲಿ ಮಾಡಿ ಸ್ಥಳೀಯ ಕೈಗಾರಿಕೋದ್ಯಮಿಯೊಬ್ಬರನ್ನು ಮುಖ್ಯ ಅತಿಥಿಯಾಗಿ ಆಮಂತ್ರಿಸಿದರು. ಮೈದಾನವು ಸಮುದಾಯದ ಸದಸ್ಯರಿಂದ ಕಿಕ್ಕಿರಿದು ತುಂಬಿತ್ತು. ಇದನ್ನು ಕಂಡು ಪುಲಕಿತರಾದ ಹರೀಶ್ ಅವರು ಪೋಷಕರನ್ನು ಕೇಳಿದರು "ಆಪ್‌ಕೋ ಕೈಸಾ ವಿದ್ಯಾಲಯ್ ಚಾಹಿಯೇ?" (ನಿಮಗೆ ಎಂತಹ ಶಾಲೆ ಬೇಕು?) ಪೋಷಕರು ತಮ್ಮ ಮಕ್ಕಳು ಕಾನ್ವೆಂಟ್ ಶಾಲೆಯ ಮಕ್ಕಳಂತೆ ಸಮವಸ್ತ್ರ ಧರಿಸಬೇಕೆಂದೂ ಶಾಲೆಯನ್ನು ಶುಚಿಯಾಗಿ ಇಡಬೇಕೆಂದೂ ಹೇಳಿದರು. ಶಿಕ್ಷಣ ಇಲಾಖೆಯು ಹುಡುಗಿಯರಿಗೆ, ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳ ಮಕ್ಕಳಿಗೆ ಮಾತ್ರ ಸಮವಸ್ತ್ರಕ್ಕೆ ಹಣ ಒದಗಿಸುತ್ತದೆ. ಹರೀಶ್ ಅವರು ಪಕ್ಕದ ಗುರು ನಾನಕ್ ಕಾಲೇಜಿನ ಪ್ರಿನ್ಸಿಪಾಲರನ್ನು ಸಂಪರ್ಕಿಸಿ ಅವರಿಂದ

ನಿಧಿಯನ್ನು ಸಂಗ್ರಹಿಸಿ ಪ್ರತಿಯೊಂದು ಮಗುವಿಗೂ ಸಮವಸ್ತ್ರದ ವ್ಯವಸ್ಥೆ ಮಾಡಿದರು. "ನಾನು ಎಲ್ಲವನ್ನೂ ಪಾರದರ್ಶಕವಾಗಿ ಮಾಡುತ್ತೇನೆ. ಎಲ್ಲವನ್ನೂ ಅಧಿಕಾರಿಗಳೊಂದಿಗೂ ಸಮುದಾಯದೊಂದಿಗೂ ಹಂಚಿಕೊಂಡಿದ್ದೇನೆ. ಒಮ್ಮೆ ವಿಶ್ವಾಸ ಕುದುರಿದರೆ ಆಮೇಲೆ ಕೆಲಸ ಸುಲಭವಾಗುತ್ತದೆ. ನಮಗೆ ತರಗತಿಗಳಿಗೆ ಎರಡೇ ಕೊಠಡಿಗಳಿದ್ದವು. ನಾನು ಗ್ರಾಮ ಪ್ರಧಾನರಲ್ಲಿಗೂ ಬ್ಲಾಕ್ ಅಧಿಕಾರಿಗಳ ಬಳಿಯೂ ಹೋಗಿ ನೆರವಾಗುವಂತೆ ಕೇಳಿದೆ. ಆ ಬ್ಲಾಕ್‌ನ ಸಂಪನ್ಮೂಲ ವ್ಯಕ್ತಿ ಮುಂದೆ ಬಂದು ಒಂದು ಹೆಚ್ಚುವರಿ ಕೊಠಡಿ ಕಟ್ಟಿಸಲು ಸ್ವಲ್ಪ ಹಣ ಸಂಗ್ರಹ ಮಾಡಿಕೊಡುವುದಾಗಿ ಹೇಳಿದರು. ಗ್ರಾಮ ಪ್ರಧಾನರು ಶೌಚಾಲಯಗಳನ್ನು ಕಟ್ಟಿಸಲು ಒಪ್ಪಿಕೊಂಡರು. ಇದರೊಂದಿಗೆ SSA ನಿಧಿಯು ಸಹ ಸಹಾಯಕವಾಗಿ ಬಂತು" ಎಂದರು. ಹರೀಶ್ ಅವರು ಆಟದ ಮೈದಾನವನ್ನು ಸಮತಟ್ಟಾಗಿಸಿದ್ದಲ್ಲದೆ ಒಂದು ತೋಟವನ್ನೂ ಬೆಳೆಸುವ ಯೋಜನೆ ಆರಂಭಿಸಿದರು.

2015ರಲ್ಲಿ ಶಿವಲಾಲ್‌ಪುರ್ ಡಲ್ಲು ಸರ್ಕಾರಿ ಪ್ರಾಥಮಿಕ ಶಾಲೆಯನ್ನು ಮಾದರಿ ಶಾಲೆಯನ್ನಾಗಿ ಆಯ್ಕೆ ಮಾಡಲಾಯಿತು. ಅಲ್ಲಿಗೆ ಕೂಡಲೇ ಇಬ್ಬರು ಶಿಕ್ಷಕರನ್ನು ನೇಮಕಾತಿ ಮಾಡಿದರು. ಈಗ ಅತ್ಯಂತ ಅಗತ್ಯವಿದ್ದ ಇಂಗ್ಲಿಷ್ ಮತ್ತು ಗಣಿತದ ಶಿಕ್ಷಕರು ಹರೀಶ್ ಕೈಯಲ್ಲಿದ್ದರು. 2017ರಲ್ಲಿ ಶಾಲೆಯ ಪ್ರವೇಶ ಕಾಲದಲ್ಲಿ ಇನ್ನೂ ನಲವತ್ತು ಪೋಷಕರು ಮುಂದೆ ಬಂದು ತಮ್ಮ ಮಕ್ಕಳನ್ನು ಖಾಸಗಿ ಶಾಲೆಯಿಂದ ಬಿಡಿಸಿ ಹರೀಶ್ ಅವರ ಸರ್ಕಾರಿ ಶಾಲೆಗೆ ಸೇರಿಸಿದ್ದು ಅವರಿಗೆ ಅತ್ಯಂತ ಸಂತೋಷವನ್ನು ತಂದುಕೊಟ್ಟಿತು. ಶಾಲೆಯಲ್ಲಿ ಈಗ ನೂರ ಅರುವತ್ತೆಂಟು ಮಕ್ಕಳಿದ್ದಾರೆ. ಶಿವಲಾಲ್‌ಪುರ್ ಡಲ್ಲುನ ಸಮೀಪದಲ್ಲಿದ್ದ ಎರಡು ಖಾಸಗಿ ಶಾಲೆಗಳು ಈಗ ಮುಚ್ಚಿವೆ. ಶಾಲೆಗೆ ಮೂರೇ ಕೊಠಡಿಗಳಿರುವುದರಿಂದ ಸ್ಥಳಾಭಾವ ಕಾಡುತ್ತಿದೆ. ಆದರೆ ಹರೀಶ್ ಮತ್ತು ಅವರ ನಾಲ್ಕು ಮಂದಿ ಸಹೋದ್ಯೋಗಿಗಳು ಇತ್ತೀಚೆಗೆ ಅರವತ್ತು ಸಾವಿರ ರೂ.ಗಳನ್ನು ಸ್ವಂತ ಹಣದಿಂದಲೇ ಸೇರಿಸಿ ತಗಡಿನ ಸೂರಿನ ನಾಲ್ಕನೇ ಕೊಠಡಿಯೊಂದನ್ನು ನಿರ್ಮಾಣ ಮಾಡಿದರು.

ಶಿಕ್ಷಕರು ಮತ್ತು ಮುಖ್ಯ ಶಿಕ್ಷಕರಿಗೆ ಪ್ರತಿಯೊಂದು ಮಗುವಿನ ಕಲಿಕೆಯ ಮಟ್ಟದ ಪರಿಚಯವಿತ್ತು. ಅವರು ಈ ಮಾಹಿತಿಗಳನ್ನು ತಮ್ಮೊಳಗೆ ಹಂಚಿಕೊಳ್ಳುತ್ತಿದ್ದರು. ಉದಾಹರಣೆಗೆ ಇಂಗ್ಲಿಷ್ ಶಿಕ್ಷಕರೊಂದಿಗೆ ಮಾತನಾಡಿದರೆ ಅವರಿಗೆ ನಿರ್ದಿಷ್ಟ ಮಗು ಗಣಿತದಲ್ಲಿ ಹೊಂದಿರುವ ಶಕ್ತಿಯ ಅರಿವೂ ಇರುತ್ತಿತ್ತು. ಮಗುವಿನ ಕರಸಂಪುಟವನ್ನು ಮತ್ತು ಪ್ರಗತಿಯ ವರದಿಯನ್ನು ಅತ್ಯಂತ ಎಚ್ಚರಿಕೆಯಿಂದ ಮಾಡಲಾಗುತ್ತಿತ್ತು. ಇವುಗಳನ್ನು ಮಾಸಿಕ ಪೋಷಕ–ಶಿಕ್ಷಕರ ಸಭೆ (PTM - Parents' Teachers' Meeting)ಯಲ್ಲಿ ಪೋಷಕರೊಂದಿಗೆ ಹಂಚಿಕೊಳ್ಳಲಾಗುತ್ತಿತ್ತು. ಪ್ರಕ್ರಿಯೆ ಗಂಭೀರವಾಗಿ ನಡೆಯುತ್ತಿದ್ದು ಇಡೀ ದಿನವನ್ನು ಅದಕ್ಕೆ ಮೀಸಲಿಡುತ್ತಿದ್ದರು. ಶಿಕ್ಷಕರು ಪೋಷಕರಿಗೆ ಅವರ ಮಕ್ಕಳ ಕೆಲಸದ ಕೆಲವು ಮಾದರಿಗಳನ್ನು ತೋರಿಸುತ್ತಿದ್ದರು. ಪ್ರತಿಯೊಂದು ವಿಷಯದ ಉತ್ತರ ಪತ್ರಿಕೆಗಳು, ಯೋಜನಾ ಪತ್ರಿಕೆಗಳು ಮತ್ತು ಚಿತ್ರ ಕಲಾಕಾರ್ಯವನ್ನು ತೋರಿಸುತ್ತಿದ್ದರು.

ಬೆಳಗಿನ ಸಭೆಯಲ್ಲಿ ಪ್ರಾರ್ಥನೆಯ ಜೊತೆಗೆ ಸಮೂಹ ಗೀತೆ, ಕಥೆ ಹೇಳುವುದು, ಪದ್ಯ ಓದುವುದು ಮುಂತಾದ ಚಟುವಟಿಕೆಗಳನ್ನು ಸೇರಿಸಲಾಗಿತ್ತು. ಆ ಶಾಲೆಯಲ್ಲಿ

ವಿಶೇಷವಾಗಿ 5 ನಿಮಿಷಗಳ ಕಾಲಾವಧಿಯ ಸಣ್ಣ ನಾಟಕವನ್ನು ಸಹ ಮಕ್ಕಳು ತಮ್ಮ ಸೃಜನಶೀಲತೆಯನ್ನು ತೋರಿಸಲೆಂದು ಒದಗಿಸಿಕೊಟ್ಟಿದ್ದರು. ಮಕ್ಕಳ ವಿಭಿನ್ನ ಗುಂಪುಗಳು ಸರದಿಯ ಮೇರೆಗೆ ಈ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು. ಪ್ರತಿಯೋರ್ವ ಶಿಕ್ಷಕನೂ ತಪ್ಪದೇ ಈ ಪ್ರಾರ್ಥನಾ ಸಭೆಯು ಪ್ರಾರಂಭವಾಗುವ ಮೊದಲು ಹಾಜರಿರುತ್ತಿದ್ದರು. ಅದೊಂದು ಮಾದರಿ ಶಾಲೆಯಾದುದರಿಂದ ಮಧ್ಯಾಹ್ನದ ಊಟಕ್ಕಾಗಿ ಅಲ್ಯೂಮಿನಿಯಮ್ ಹಾಳೆಯನ್ನು ಹೊದಿಸಿರುವ ಬಿಳಿ ಬೋರ್ಡ್‌ನ ಟೇಬಲ್‌ಗಳನ್ನು ಒದಗಿಸಲಾಗಿತ್ತು. ಒಂದು ಹಾರ್ಮೋನಿಯಮ್, ತಬಲಗಳು, ಕ್ರೀಡಾ ಸಲಕರಣೆಗಳು, ಡಂಬಲ್ಸ್ ಮತ್ತು ಲೆಜಿಮ್ ಇವೆಲ್ಲವೂ ಲಭ್ಯವಿದ್ದವು. ಇದೆಲ್ಲದರ ಪರಿಣಾಮವಾಗಿ ಶಿಕ್ಷಕರು ಚಟುವಟಿಕೆಗಳನ್ನು ಇನ್ನಷ್ಟು ಹೆಚ್ಚಿಸಿ ಸಂಗೀತ, ದೈಹಿಕ ಶಿಕ್ಷಣ ಮತ್ತು ಕ್ರೀಡೆಗಳನ್ನು ವೇಳಾಪಟ್ಟಿಯಲ್ಲಿ ಸೇರಿಸಿದ್ದರು. ಕಳೆದೆರಡು ವರ್ಷಗಳಲ್ಲಿ ಈ ಶಾಲೆಯ ಮಕ್ಕಳು ಸಮೂಹ ಮತ್ತು ಬ್ಲಾಕ್ ಮಟ್ಟದ ಸ್ಪರ್ಧೆಗಳಲ್ಲಿ ಗೆದ್ದು ಕ್ರೀಡೆಗಳಲ್ಲಿ, ಚಿತ್ರರಚನೆಯಲ್ಲಿ, ಪದ್ಯ ಓದುವುದರಲ್ಲಿ ಮತ್ತು ಕಥೆ ಹೇಳುವ ಸ್ಪರ್ಧೆಗಳಲ್ಲಿ ಜಿಲ್ಲಾ ಮಟ್ಟವನ್ನು ತಲಪಿದ್ದಾರೆ.

ಖಾಸಗಿ ಶಾಲೆಗಳಲ್ಲಿ ಮಕ್ಕಳು ಪ್ರವಾಸಕ್ಕೆ ಹೋಗುವ ಪದ್ಧತಿಯಿದ್ದು ತಮ್ಮ ಶಾಲೆಯಲ್ಲಿ ಅಂತಹ ಅವಕಾಶವಿಲ್ಲದಿರುವ ಚಿಂತೆ ಹರೀಶ್‌ರನ್ನು ಕಾಡುತ್ತಿತ್ತು. ಈ ಕೊರತೆ ನೀಗಿಸಲು ಅವರೂ ಸಹೋದ್ಯೋಗಿಗಳೂ ಸ್ವಲ್ಪ ಹಣವನ್ನು ಒಟ್ಟು ಮಾಡಿ 5 ನೇ ತರಗತಿಯ ಮಕ್ಕಳನ್ನು ಶೈಕ್ಷಣಿಕ ಪ್ರವಾಸಕ್ಕಾಗಿ ನೈನಿತಾಲ್ ಜಿಲ್ಲೆಗೆ ಕರೆದುಕೊಂಡು ಹೋದರು. ಅಲ್ಲಿ ಒಂದು ಅಣೆಕಟ್ಟು, ಜಲಾಶಯ ಮತ್ತು ಜಲ ವಿದ್ಯುಚ್ಛಕ್ತಿ ಉತ್ಪಾದನೆಯ ಮೂಲ ತತ್ತ್ವಗಳನ್ನು ವೀಕ್ಷಿಸಿದರು. ಒಂದು ಗುಡ್ಡವನ್ನೂ ಏರಿ ಜಿಲ್ಲೆಯ ಒಂದು ಹಳೆಯ ದೇವಾಲಯವನ್ನೂ ನೋಡಿದರು. ಈ ಪ್ರವಾಸದಿಂದ ಹರೀಶ್ ಅವರಿಗೆ ಅಪಾರವಾದ ಸಾರ್ಥಕತೆಯ ಭಾವ ಮೂಡಿತು. "ನಮ್ಮ ಶಾಲೆಯನ್ನು ಮಾದರಿ ಶಾಲೆಯೆಂದು ಆಯ್ಕೆ ಮಾಡಲಾಗಿದೆ. ಅದು ಇಲ್ಲಿ ಇರುವ ಮೂಲ ಸೌಕರ್ಯಗಳ ಕಾರಣದಿಂದಲ್ಲ. ಅದು ಸಾಕಷ್ಟಿಲ್ಲವೆಂಬುದು ಎಲ್ಲರಿಗೂ ತಿಳಿದಿರುವ ವಿಷಯವೆ. ಅವರು ನಮ್ಮ ಕೆಲಸಗಳ ಬಗ್ಗೆ ಇಲ್ಲಿಗೆ ಭೇಟಿ ನೀಡಿದ್ದ ಕೆಲವು ಹಿರಿಯ ಅಧಿಕಾರಿಗಳಿಂದ ತಿಳಿದಿರಬಹುದು."

ಕೆಲಸ ಮಾಡಿದರೆ ಸಾಲದು, ಅದು ಸಮುದಾಯಕ್ಕೆ ತಿಳಿಯಬೇಕು, ಇದು ಹರೀಶ್ ಅವರು ನಂಬಿದ ಜೀವನ ಸಿದ್ಧಾಂತ. ಮಕ್ಕಳಿಗೂ ಅವರ ಪೋಷಕರಿಗೂ ಕಲಿಕೆ ಹಾಗೂ ಶೈಕ್ಷಣಿಕ ಅನುಭವದೊಂದಿಗೆ ಆತ್ಮಾಭಿಮಾನವೂ ಮುಖ್ಯ ಎಂದು ಅವರು ಭಾವಿಸಿದರು. ಆದ್ದರಿಂದ ಅವರು ಪ್ರತಿಯೊಂದು ಮಗುವಿಗೂ ಖಾಸಗಿ ಶಾಲೆಗಳಲ್ಲಿ ಇರುವಂತೆ ಒಂದು ಗುರುತಿನ ಚೀಟಿ, ಬೆಲ್ಟ್ ಮತ್ತು ಟೈ ಅನ್ನು ಒದಗಿಸಿದ್ದರು. ಜನ ಸಮುದಾಯದೊಂದಿಗೆ ತಮ್ಮನ್ನು ಸತತವಾಗಿ ತೊಡಗಿಸಿಕೊಂಡಿರಬೇಕೆಂದು ಹರೀಶ್ ಅರಿತಿದ್ದರು. ಅದಕ್ಕೆ ಸಂಬಂಧಿಸಿದ ಕೆಲಸಗಳನ್ನು ಅವರು ಎಂದೂ ಹಗುರವಾಗಿ ಪರಿಗಣಿಸಲಿಲ್ಲ. ಇತ್ತೀಚೆಗೆ ಸಮುದಾಯದ ಜತೆಗಿನ ಸಭೆಯಲ್ಲಿ ಅವರು ಚೀನಿ ಕ್ರೀಡೆ 'ಕಿವಿಮಾತು' ಆಡಿದರು. ಅದರಲ್ಲಿ ಅವರು ಸರಳವಾದ 'ಮೈನೇ ಕೇಲಾ ಖಾಯಾ'

(ನಾನು ಬಾಳೆಹಣ್ಣನ್ನು ತಿಂದೆ) ಎಂಬ ವಾಕ್ಯವನ್ನುಚ್ಚರಿಸುತ್ತಾರೆ. ಒಂದು ಸುತ್ತು ಮುಗಿದಾಗ ಕಡೆಯ ವ್ಯಕ್ತಿ ಆ ವಾಕ್ಯವನ್ನು ಉಚ್ಚರಿಸಿದಾಗ ಅದು ಸಂಪೂರ್ಣವಾಗಿ ಬದಲಾಗಿತ್ತು. ಒಂದು ವಿಷಯ ಒಬ್ಬರಿಂದೊಬ್ಬರಿಗೆ ಹರಡಿ ಕೊನೆಯಲ್ಲಿ ಮತ್ತೇನೋ ಆಗುತ್ತದೆ ಎಂಬುದನ್ನು ಜನರಿಗೆ ಮನವರಿಕೆ ಮಾಡಿಸಿ ವದಂತಿಗಳನ್ನು ನಂಬಬಾರದೆಂದು ತಿಳಿಹೇಳಲು ಹರೀಶ್ ಇದನ್ನು ಮಾಡಿದರು. 'ಶಾಲೆಗೆ ಸಂಬಂಧಿಸಿದ ಯಾವುದೇ ವಿಷಯವನ್ನು ನೇರವಾಗಿ ಬಂದು ನನ್ನಲ್ಲಿ ವಿಚಾರಿಸಿ' ಎಂದು ಅವರು ಪೋಷಕರೊಡನೆ ವಿನಂತಿ ಮಾಡಿದರು.

ಹರೀಶ್ ಅವರು ಶಾಲೆಯ ಆಡಳಿತ ಮತ್ತು ಸಮುದಾಯದ ಜೊತೆಗಿನ ಸಂಬಂಧಗಳ ಕುರಿತಾದ ವಿಚಾರಗಳಿಗೆ ಮಾತ್ರ ಗಮನ ಹರಿಸುತ್ತಾರೆ ಎಂಬ ಭಾವನೆಯನ್ನು ಈವರೆಗೆ ಹೇಳಿದ ವಿಷಯಗಳು ಮೂಡಿಸಬಹುದು. ಅವರು ಪರಿಸರ ವಿಜ್ಞಾನವನ್ನು ಸೊಗಸಾಗಿ ಕಲಿಸುತ್ತಾರೆ. ಆ ವಿಷಯಕ್ಕೆ ಸಂಬಂಧಿಸಿದ ಎಲ್ಲ ಹೊಸ ಬೆಳವಣಿಗೆಗಳನ್ನು ತಿಳಿದುಕೊಂಡಿದ್ದಾರೆ. ಬೋಧನೆಯ ವಿಧಾನವಾಗಲಿ ವಿಷಯದ ತಿರುಳಾಗಲಿ ಅವರಿಗೆ ಚೆನ್ನಾಗಿ ಪರಿಚಿತವಾದುದು. ಅವರು ಕಾಶಿಪುರ ವಿಟಿಎಫ್‌ನ ಸಕ್ರಿಯ ಸದಸ್ಯರಾಗಿದ್ದು ಸಭೆಗಳಲ್ಲಿ ಚರ್ಚೆಗಳನ್ನು ಮುನ್ನಡೆಸುತ್ತಾರೆ. ಅವರನ್ನು ಜಿಲ್ಲೆಯ ಪರಿಸರ ವಿಜ್ಞಾನ ಬೋಧನೆಯ ಸಾಮರ್ಥ್ಯಾಭಿವೃದ್ಧಿ ಕಾರ್ಯಾಗಾರಗಳಲ್ಲಿ ಸದಸ್ಯರನ್ನಾಗಿ ಸೇರಿಸಿಕೊಳ್ಳಲಾಗಿದೆ. ಆ ವಿಷಯದ ಬಗ್ಗೆ ಪ್ರಸಕ್ತ ಅವರು ಸಂಪನ್ಮೂಲ ಪುಸ್ತಕವೊಂದನ್ನು ತಯಾರಿಸುತ್ತಿದ್ದಾರೆ. ಅದು ಜಿಲ್ಲೆಯ ಶಿಕ್ಷಕರಿಗೆ ತುಂಬಾ ಸಹಾಯಕವಾಗುವುದು ನಿಶ್ಚಿತ.

ಶಾಲಾ ನಿರ್ವಹಣೆಯ ಎಲ್ಲ ಒತ್ತಡಗಳ ನಡುವೆಯೂ ಹರೀಶ್ ಬಿ.ಎ. ಮತ್ತು ಎಂ.ಎ. ಪದವಿಗಳನ್ನು ಅಂಚೆ ತೆರಪಿನ ಮೂಲಕ ಗಳಿಸಿದ್ದಾರೆ. ಅದು ತಮ್ಮ ವೃತ್ತಿಪರತೆಯ ಅಭಿವೃದ್ಧಿ ಬಗೆಗಿನ ಅವರ ಬದ್ಧತೆಯನ್ನು ಸೂಚಿಸುತ್ತದೆ. ಅವರಿಗೀಗ ಐವತ್ತು ವರ್ಷ ವಯಸ್ಸು. ಮಿಕ್ಕುಳಿದ ಸೇವಾವಧಿಯಲ್ಲಿ ಶಿವಲಾಲ್‌ಪುರ್ ಡಲ್ಲುವಿನ ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆಯನ್ನು ಬಲಪಡಿಸಲು ಉದ್ದೇಶಿಸಿದ್ದಾರೆ. ಅವರ ಮಕ್ಕಳು ಬದುಕಿನಲ್ಲಿ ಉತ್ತಮ ನೆಲೆ ಕಂಡುಕೊಂಡಿದ್ದಾರೆ. ಹಿರಿಯ ಮಗ ದೆಹಲಿಯಲ್ಲಿ ಎಂಜಿನಿಯರ್ ಆಗಿದ್ದಾನೆ, ಕಿರಿಯ ಪುತ್ರ ಹೋಟೆಲ್ ವ್ಯವಸ್ಥಾಪನ ಶಿಕ್ಷಣವನ್ನು ಪಡೆಯುತ್ತಿದ್ದಾನೆ. ಹಿರಿಯ ಮಗಳಿಗೆ ಮದುವೆಯಾಗಿದೆ; ಕಿರಿಯ ಮಗಳು ಕಾಶಿಪುರ ಆಸ್ಪತ್ರೆಯಲ್ಲಿ ಸುಶಿಕ್ಷಿತ ನರ್ಸ್ ಆಗಿ ಕೆಲಸ ಮಾಡುತ್ತಿದ್ದಾಳೆ. ಹರೀಶ್ ಅವರಿಗೆ ಅಪಾರವಾದ ಚೈತನ್ಯವೂ ಪುಟಿಯುವ ಉತ್ಸಾಹವೂ ಇದೆ. ಶಾಲೆಗೆ ಭೇಟಿ ನೀಡಿದ ಯಾರಿಗೇ ಆದರೂ ಇನ್ನೂ ಸ್ವಲ್ಪ ಕಾಲ ಇರೋಣ ಅನಿಸುತ್ತದೆ. ಹರೀಶ್ ಶಾಲೆಯ ಕಾರ್ಯಾಚರಣೆಗಳ ವಿವಿಧ ಮುಖಗಳನ್ನು ಅವರಿಗೆ ತೋರಿಸಲು ಬಯಸುತ್ತಾರೆ. ತಮ್ಮ ಸಹೋದ್ಯೋಗಿಗಳನ್ನು ಸಂದರ್ಶಕರಿಗೆ ಪರಿಚಯ ಮಾಡಿಸುತ್ತಾರೆ. ಮಕ್ಕಳ ಕಲಿಕಾ ಪ್ರಗತಿಯ ದಾಖಲೆಗಳು ಸಂದರ್ಶಕರು ನೋಡಲೇಬೇಕಾದ ವಿಷಯ. ಈ ಮುಖ್ಯ ಶಿಕ್ಷಕನ ಯಶಸ್ಸಿನ ಮೂಲದಲ್ಲಿ, ಮಕ್ಕಳಿಗೆ ಅಮೂಲ್ಯವಾದ ಕಲಿಕೆಯ ಅನುಭವಗಳನ್ನು ಒದಗಿಸುವ ಒಂದು ಸ್ಪಂದನಶೀಲ ಶಾಲೆಯನ್ನು ಕುರಿತಾದ ಸ್ಪಷ್ಟ ಕಾಣ್ಕೆ ಇದೆ.

# ನಾನು ಲಿಂಗಾನುಪಾತವನ್ನು ೫೦:೫೦ಕ್ಕೆ ತರುತ್ತೇನೆ. ಯಾವುದೇ ಕಾರಣಕ್ಕೂ ಹುಡುಗಿಯರು ಶಾಲೆ ತೊರೆಯುವುದನ್ನು ನಾನು ಬಯಸುವುದಿಲ್ಲ

**ಸಂಗಯ್ಯ**

ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ

ಗೆದ್ದಲಮರಿ, ಸುರಪುರ ಬ್ಲಾಕ್, ಯಾದಗಿರಿ ಜಿಲ್ಲೆ, ಕರ್ನಾಟಕ

ಮುಖ್ಯ ಶಿಕ್ಷಕ ಸಂಗಯ್ಯ ಒಬ್ಬ ಚಿತ್ತಾಕರ್ಷಕ ವ್ಯಕ್ತಿ. ಪಿ.ಯು.ಸಿ. ಹಾಗೂ ಐ.ಟಿ.ಸಿ. (ಇನ್‌ಸ್ಟ್ರಕ್ಟರ್ ಟ್ರೇನಿಂಗ್ ಕೋರ್ಸ್) ಮುಗಿಸಿ 1992ರಲ್ಲಿ ಶಿಕ್ಷಣ ಇಲಾಖೆ ಸೇರಿದರು. ಹನುಮಸಾಗರದಲ್ಲಿರುವ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗೆ (GLPS) ಅವರ ಮೊದಲ ನೇಮಕ. ಆರು ವರ್ಷಗಳ ಸೇವೆಯ ನಂತರ 1998ರಲ್ಲಿ ಬಲಶೆಟ್ಟಿಹಳ್ಳಿಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗೆ ವರ್ಗಾವಣೆಯಾಗಿ ಅಲ್ಲಿ ಹನ್ನೊಂದು ವರ್ಷ ಸೇವೆ ಸಲ್ಲಿಸಿದರು. 2010ರಿಂದ ಗೆದ್ದಲಮರಿಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಮುಖ್ಯ ಶಿಕ್ಷಕರಾಗಿದ್ದಾರೆ. ಅವರ ಸುದೀರ್ಘ ಸೇವೆಗೆ ಮನ್ನಣೆಯೂ ಪ್ರಶಸ್ತಿಗಳೂ ದೊರೆತಿವೆ. 2010ರಲ್ಲಿ 'ಜಿಲ್ಲೆಯ ಅತ್ಯುತ್ತಮ ಶಿಕ್ಷಕ' ಪ್ರಶಸ್ತಿ ದೊರೆತರೆ 2015ರಲ್ಲಿ 'ಕರ್ನಾಟಕ ರಾಜ್ಯದ ಅತ್ಯುತ್ತಮ ಶಿಕ್ಷಕ' ಪ್ರಶಸ್ತಿ ದೊರೆಯಿತು. ಭುವನೇಶ್ವರದಲ್ಲಿ ಮಾನವ ಸಂಪನ್ಮೂಲ ಸಚಿವಾಲಯವು ಸಂಘಟಿಸಿದ್ದ ರಾಷ್ಟ್ರೀಯ ಶಿಕ್ಷಕರ ಸಮ್ಮೇಳನದಲ್ಲಿ ತಮ್ಮ ಅನುಭವಗಳನ್ನು ಹಂಚಿಕೊಳ್ಳಲು ರಾಜ್ಯದಿಂದ ನಾಮ ನಿರ್ದೇಶನಗೊಂಡ ಎಂಟು ಶಿಕ್ಷಕರಲ್ಲಿ ಇವರೂ ಒಬ್ಬರು.

ಗೆದ್ದಲಮರಿ ಸುಮಾರು ಎರಡು ಸಾವಿರ ಜನರಿರುವ ಒಂದು ದೊಡ್ಡ ಹಳ್ಳಿ. ಅಲ್ಲಿನ ಬಹಳಷ್ಟು ಜನ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳಿಗೆ ಸೇರಿದವರು. ಗೆದ್ದಲಮರಿಯ ಈ ಶಾಲೆ ಮುನ್ನೂರ ನಲವತ್ತೊಂದು ಮಕ್ಕಳನ್ನು ಹೊಂದಿದೆ. ಅವರಲ್ಲಿ ನೂರ ಮೂವತ್ತೇಳು ಹುಡುಗಿಯರು, ಇನ್ನೂರ ನಾಲ್ಕು ಹುಡುಗರು. ಈ ಭಾಗದ ಇತರ ಅನೇಕ ಹಳ್ಳಿಗಳಂತೆ ಗೆದ್ದಲಮರಿ ಸಹ ಅನೇಕ ಸಾಮಾಜಿಕ ಸಮಸ್ಯೆಗಳನ್ನು ಎದುರಿಸುತ್ತಿದೆ. ಬಾಲ್ಯವಿವಾಹವೂ ಮನೆಯಲ್ಲಿ ತಮ್ಮ-ತಂಗಿಯರನ್ನು ನೋಡಿಕೊಳ್ಳುವ ಕೆಲಸವೂ ಮುಖ್ಯ ಕಾರಣವಾಗಿ ಹೆಣ್ಣುಮಕ್ಕಳ ಶಾಲಾ ಕಲಿಕೆಯ ಮೇಲೆ ಪ್ರತಿಕೂಲ ಪರಿಣಾಮ ಉಂಟಾಗುತ್ತಿದೆ. ನಾಲ್ಕನೇ ತರಗತಿಯವರೆಗೆ ಹುಡುಗ-ಹುಡುಗಿಯರ ಅನುಪಾತ ಸಮ ಸಮವಾಗಿದ್ದು ಸುಮಾರು ಒಂಬತ್ತನೇ ವಯಸ್ಸಿನಲ್ಲಿ ಹುಡುಗಿಯರು ಶಾಲೆ ಬಿಡಲು ಪ್ರಾರಂಭಿಸುತ್ತಾರೆ.

ಗೆದ್ದಲಮರಿ ಶಾಲೆಯಲ್ಲಿ ಹಾಜರಾತಿ ಬಹಳಷ್ಟು ದಿನಗಳಲ್ಲಿ ಶೇಕಡ 90ರಷ್ಟು ಇರುತ್ತದೆ. ಒಂದು ಮಗು ಗೈರು ಹಾಜರಾದರೆ ಅದರ ಪೋಷಕರನ್ನು ಸಂಪರ್ಕಿಸಿ ಮಗು ಯಾಕೆ ಬಂದಿಲ್ಲ ಎಂದು ವಿಚಾರಿಸಿ ಅದು ಶಾಲೆಗೆ ಬರುವಂತೆ ನೋಡಿಕೊಳ್ಳುವ

ಜವಾಬ್ದಾರಿಯನ್ನು ಸಂಗಯ್ಯ ಸಹೋದ್ಯೋಗಿಗಳಿಗೆ ಕೊಟ್ಟಿದ್ದಾರೆ. ಎಲ್ಲ ಶಿಕ್ಷಕರು ಪೋಷಕರ ಮೊಬೈಲ್ ಸಂಖ್ಯೆಯನ್ನು ಇಟ್ಟುಕೊಳ್ಳುವಂತೆ ಸಂಗಯ್ಯ ತಿಳಿಸಿರುವುದಲ್ಲದೆ ಅದನ್ನು ಖಾತ್ರಿಪಡಿಸಿದ್ದಾರೆ ಕೂಡ. ಒಂದು ಮಗು ಗೈರುಹಾಜರಾದರೆ ಶಿಕ್ಷಕರು ಪೋಷಕರನ್ನು ಸಂಪರ್ಕಿಸುತ್ತಾರೆ. ಆ ತರಗತಿಯ ಶಿಕ್ಷಕರು ಮತ್ತು ದೈಹಿಕ ಶಿಕ್ಷಣದ ಶಿಕ್ಷಕರು ಆ ಮಗುವಿನ ಮನೆಗೆ ಹೋಗಿ ಗೈರುಹಾಜರಿಯ ಕಾರಣವನ್ನು ವಿಚಾರಿಸುತ್ತಾರೆ. ಅದನ್ನು ಶಾಲಾ ಅಭಿವೃದ್ಧಿ ಮತ್ತು ಉಸ್ತುವಾರಿ ಸಮಿತಿಯ ಅಧ್ಯಕ್ಷರಿಗೂ ತಿಳಿಸುತ್ತಾರೆ. ಗೆದ್ದಲಮರಿಯ ಶಾಲೆಗೆ ಬಂದು ಸೇರಿದ ಆರಂಭದ ದಿನಗಳಲ್ಲಿ ಸಂಗಯ್ಯನವರ ಜೀವನ ದಿನದ 24 ಗಂಟೆಯೂ ಶಾಲೆಯ ಸುತ್ತಲೇ ಗಿರಕಿ ಹೊಡೆಯುತ್ತಿತ್ತು. ಶಾಲೆಗೆ ಬೆಳಗ್ಗೆ ಸರಿಯಾಗಿ 9.15ಕ್ಕೆ ಬಂದು 6 ಘಂಟೆಯವರೆಗೂ ಕದಲದೆ ಸಮಯ ಪ್ರಜ್ಞೆಗೂ ಕರ್ತವ್ಯನಿಷ್ಠೆಗೂ ಉದಾಹರಣೆಯಾದರು. ಅವರ ಮನೆ ಶಾಲೆಯಿಂದ ಹದಿನೈದು ಕಿಲೋಮೀಟರ್ ದೂರವಿದ್ದು ದಿನವೂ ತಮ್ಮ ಮೋಟಾರ್ ಸೈಕಲ್ಲಿನಲ್ಲಿ ಶಾಲೆಗೆ ಬರುತ್ತಾರೆ.

ಸಂಗಯ್ಯನವರು ಆ ಶಾಲೆಗೆ ಒಂದು ಗುರಿಯನ್ನು ಇಟ್ಟುಕೊಂಡು ಬಂದರೆಂದು 2004ನೇ ಇಸವಿಯಿಂದಲೂ ಆ ಶಾಲೆಯಲ್ಲಿದ್ದ ಶಿಕ್ಷಕಿ ರೇಣುಕಾ ಹೇಳುತ್ತಾರೆ. ಸಂಗಯ್ಯನವರು ಅಲ್ಲಿಗೆ ಬಂದ ಅನಂತರವಷ್ಟೆ ಸಕಾರಾತ್ಮಕ ಬದಲಾವಣೆಗಳು ಕಂಡು ಬಂದವೆಂದು ಹೇಳುತ್ತಾರೆ. ಉತ್ತಮ ಮೂಲ ಸೌಕರ್ಯಗಳು, ನವೀಕರಣಗೊಂಡ ತರಗತಿ-ಕೊಠಡಿಗಳು, ಕುಸಿದು ಹೋಗುವಂತಿದ್ದ ವೇದಿಕೆಯ ಪುನರ್-ನಿರ್ಮಾಣ ಹಾಗೂ ಶಾಲೆಯಲ್ಲಿ ಸಮಗ್ರವಾಗಿ ಸಮಯ ಪ್ರಜ್ಞೆಯ ಸಂಸ್ಕೃತಿ ಇವೆಲ್ಲವನ್ನೂ ರೇಣುಕಾ ಪಟ್ಟಿ ಮಾಡುತ್ತಾರೆ. ಸಂಗಯ್ಯನವರ ಹದ್ದಿನ ಕಣ್ಣಿನಡಿಯಲ್ಲಿ ಒಳ್ಳೆ ಗುಣಮಟ್ಟದ ಕಟ್ಟಡದ ಪುನರ್-ನಿರ್ಮಾಣವಾಯಿತು. ಸುರಪುರದ ಪ್ರಗತಿಪರ ಬ್ಲಾಕ್ ಶಿಕ್ಷಣಾಧಿಕಾರಿ ಶಾಂತಗೌಡ ಅವರು ಆ ಸಂದರ್ಭದಲ್ಲಿ ಸಂಗಯ್ಯನವರ ಪ್ರಯತ್ನಶೀಲತೆಯನ್ನು ನೋಡಿ ನಾಲ್ಕು ಕೊಠಡಿಗಳ ನಿರ್ಮಾಣಕ್ಕೆ ಮಂಜೂರಾತಿ ನೀಡಿದರು.

ತಮ್ಮದು ಮಾದರಿ ಶಾಲೆಯಾಗಬೇಕೆಂದು ಸಂಗಯ್ಯ ಅಪೇಕ್ಷೆಪಡುತ್ತಾರೆ. ಅದಕ್ಕೆ ಮಾಡಬೇಕಾದ ಮುಖ್ಯ ಕಾರ್ಯಗಳ ಯೋಜನೆಯನ್ನು ಸಿದ್ಧಪಡಿಸಿದ್ದಾರೆ. ಒಳ್ಳೆಯ ಮೂಲ ಸೌಕರ್ಯ, ಆಕರ್ಷಕ ಹೂದೋಟ, ಗರಿಷ್ಠ ಹಾಜರಾತಿ, ಶಿಕ್ಷಕರ ಸಮಯ ಪ್ರಜ್ಞೆ, ಮಕ್ಕಳ ಸರ್ವಾಂಗೀಣ ಕಲಿಕೆಯ ಮಟ್ಟದ ಸಾಧನೆ – ಇವುಗಳೇ ಇದನ್ನು ಸಾಧಿಸಲು ಇರುವ ಮಾರ್ಗವೆಂದು ಗುರುತಿಸಿದ್ದಾರೆ. ಮೂಲ ಸೌಕರ್ಯಗಳಲ್ಲಿ ಮಹತ್ವದ ಸುಧಾರಣೆ ಆಗಿದೆ ಎಂಬ ತೃಪ್ತಿಯೊಂದಿಗೆ ಮಕ್ಕಳ ಕಲಿಕೆಯ ಮಟ್ಟವೂ ಸುಧಾರಿಸತೊಡಗಿದೆ ಎಂಬ ಸಮಾಧಾನ ಸಂಗಯ್ಯ ಅವರದ್ದು. "ನಾನು ಬಂದ ಅನಂತರದ ಏಳು ವರ್ಷಗಳಲ್ಲಿ ಈ ಶಾಲೆಯಿಂದ ಸುಮಾರು ಐವತ್ತು ಮಕ್ಕಳು ಮೊರಾರ್ಜಿ ಶಾಲೆಗಳಿಗೆ ಆಯ್ಕೆಯಾಗಿದ್ದಾರೆ. ಪ್ರತಿವರ್ಷ ಸುಮಾರು ಮೂರು ಮಕ್ಕಳು ನವೋದಯ ಶಾಲೆಗೆ ಪ್ರವೇಶ ಪಡೆಯುತ್ತಿದ್ದಾರೆ" ಎಂದು ಸಂಗಯ್ಯ ಹೇಳುತ್ತಾರೆ. ಈ ಎಲ್ಲ ಸಾಧನೆಗಳು ಮತ್ತು ಸುಧಾರಣೆಗಳ ಫಲವಾಗಿ ಪೋಷಕರು ಮಕ್ಕಳನ್ನು ಇಲ್ಲಿನ ಭೊರೂಕ ಸ್ಟೀಲ್ ಖಾಸಗಿ ಶಾಲೆಯಿಂದ ಬಿಡಿಸಿ ಈ ಸರ್ಕಾರಿ ಶಾಲೆಗೆ ಸೇರಿಸಿದರು.

"ನಾವು ನಮ್ಮ ಶಾಲೆಯ ಗುಣಮಟ್ಟವನ್ನು ಹಾಗೂ ನಮ್ಮ ಶಿಕ್ಷಕರ ಮತ್ತು ಮಕ್ಕಳ ಸಾಮರ್ಥ್ಯವನ್ನು ಬ್ಲಾಕ್‌ನ ಶಿಕ್ಷಣಾಧಿಕಾರಿಯವರಿಗೂ ಸಮುದಾಯಕ್ಕೂ ತೋರಿಸಿಕೊಡಬೇಕಾದ ಅಗತ್ಯವಿದೆ. ಇದಕ್ಕಾಗಿ ನಾನು ಬಾಲಸ್ನೇಹಿ ಶಾಲಾ ಉಪಕ್ರಮ (CFSI) ಜನಪ್ರಿಯಗೊಳಿಸಿರುವ ಮಾದರಿಯ ಒಂದು ಕಲಿಕೆಯ ಮೇಳವನ್ನು ಸಂಘಟಿಸಿದೆ. ಈ ಪ್ರಯತ್ನಗಳಲ್ಲಿ ಶಾಲಾ ಅಭಿವೃದ್ಧಿ ಉಸ್ತುವಾರಿ ಸಮಿತಿಯ ಬೆಂಬಲ ಬಹು ಮುಖ್ಯವಾದುದು." ಅಕ್ಕಪಕ್ಕದ ಹಳ್ಳಿಗಳ ಪೋಷಕರು ಸಹ ಗೆದ್ದಲಮರಿಯ ಶಾಲೆ ಚೆನ್ನಾಗಿ ಕೆಲಸ ಮಾಡುತ್ತಿರುವುದನ್ನು ಕಂಡು ತಮ್ಮ ಮಕ್ಕಳನ್ನು ಅಲ್ಲಿಗೆ ಸೇರಿಸಿದ್ದಾರೆ.

ಶಾಲೆಯ ಪರಿವರ್ತನೆಯ ಹಿಂದಿನ ಚಾಲಕಶಕ್ತಿಯೇ ಸಂಗಯ್ಯ. ಅವರು ಐವರು ಶಿಕ್ಷಕರನ್ನು ಒಂದು ತಂಡವಾಗಿ ರೂಪಿಸಿದ್ದಾರೆ. ಪಿ.ಟಿ. ಶಿಕ್ಷಕ ಮಲ್ಲಪ್ಪ ಹಾಗೂ ಕಿರಿಯ ತರಗತಿಗಳಲ್ಲಿ ಕಲಿಸುವ ಮಂಜುನಾಥ್ 2010ರಲ್ಲಿ ಸೇರಿದರು. ಇಲ್ಲಿ ದೀರ್ಘ ಕಾಲದಿಂದ ಸೇವೆ ಸಲ್ಲಿಸುತ್ತಿರುವ ರೇಣುಕಾ 1ರಿಂದ 3ನೇ ತರಗತಿಗಳಲ್ಲಿ ಮಂಜುನಾಥ್‌ರವರೊಂದಿಗೆ ನಿಕಟವಾಗಿ ಕೆಲಸ ಮಾಡುತ್ತಿದ್ದಾರೆ. ಈ ಇಬ್ಬರು ಶಿಕ್ಷಕರು "ನಲಿ–ಕಲಿ" ವಿಧಾನವನ್ನು ಅನುಸರಿಸುತ್ತಾರೆ. 6ರಿಂದ 8ನೇ ತರಗತಿಗಳಲ್ಲಿ ಬೋಧಿಸುವ ಅಂಬರೀಷ್ ಅವರು 2016ರಲ್ಲಿ ಹಾಗೂ ಡಿ. ಮಂಜುನಾಥ್ ಅವರು 2008ರಲ್ಲಿ ಸೇರಿದರು. ಡಿ. ಮಂಜುನಾಥ್ 5 ಮತ್ತು 6ನೇ ತರಗತಿಗಳಲ್ಲಿ ಬೋಧಿಸುತ್ತಾರೆ. ಸಂಗಯ್ಯರ ಮಹತ್ವಾಕಾಂಕ್ಷೆಯ ಯೋಜನೆಗಳನ್ನು ಕಾರ್ಯಗತಗೊಳಿಸಲು ಈ ಐವರು ಶಿಕ್ಷಕರು ಅನಿವಾರ್ಯರೇ ಸರಿ.

ಸಂಗಯ್ಯನವರಿಗೆ ಕಲಿಕೆ ಮತ್ತು ಬೋಧನ ವಿಧಾನದಲ್ಲಿ ಆಳವಾದ ಆಸಕ್ತಿಯಿದೆ. ಸುರಪುರದಲ್ಲಿ CFSIನ ಭಾಗವಾಗಿ ಅನುಷ್ಠಾನಗೊಳಿಸಿದ ಬಹುವರ್ಗದ, ಬಹುಹಂತದ ಬೋಧನ ಶಾಸ್ತ್ರವನ್ನು ಬೋಧಿಸುವ ನಲಿ–ಕಲಿ ತರಬೇತಿ ಕಾರ್ಯಕ್ರಮದಲ್ಲಿ ಅವರು ಆಸಕ್ತಿಯಿಂದ ಭಾಗವಹಿಸಿದರು. CFSI ಕಾರಣದಿಂದ ಸಂಗಯ್ಯನವರು ಸುರಪುರದಲ್ಲಿ ನಡೆದ ಬಹುತೇಕ ಎಲ್ಲ ಶಾಲಾ ನಾಯಕತ್ವ ಕಾರ್ಯಕ್ರಮಗಳಲ್ಲಿಯೂ ಭಾಗವಹಿಸಿದ್ದಾರೆ. ತಾವು ಮತ್ತು ತಮ್ಮ ಶಿಕ್ಷಕರು ಸತತವಾಗಿ ಕಲಿಯುತ್ತ ಬೆಳೆಯುವುದಕ್ಕೆ ಅವರು ವಿಶೇಷವಾದ ಗಮನ ನೀಡುತ್ತಿದ್ದರು. ಆದ್ದರಿಂದ ಗೆದ್ದಲಮರಿ ಶಾಲೆಯ ಶಿಕ್ಷಕರು ನಿಯಮಿತವಾಗಿ ಶಿಕ್ಷಕರ ಕಲಿಕಾ ಕೇಂದ್ರದ ಸ್ವಯಂಪ್ರೇರಿತ ಶಿಕ್ಷಕರ ಚಾವಡಿ (VTF) ಸಭೆಗಳಲ್ಲಿ ಹಾಜರಿರುತ್ತಿದ್ದರು. ಇವುಗಳಲ್ಲಿ ಶಿಕ್ಷಕರು ಭಾಗವಹಿಸುತ್ತಿದ್ದುದರಿಂದ ಶಾಲೆಗೆ ಒಂದು ಸುಸಜ್ಜಿತ ವಿಜ್ಞಾನದ ಪ್ರಯೋಗ ಶಾಲೆ ಮತ್ತು ಅಗತ್ಯದ ಬೋಧನೆ–ಕಲಿಕೆಯ ಪರಿಕರಗಳು ಲಭ್ಯವಾಗಿದ್ದವು. ಹದಿನೆಂಟು ತಿಂಗಳುಗಳಲ್ಲಿ ಸಂಗಯ್ಯನವರ ಶಾಲೆ ನಾಲ್ಕು VTF ಸಭೆಗಳಿಗೆ ಕೇಂದ್ರವಾಗಿತ್ತು. ಶಾಲಾವಧಿಯ ಅನಂತರ ಗೆದ್ದಲಮರಿಯ ಶಿಕ್ಷಕರು (ಸಾಯಂಕಾಲ 4.30ರಿಂದ 6.00 ಘಂಟೆಯವರೆಗೆ) ಮಕ್ಕಳೊಂದಿಗೆ ಬ್ಯಾಡ್ಮಿಂಟನ್ ಆಡುವುದನ್ನು ನೋಡುವುದೇ ಕಣ್ಣಿಗೆ ಹಬ್ಬ. ಗೆದ್ದಲಮರಿಯ ಶಾಲೆಯು ಖೊ–ಖೊ, ಥ್ರೋಬಾಲ್ ಮತ್ತು ಕೋಲಾಟದಲ್ಲಿ ಜಿಲ್ಲಾ ಮಟ್ಟದಲ್ಲಿ ಅರ್ಹತೆ ಪಡೆದು ಸ್ಪರ್ಧೆಗಳಲ್ಲಿ ಭಾಗವಹಿಸುತ್ತಿದೆ. ಶಾಲೆಯಲ್ಲಿ ದೈಹಿಕ ಶಿಕ್ಷಣಕ್ಕೆ ಮಹತ್ವ ನೀಡುತ್ತಿರುವುದು ಇದರಿಂದ ವೇದ್ಯವಾಗುತ್ತದೆ.

"ಶನಿವಾರ ನಾನು ಆಡಳಿತ ಸಂಬಂಧಿ ಕೆಲಸಗಳನ್ನು ಮಾಡುತ್ತೇನೆ, ಅದು ಮಾಹಿತಿ ಸಂಗ್ರಹ ಹಾಗೂ ದಾಖಲೆ ಸಿದ್ಧಪಡಿಸುವುದು ಇತ್ಯಾದಿ. ಇದಕ್ಕೆ ಸಹೋದ್ಯೋಗಿಗಳೂ ನೆರವಾಗುವುದರಿಂದ ಅದೇನೂ ತ್ರಾಸದ ಕೆಲಸ ಆಗಿ ಉಳಿದಿಲ್ಲ. ಹೀಗಾಗಿ ಐದರಿಂದ ಏಳನೇ ತರಗತಿಗಳಿಗೆ ವಿಜ್ಞಾನ ಹಾಗೂ ಕನ್ನಡ ಪಾಠ ಮಾಡಲು ನನಗೆ ಸಾಧ್ಯವಾಗುತ್ತದೆ" ಅನ್ನುತ್ತಾರೆ ಸಂಗಯ್ಯ. ಅವರು ಎದುರಿಸುತ್ತಿರುವ ಒಂದು ಕಷ್ಟವೆಂದರೆ ವಿದ್ಯಾರ್ಥಿ–ಶಿಕ್ಷಕ ಅನುಪಾತ ಪ್ರತಿಕೂಲವಾಗಿರುವುದು; ವರ್ಗಾವಣೆಯಾದ ಶಿಕ್ಷಕರ ಸ್ಥಾನಗಳನ್ನು ತುಂಬದೇ ಇರುವುದರಿಂದ ಹೀಗಾಗಿದೆ.

ಸಂಗಯ್ಯ ಹಿಂದೆ ಕೆಲಸಮಾಡಿದ ಶಾಲೆಯಲ್ಲಿ ಕೂಡಾ ಎಲ್‌ಜಿಪಿ (ಲರ್ನಿಂಗ್ ಗ್ಯಾರಂಟಿ ಪ್ರೋಗ್ರಾಂ)ಯಲ್ಲಿ ಭಾಗವಹಿಸಿದ್ದರೂ ಪ್ರಶಸ್ತಿಗೆ ಅರ್ಹತೆ ಪಡೆಯಲಿಲ್ಲ. ಅಲ್ಲಿ ದಾಖಲಾತಿ ಬಹು ಸಂಖ್ಯೆಯಲ್ಲಿದ್ದರೂ ಅವರಿಗೆ ಸಾಕಷ್ಟು ಶಿಕ್ಷಕ ಸಿಬ್ಬಂದಿಯಿರಲಿಲ್ಲ. ಆದರೆ ಗೆದ್ದಲಮರಿಯಲ್ಲಿ, ಸಂಗಯ್ಯನವರು ಹೇಳುವಂತೆ ಆಗಲೆ ಚಿತ್ರ ಭಿನ್ನವಾಗಿತ್ತು. ಇತ್ತೀಚೆಗೆ ಕರ್ನಾಟಕ ಶಾಲಾ ಗುಣಮಟ್ಟ ಮೌಲ್ಯಮಾಪನ ಮತ್ತು ಮಾನ್ಯತಾ ಮಂಡಳಿ (Karnataka School Quality Assessment and Accreditation Council-KSQAAC)ಯು ಮೌಲ್ಯಮಾಪನ ಮಾಡಿತು. ತಾವು ಮಕ್ಕಳಿಂದ ಇಂತಹ ಪ್ರತಿಕ್ರಿಯೆಯನ್ನು ಮತ್ತು ಇಂತಹ ಪರಿಸರವನ್ನು ಬೇರೆಲ್ಲೂ ನೋಡಿಲ್ಲ ಎಂದು ಮಂಡಳಿಯ ಬಾಹ್ಯ ಸದಸ್ಯರು ಸಂಗಯ್ಯನವರಿಗೆ ಹೇಳಿದರು. ಸಂಗಯ್ಯನವರ ಪ್ರಕಾರ 1ರಿಂದ 3ನೇ ತರಗತಿವರೆಗೆ ಕಲಿಕೆಯ ಅಡಿಪಾಯಕ್ಕೆ ಅವರು ನೀಡಿದ ಮಹತ್ವವೇ ಇಂತಹ ಫಲಿತಾಂಶಕ್ಕೆ ನಿರ್ಣಾಯಕವಾಗಿತ್ತು. "ನಮ್ಮ ಶಾಲೆಯಲ್ಲಿ ಮೂರನೇ ತರಗತಿಗೆ ಬರುವ ಹೊತ್ತಿಗೆ ಪ್ರತಿ ಮಗುವೂ ಓದಿ ಬರೆಯಲು ಸಮರ್ಥವಾಗಿರುತ್ತದೆ. ನಾವು ನಲಿ–ಕಲಿಯ ಎಲ್ಲ ಸಾಧ್ಯತೆಗಳನ್ನೂ ಉಪಯೋಗಿಸಿಕೊಳ್ಳುತ್ತೇವೆ, ಬೆಳಗಿನ ಸಭೆಯು ಸಹ ಮುಖ್ಯಪಾತ್ರವನ್ನು ವಹಿಸುತ್ತದೆ. ರಸಪ್ರಶ್ನೆ ನಮ್ಮ ಈ ಸಭೆಯ ಪ್ರಮುಖ ಅಂಶ." ಸಂಗಯ್ಯ ತಮ್ಮ ಯಶಸ್ಸಿನ ಮೂಲದ ಬಗ್ಗೆ ಹೀಗೆ ಸುಳಿವು ಕೊಡುತ್ತಾರೆ. ಗೆದ್ದಲಮರಿ ಶಾಲೆಯ ಬೆಳಗಿನ ಸಭೆಯನ್ನು ನೋಡುವ ಅವಕಾಶ ಪಡೆದವರೆಲ್ಲ ಇದನ್ನು ಒಪ್ಪಿಕೊಳ್ಳುತ್ತಾರೆ. ಪ್ರತಿಯೊಂದು ತರಗತಿಯೂ ಸರದಿಯ ಮೇರೆಗೆ ಈ ಸಭೆಯನ್ನು ನಿರ್ವಹಿಸುತ್ತದೆ. ಪ್ರತಿಯೊಂದು ಮಗುವಿಗೂ ಇದರಲ್ಲಿ ಭಾಗವಹಿಸುವ ಅವಕಾಶವನ್ನು ಕೊಡಲಾಗುತ್ತದೆ. ಅದು ಪಠ್ಯಪುಸ್ತಕದ ಒಂದು ಭಾಗವನ್ನಾಗಲೀ ಅಥವಾ ಸುದ್ದಿ ಪತ್ರಿಕೆಯನ್ನಾಗಲೀ ಓದುವುದಿರಬಹುದು, ಪ್ರಶ್ನೆಗಳಿಗೆ ಉತ್ತರಿಸುವುದೂ ಇರಬಹುದು. ಶುಕ್ರವಾರದ ರಸಪ್ರಶ್ನೆ ಕಾರ್ಯಕ್ರಮ ವಿಶೇಷವಾದುದು. ಅಲ್ಲಿ ಸಮುದಾಯದಿಂದ ಪ್ರಾಯೋಜಿತವಾಗಿರುವ ಮೂರು ಬಹುಮಾನಗಳೂ ಇರುತ್ತವೆ.

ಸಂಗಯ್ಯನವರೊಡನೆ ಅವರ ಕೆಲಸದ ಬಗ್ಗೆ ಕೇಳಿದರೆ ಅದೆಲ್ಲ ಸಾಮಾನ್ಯ ವಿಷಯ ಎಂಬಂತೆ ಮಾತನಾಡುತ್ತಾರೆ. ಆದರೆ ತಾವು ಸಂಗಯ್ಯನವರಿಂದ ಕಲಿಯುವುದು ಬೇಕಾದಷ್ಟಿದೆ ಎಂದು ಸುರಪುರ ಬ್ಲಾಕಿನ ಬೇರೆ ಶಾಲೆಗಳ ಮುಖ್ಯೋಪಾಧ್ಯಾಯರು ಹೇಳುವುದನ್ನು ಗಮನಿಸಿದರೆ ಅವರದ್ದು ಎಂತಹ ಸ್ಫೂರ್ತಿದಾಯಕ ವ್ಯಕ್ತಿತ್ವ ಎಂಬುದು ತಿಳಿಯುತ್ತದೆ. ಗೆದ್ದಲಮರಿಯ ಆಸುಪಾಸಿನ ನಾಲ್ಕೈದು ಶಾಲೆಗಳು ಈ ಶಾಲೆಯ

ಕೆಲಸಗಳನ್ನು ನೋಡಿ ಕಲಿತು ಬರಲು ತಮ್ಮ ಶಿಕ್ಷಕರನ್ನು ಕಳಿಸಿವೆ. ಅವರು ಬಂದು ಸಂಗಯ್ಯನವರ ಹಾಗೂ ಅವರ ಸಹೋದ್ಯೋಗಿಗಳ ಸಲಹೆ ಕೇಳಿದಾಗ ಅವರ ಉತ್ತರ ಬಲು ಸರಳವಾಗಿತ್ತು: ಮೊದಲನೆಯದು – ಮೂಲ ಸೌಕರ್ಯಗಳನ್ನು ಸರಿಪಡಿಸಿಕೊಳ್ಳಿ, ಹಾಜರಾತಿ ಹೆಚ್ಚಿಸಿ, ಸಮಯಪಾಲನೆ ಹಾಗೂ ಮಕ್ಕಳ ಕಲಿಕೆಗೆ ಗಮನ ಕೊಡಿ. ಎರಡನೆಯದು – ಏಕತೆಯಿಂದ ಕೆಲಸಮಾಡಿ, ಎಲ್ಲದಕ್ಕಿಂತ ಮುಖ್ಯವಾಗಿ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸಿ. ಮೂರನೆಯದಾಗಿ – ಪ್ರತಿಯೊಂದು ವ್ಯವಹಾರದಲ್ಲೂ ಪಾರದರ್ಶಕತೆ ಇರಲಿ, ಖರ್ಚು ಮಾಡಿದ ಪ್ರತಿ ಪೈಸೆಗೂ ಲೆಕ್ಕ ಇಟ್ಟುಕೊಳ್ಳಿ.

ನಾವು ಅಲ್ಲಿಂದ ಹೊರಟಾಗ ಸಂಗಯ್ಯ ಹೇಳಿದ ಮಾತು ಗಮನಾರ್ಹವಾದದ್ದು: "ನಮ್ಮ ಶಾಲೆ ಸುರಪುರ ಬ್ಲಾಕಿನ ಮೊದಲ ಹತ್ತು ಶಾಲೆಗಳಲ್ಲಿ ಒಂದಾಗಿರುತ್ತದೆ ಎಂದು ನನಗೆ ವಿಶ್ವಾಸವಿದೆ. ಯಾವ ಕಾರಣಕ್ಕೂ ಹುಡುಗಿಯರು ಅರ್ಧಕ್ಕೇ ಶಾಲೆ ಬಿಡಬಾರದು. ಈಗ ಈ ಅನುಪಾತ 35:65 ಇದೆ; ಕೆಲವೇ ವರ್ಷಗಳಲ್ಲಿ ನಾನು ಅದನ್ನು 50:50ಕ್ಕೆ ತರುತ್ತೇನೆ. ಇದು ದುರ್ಗಮ ಪ್ರದೇಶ, ಶಾಲೆ ಪ್ರತಿಕೂಲ ಪರಿಸ್ಥಿತಿಯನ್ನು ಎದುರಿಸುತ್ತಿದೆ; ಆದರೂ ಇದನ್ನು ನಾವು ಮಾದರಿ ಶಾಲೆಯನ್ನಾಗಿ ಮಾಡುತ್ತೇವೆ."

---

## "ನಮ್ಮ ಶಾಲೆಗೆ ಬರುವ ಮಕ್ಕಳು ನಿಜಕ್ಕೂ ದುರ್ಬಲರು. ಶಿಕ್ಷಕರು ಮಾತ್ರ ಅವರಿಗೆ ಸಹಾಯ ಮಾಡಬಹುದು."

### ದುಂಡಪ್ಪ ಕೋಲ್ಕರ್

ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆ ಹುಣಸಿಗಿ (ಪಟ್ಟಣ)
ಸುರಪುರ ಬ್ಲಾಕ್, ಯಾದಗಿರಿ ಜಿಲ್ಲೆ, ಕರ್ನಾಟಕ

---

ಹುಣಸಿಗಿಯ ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆಯ (GMPS) ಮುಖ್ಯ ಶಿಕ್ಷಕರಾದ ದುಂಡಪ್ಪ ಕೋಲ್ಕರ್ ಅವರು ಐವತ್ತೈದು ವರ್ಷದ ಹಿರಿಯರಾಗಿದ್ದು 1982ರಲ್ಲಿ ಶಿಕ್ಷಣ ಇಲಾಖೆಯನ್ನು ಸೇರಿದವರು. ಅವರು ವಿಜಯಪುರ ಜಿಲ್ಲೆಯ ಸ್ಥಳೀಯರಾಗಿದ್ದು ತಮ್ಮ ಸಂಪೂರ್ಣ ವೃತ್ತಿ ಜೀವನವನ್ನು ಸುರಪುರ ತಾಲ್ಲೂಕಿನ ಮೂರು ಶಾಲೆಗಳಲ್ಲಿ ಕಳೆದಿದ್ದಾರೆ. GHPS ಯದಲಭಾವಿ (1983–2006)ಯಲ್ಲಿ ಅವರು ಮುಖ್ಯ ಶಿಕ್ಷಕರಾಗಿದ್ದರು; ಸಮೂಹ ಸಂಪನ್ಮೂಲ ವ್ಯಕ್ತಿಯಾಗಿದ್ದರು (CRP-Cluster Resource Person) (2006–2012) ಮತ್ತು GHPS ದೇವತ್‌ಕಲ್‌ನಲ್ಲೂ 2012–2016ರವರೆಗೆ ಮುಖ್ಯ ಶಿಕ್ಷಕರಾಗಿದ್ದರು. ನಿವೃತ್ತಿಗೆ ಮೊದಲಿನ ಬಹುಶಃ ಕೊನೆಯ ನಿಯೋಜನೆಯಾಗಿ ಅವರೀಗ ಹುಣಸಗಿಯ ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆಯ (GMPS) ಮುಖ್ಯ ಶಿಕ್ಷಕರಾಗಿದ್ದಾರೆ.

ಯದಲಭಾವಿಯ ತಮ್ಮ ಇಪ್ಪತ್ತ ಮೂರು ವರ್ಷಗಳ ದೀರ್ಘ ಸೇವಾವಧಿಯಲ್ಲಿ ಸ್ಥಳೀಯ ಸಮುದಾಯಕ್ಕೆ ದುಂಡಪ್ಪ ಒಂದು ದಂತಕಥೆಯೇ ಆಗಿದ್ದರು. 1983ರಲ್ಲಿ ಅವರು ಅಲ್ಲಿಗೆ ಬಂದಾಗ ಶಾಲೆಯಲ್ಲಿ ಯಾವ ಮೂಲ ಸೌಕರ್ಯಗಳೂ ಇರಲಿಲ್ಲ. ಸುಮಾರು ಹತ್ತು ಮಕ್ಕಳೊಂದಿಗೆ ದೇವಸ್ಥಾನವೊಂದರಲ್ಲಿ ಶಾಲೆಯನ್ನು ಆರಂಭಿಸಿದರು.

ಶಾಲೆಯ ದಾಖಲು ಪುಸ್ತಕ ಗ್ರಾಮದ ಗೌಡರ ಸುಪರ್ದಿಯಲ್ಲಿರುತ್ತಿತ್ತು. ಗೌಡರು ಕೃಷಿ ಭೂಮಿಯ ಒಡೆಯರಾಗಿದ್ದರು. ಮುಂದಿನ ಐದು ವರ್ಷ 1988ರವರೆಗೆ ಯದಲಭಾವಿಯ ಶಾಲೆ ಹೀಗೆಯೇ ನಡೆಯಿತು. 1988ರಲ್ಲಿ ಗೌಡರು ದುಂಡಪ್ಪನವರ ಶ್ರದ್ಧೆಯನ್ನು ಮೆಚ್ಚಿಕೊಂಡು ಶಾಲೆಗೆ ಭೂಮಿಯನ್ನು ಕಾಣಿಕೆಯಾಗಿ ನೀಡಿದರು. 1200 ಚದರ ಅಡಿಯ ಕಟ್ಟಡ ನಿರ್ಮಾಣಕ್ಕೆ ಮಂಡಲ ಪಂಚಾಯ್ತಿ ಹಣ ಮಂಜೂರು ಮಾಡಿತು. ಮಕ್ಕಳು ಬರಲು ಪ್ರಾರಂಭಿಸಿದಾಗ ಇನ್ನೊಬ್ಬ ಶಿಕ್ಷಕರನ್ನು ನೇಮಕ ಮಾಡಲಾಯಿತು. ಕೆಲಕಾಲದಲ್ಲೇ ಆ ಊರಿನಲ್ಲಿರುವ ಸುಮಾರು ನಲವತ್ತೈದು ಮನೆಗಳಿಂದ ಸುಮಾರು ಅರವತ್ತು ಮಕ್ಕಳ ನೋಂದಣಿ ಆಯಿತು. ಈ ಮಕ್ಕಳಲ್ಲಿ ಬಹುತೇಕರು ಶಾಲೆಗೆ ನಿಯಮಿತವಾಗಿ ಬರುವವರೇ ಆಗಿದ್ದರು. ತಹಸೀಲ್ದಾರರು ಶಾಲೆಗೆ ಇನ್ನಷ್ಟು ಭೂಮಿಯನ್ನು ಕೊಟ್ಟರು. ಹಳ್ಳಿಯ ಜನರು ಶಾಲೆಯ ಕೆಲಸ ಒಳ್ಳೆಯ ಕೆಲಸವೆಂದು ತಿಳಿದು ವಸತಿ ಭೂಮಿಯನ್ನು ಸಹ ಬಿಟ್ಟುಕೊಡಲು ಒಪ್ಪಿದರು.

ಆ ಭೂಮಿ ಬಂಡೆಗಲ್ಲುಗಳಿಂದ ತುಂಬಿತ್ತು. ನಿವೇಶನವನ್ನು ಸಮತಟ್ಟು ಮಾಡಿ ಆವರಣದ ಗೋಡೆಯನ್ನು ನಿರ್ಮಿಸಬೇಕಾಗಿತ್ತು. ಆ ಗ್ರಾಮದ ಜನರಲ್ಲಿ ಶ್ರಮದಾನ ಬಿಟ್ಟರೆ ಬೇರಾವುದೇ ದೇಣಿಗೆ ಕೊಡುವ ಸಾಮರ್ಥ್ಯ ಇರಲಿಲ್ಲ. ಸಮತಟ್ಟು ಹಾಗೂ ಪಾಗಾರದ ಕೆಲಸವನ್ನು ಊರಿನ ಜನ ಶ್ರಮದಾನದಿಂದಲೇ ಮಾಡಿಕೊಟ್ಟರು. ಗೌಡರು ಕೊಟ್ಟ ನಿವೇಶನವೂ ಸೇರಿದಂತೆ ಶಾಲೆಯ ಅಭಿವೃದ್ಧಿಯ ವಿವಿಧ ಹಂತಗಳಲ್ಲಿ ದುಂಡಪ್ಪನವರು ಸುತ್ತಲೂ ಸಸಿಗಳನ್ನು ನೆಡಿಸಿದರು. ಇಂದು ವಿವಿಧ ಎತ್ತರಗಳಲ್ಲಿ ಕಂಗೊಳಿಸುವ ಆ ಮರಗಳು ಶಾಲೆಯ ವಿವಿಧ ಹಂತದ ಬೆಳವಣಿಗೆಯನ್ನು ಸೂಚಿಸುತ್ತವೆ. ಶಾಲೆಗೆ ಭದ್ರ ನೆಲೆ ದೊರೆತು, ಇಬ್ಬರು ಶಿಕ್ಷಕರೂ ಮಕ್ಕಳೂ ಜೊತೆಗೂಡಿ ಕಲಿಕೆ ಸುಗಮವಾಗಿ ಸಾಗತೊಡಗಿದಾಗ ಕ್ರೀಡಾ ಚಟುವಟಿಕೆಗಳತ್ತ ಗಮನ ಹರಿಸಿದರು. ಬಲುಬೇಗ ಯದಲಭಾವಿ ಶಾಲೆಯ ಮಕ್ಕಳು ಕಬಡ್ಡಿ ಮತ್ತು ಖೋಖೋ ಆಟಗಳಲ್ಲಿ ಪರಿಣತರಾದರು. ಕ್ಲಸ್ಟರ್ ಮತ್ತು ಬ್ಲಾಕ್ ಮಟ್ಟಗಳಲ್ಲಿನ ಅಂತರ್–ಶಾಲಾ ಸ್ಪರ್ಧೆಗಳಲ್ಲಿ ಜಯಿಸಿ ಜಿಲ್ಲಾ ಮಟ್ಟವನ್ನು ತಲುಪಲು ಅರ್ಹತೆ ಗಳಿಸಿ ಊರಿಗೆ ಕೀರ್ತಿಯನ್ನು ತಂದರು.

1992ರಲ್ಲಿ ಶಾಲೆ ಹಿರಿಯ ಪ್ರಾಥಮಿಕ ಶಾಲೆಯಾಗಿ ಭಡ್ತಿ ಹೊಂದಿ 6 ಮತ್ತು 7ನೇ ತರಗತಿಗಳು ಸೇರಿದವು. ಸುತ್ತಮುತ್ತಲ ಆರೇಳು ಬುಡಕಟ್ಟು ಕೊಪ್ಪಲುಗಳಿಂದಲೂ ಮಕ್ಕಳು ಶಾಲೆಗೆ ಬರತೊಡಗಿದರು. 2002ರ ಹೊತ್ತಿಗೆ ಯದಲಭಾವಿಯ ಶಾಲೆಯಲ್ಲಿ ಮಕ್ಕಳ ಸಂಖ್ಯೆ ಇನ್ನೂರ ಇಪ್ಪತ್ತಕ್ಕೆ ಏರಿತು. 'ದೇವಸ್ಥಾನದಲ್ಲಿ ಹತ್ತು ಮಕ್ಕಳೊಂದಿಗೆ ಪ್ರಾರಂಭಗೊಂಡು ಹಿರಿಯ ಪ್ರಾಥಮಿಕ ಶಾಲೆಯ ಮಟ್ಟಕ್ಕೆ ಬೆಳೆದ ನಿಮ್ಮ ಶಾಲೆಯ ಯಶಸ್ಸಿನ ಗಾಥೆಗೆ ಏನು ಕಾರಣ ಹೇಳಿ ದುಂಡಪ್ಪನವರೇ' ಎಂದು ನಾವು ಕೇಳಿದಾಗ ಅವರು ನಿರುಮ್ಮಳವಾಗಿ ಹೇಳಿದರು: "ಇದಕ್ಕೆ ಮುಖ್ಯವಾಗಿ ಎರಡು ಕಾರಣಗಳೆಂದು ನನಗನಿಸುತ್ತದೆ. ಒಂದನೆಯದು ಸಮುದಾಯದೊಡನೆ ಬೆಸೆದ ವಿಶ್ವಾಸದ ಬಂಧ. ಎರಡನೆಯದು ನಾವು ಮಕ್ಕಳಿಗೆ ಕಲಿಸುತ್ತಿದ್ದ ವಿಧಾನ. ಪೋಷಕರು ಅನಕ್ಷರಸ್ಥರಿರಬಹುದು, ಆದರೆ ಮಕ್ಕಳು ಕಲಿತು ಬುದ್ಧಿವಂತರಾಗುತ್ತಿರುವುದು ಅವರಿಗೆ ತಿಳಿಯುತ್ತಿತ್ತು. ನಾನು ಪ್ರತಿದಿನವೂ ಶಾಲೆಯಲ್ಲಿ ಬೆಳಿಗ್ಗೆ ಎಂಟರಿಂದ ಸಾಯಂಕಾಲ

ಏಳರವರೆಗೂ ಇರುತ್ತಿದ್ದುದನ್ನು, ಪಾಠದ ನಂತರ ಮಕ್ಕಳನ್ನು ಆಟಗಳಲ್ಲಿ ತೊಡಗಿಸುತ್ತಿದ್ದುದನ್ನು ಅವರು ನೋಡುತ್ತಿದ್ದರು. ಶಾಲೆಗೆ ಕಲಾವಿದರನ್ನೂ ಸಂಗೀತಗಾರರನ್ನೂ ಕರೆತರುತ್ತಿದ್ದೆ; ಶಾಲೆ ಒಂದು ಸಾಂಸ್ಕೃತಿಕ ಕೇಂದ್ರವೂ ಆಯಿತು. ಮಕ್ಕಳು ಕಲಿಕೆಯಲ್ಲಿ ಮಾತ್ರವಲ್ಲದೆ ಬೇರೆ ವಿಷಯಗಳಲ್ಲೂ ಪರಿಣತರಾಗುತ್ತಿದ್ದರು."

2006ರಲ್ಲಿ ಅವರು ಕ್ಲಸ್ಟರ್ (ಸಮೂಹ) ಸಂಪನ್ಮೂಲ ವ್ಯಕ್ತಿಯಾಗಿ (Cluster Resource Person - CRP) ಅಲ್ಲಿಂದ ನಿರ್ಗಮಿಸಿದಾಗ, ಯದಲಭಾವಿಯ GHPSಗೆ ಅವರ ಸ್ಥಾನಕ್ಕೆ ಬಂದವರ ಸಾಮರ್ಥ್ಯ ಕಡಿಮೆಯಿತ್ತು. ಶಾಲೆಯಲ್ಲಿ ಸಮುದಾಯದ ಕೆಲವರಿಗೂ ಶಿಕ್ಷಕರಿಗೂ ನಡುವೆ ಹೊಡೆದಾಟವೂ ಸೇರಿದಂತೆ ಹಲವು ಹಿಂಸಾತ್ಮಕ ಘಟನೆಗಳು ನಡೆದವು. ಆ ಶಾಲೆಯ ಚೈತನ್ಯದ ಚಿಲುಮೆಯೇ ಬತ್ತಿಹೋಯಿತು. ಅನೇಕ ವರ್ಷಗಳ ಅನಂತರ, ಆ ಶಾಲೆಗೆ 2015ರಲ್ಲಿ ಬಂದ ಒಬ್ಬರು ಶ್ರದ್ಧಾವಂತ ಶಿಕ್ಷಕರು ಅದಕ್ಕೆ ಮರುಚೈತನ್ಯ ನೀಡಲು ಪ್ರಯತ್ನಿಸುತ್ತಿದ್ದಾರೆ ಎಂದು ನಾನು ಕೇಳಿದ್ದೇನೆ.

ದುಂಡಪ್ಪ ಹುಣಸಗಿ ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆಗೆ ಬಂದು ಒಂದು ವರ್ಷಕ್ಕಿಂತ ಸ್ವಲ್ಪ ಜಾಸ್ತಿ ಕಾಲವಾಯಿತು. ಅವರು ಬಂದಾಗ ಶಾಲೆ ತೀರಾ ಅಲಕ್ಷ್ಯಕ್ಕೆ ಒಳಗಾಗಿತ್ತು. ಊರವರೆಲ್ಲ ಶಾಲೆಯಿಂದ ದೂರ ಸರಿದಿದ್ದರು; ಯಾರಿಗೂ ಶಾಲೆಯ ಬಗ್ಗೆ ಒಳ್ಳೆಯ ಅಭಿಪ್ರಾಯ ಇರಲಿಲ್ಲ. ದುಂಡಪ್ಪ ಪರಿಸ್ಥಿತಿಯ ಅವಲೋಕನ ಮಾಡಿದರು. ಶಾಲೆಗೆ ಸಾಕಷ್ಟು ಸ್ಥಳಾವಕಾಶ ಇತ್ತು. ಹಳೆಯ ಕಟ್ಟಡವೂ ಇತ್ತಾದರೂ ಅದು ಬಳಸುವ ಸ್ಥಿತಿಯಲ್ಲಿ ಇರಲಿಲ್ಲ. ಇಡೀ ಊರು ರಾಜಕಾರಣದ ದೆಸೆಯಿಂದ ಒಡೆದು ಹೋಗಿತ್ತು. ಶಾಲೆಯ ಆವರಣವನ್ನು ಮದುವೆಗಳಿಗೆ, ಟ್ರಾಕ್ಟರ್ ನಿಲ್ಲಿಸುವ ಸ್ಥಳ ಇತ್ಯಾದಿಗಳಿಗೆ ಉಪಯೋಗಿಸುತ್ತಿದ್ದರು. ಊರಿನ ಪ್ರಭಾವಿಗಳು ಶಾಲೆಯ ಕಟ್ಟಡವನ್ನು ತಮ್ಮ ಕೆಲಸಗಳಿಗೆ ಬಳಸಿಕೊಳ್ಳುತ್ತಿದ್ದರು. ದುಂಡಪ್ಪ ಇದನ್ನೆಲ್ಲ ನೋಡಿ ಧೃತಿಗೆಡಲಿಲ್ಲ; ಅವರು ಇದನ್ನು ಸವಾಲಿನಂತೆ ತೆಗೆದುಕೊಂಡು ಎಲ್ಲವನ್ನೂ ಸರಿಪಡಿಸುವ ಕಾರ್ಯಕ್ಕೆ ಕೈಹಚ್ಚಿದರು. ದುಂಡಪ್ಪನವರು ಮೊದಲ ಹೆಜ್ಜೆಯಾಗಿ ಜಿಲ್ಲೆಯ ಮುಖ್ಯಸ್ಥರಾದ ಸಾರ್ವಜನಿಕ ಶಿಕ್ಷಣ ಇಲಾಖೆಯ ಡೈರೆಕ್ಟರ್ (ಡಿಡಿಪಿಐ) ಅವರನ್ನು ಶಾಲೆಯ ಸ್ಥಿತಿಯನ್ನು ಬಂದು ನೋಡಲು ಕೇಳಿಕೊಂಡರು. ಡಿಡಿಪಿಐ ಅವರ ಭೇಟಿಯ ವೇಳೆ ಸಮುದಾಯದ ಕೆಲಮಂದಿ ಗಣ್ಯರೂ ಅಲ್ಲಿ ಹಾಜರಿರುವಂತೆ ದುಂಡಪ್ಪ ವ್ಯವಸ್ಥೆ ಮಾಡಿದರು. ಈ ಭೇಟಿಯುದ್ದಕ್ಕೂ ದುಂಡಪ್ಪನವರು ಆ ಶಾಲೆಯ ಮಹತ್ತ್ವವನ್ನು ಅಧಿಕಾರಿಗೆ ಸವಿಸ್ತಾರವಾಗಿ ವಿವರಿಸಿದರು. ಆ ಶಾಲೆ 1943ರಲ್ಲೇ ಪ್ರಾರಂಭವಾಗಿತ್ತು. ನಿಜವಾಗಿಯೂ ಜನ ಸಮುದಾಯವು ಹೆಮ್ಮೆಪಡಬೇಕಾಗಿದ್ದ ಶಾಲೆ ಈಗ ಅತ್ಯಂತ ಶೋಚನೀಯ ಸ್ಥಿತಿಯಲ್ಲಿತ್ತು. ಶಾಲೆಯ ಬ್ಯಾಂಕ್ ಖಾತೆಯಲ್ಲಿ ಬಳಸದೇ ಉಳಿದ ಹಣವಿತ್ತು. ಆ ಹಣವನ್ನು ಶಾಲೆಗೆ ಮಂಜೂರು ಮಾಡಬೇಕು ಎಂದು ದುಂಡಪ್ಪನವರು ಅಧಿಕಾರಿಯಲ್ಲಿ ಕೇಳಿಕೊಂಡರು. ಹಣ ಬಂತು. ಅದರಿಂದ ಒಂದು ದೊಡ್ಡ ಗೇಟನ್ನು ಮಾಡಿಸಿ ಶಾಲಾ ಆವರಣವನ್ನು ಭದ್ರಪಡಿಸಿದರು. ಶಾಲೆಯ ಆವರಣವನ್ನು ಸಾರ್ವಜನಿಕರು ತಮ್ಮ ಸ್ವಂತ ಆಸ್ತಿಯಂತೆ ಉಪಯೋಗಿಸತಕ್ಕದ್ದಲ್ಲ ಎಂಬ ಸಂದೇಶ ಸಮುದಾಯಕ್ಕೆ ರವಾನೆಯಾಯಿತು. ಜನರ ಬೆಂಬಲವನ್ನು ಪಡೆದು ಹಣ ಸಂಗ್ರಹ

ಮಾಡಿ ಹಳೆ ಕಟ್ಟಡದ ಜಾಗದಲ್ಲಿ ಹೊಸ ಕಟ್ಟಡ ಕಟ್ಟಿಸುವುದು ಅವರ ಮುಂದಿನ ಹೆಜ್ಜೆಯಾಗಿತ್ತು. ಇದಕ್ಕೆ ಡಿಡಿಪಿಐ, ಬಿಇಓ, ಜಿಲ್ಲಾ ಪಂಚಾಯಿತಿ ಹಾಗೂ ಪಿಡಬ್ಲ್ಯೂಡಿಗಳ ಬೆಂಬಲವನ್ನು ಪಡೆದರು. ದುಂಡಪ್ಪನವರೇನೋ ನಿಧಿ ಸಂಗ್ರಹದಲ್ಲಿ ಯಶಸ್ಸು ಪಡೆದರೂ ಕಳೆದ ಹತ್ತು ತಿಂಗಳುಗಳಲ್ಲಿ ಶಾಲೆಯವರು ಮಂಜೂರಾದ ಹಣವನ್ನು ಖರ್ಚುಮಾಡಲೂ ಇಲ್ಲ; ಬೇರಾವ ಖರ್ಚಿಗೂ ಲೆಕ್ಕಪತ್ರ ಇಟ್ಟಿರಲಿಲ್ಲ ಎಂಬ ಸತ್ಯ ಅವರಿಗೆ ಗೊತ್ತಿತ್ತು. ಕಟ್ಟಡ ಬಿದ್ದುಹೋಗುವ ಸ್ಥಿತಿಯಲ್ಲಿದ್ದರೂ ಸಹಾ ಮಂಜೂರಾದ ಆರು ಲಕ್ಷ ರೂಪಾಯಿ ಹಣವನ್ನು ಬಳಸದೆ ರದ್ದಾಗಲು ಬಿಟ್ಟಿದ್ದರು.

ಕಟ್ಟಡದ ಕೆಲಸ ಈಗ ಆಗದಿದ್ದರೆ ಮುಂದೆ ಎಂದೂ ಆಗುವುದಿಲ್ಲವೆಂಬುದು ದುಂಡಪ್ಪನವರಿಗೆ ತಿಳಿದಿತ್ತು. ಹಾಗಾಗಿ ಅವರು ಸ್ವಲ್ಪವೂ ಕಾಲಹರಣ ಮಾಡದೆ ಒಂದು ಒಳ್ಳೆಯ ಕಟ್ಟಡವನ್ನು ನಿರ್ಮಾಣ ಮಾಡಿದರು. ಮಾತ್ರವಲ್ಲದೆ ಅದಕ್ಕೆ ಬಂದ ಹಣ ಹಾಗೂ ಖರ್ಚಾದ ಹಣ ಎರಡರ ಲೆಕ್ಕವನ್ನೂ ಇಟ್ಟುಕೊಂಡು ಸಮುದಾಯದ ಮುಂದೆ ಮಂಡಿಸಿದರು. ಅವರ ಈ ಪಾರದರ್ಶಕತೆ ಜನರೊಂದಿಗೆ ಬಲವಾದ ಬಾಂಧವ್ಯವನ್ನೂ ವಿಶ್ವಾಸವನ್ನೂ ಬೆಸೆಯಲು ನೆರವಾಯಿತು.

ಈ ವಿಶ್ವಾಸವನ್ನು ಪಡೆದ ದುಂಡಪ್ಪನವರು ಶಾಲೆಗೆ ಹೊಸ ಅಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯನ್ನು ಆಯ್ಕೆಮಾಡಲು ಪೋಷಕರ ಸಭೆಯನ್ನು ಕರೆದರು. ಹೊಸ ಸಮಿತಿಯಲ್ಲಿ ಕ್ಷೇತ್ರದ ಜನಪ್ರತಿನಿಧಿಗಳು, ಮುಖಂಡರು ತಮ್ಮ ಆಪ್ತರನ್ನು ಸೇರಿಸಿ ಅವರ ಪ್ರಭಾವವನ್ನು ಹೆಚ್ಚಿಸಿಕೊಳ್ಳಲು ಮಾಡಿದ ಪ್ರಯತ್ನಗಳನ್ನು ದುಂಡಪ್ಪನವರು ಚಾಕಚಕ್ಯತೆಯಿಂದ ವಿಫಲಗೊಳಿಸಿದರು. ಶಾಲೆಯೊಳಕ್ಕೆ ಎಂದೂ ಪಕ್ಷ ರಾಜಕೀಯವನ್ನು ತರಬೇಡಿ ಎಂದು ಹೊಸ ಸಮಿತಿಯವರಲ್ಲಿ ಮನವಿ ಮಾಡಿಕೊಂಡರು. ಶಾಲೆಯ ಅಭಿವೃದ್ಧಿಗೆ ಮೂರು ವರ್ಷಗಳ ಯೋಜನೆಯೊಂದನ್ನು ರೂಪಿಸಿ ಜನರ ಮುಂದೆ ಇರಿಸಿದರು. ಶೌಚಾಲಯಗಳ ನಿರ್ಮಾಣ, ಕಾಂಪೌಂಡ್ ಗೋಡೆಯ ದುರಸ್ತಿ ಹಾಗೂ ಶಾಲೆಗೆ ಒಂದು ನಾಮಫಲಕ – ಇಷ್ಟು ಕೆಲಸಗಳಿಗೆ ನಿಧಿ ಕೂಡಿಸುವಂತೆ ಕೇಳಿದರು. ಈ ಶಾಲೆಯ 370 ಮಕ್ಕಳಲ್ಲಿ ಯಾವ ಜಾತಿಯವರು ಎಷ್ಟು ಎಂಬುದು ಕುತೂಹಲದ ವಿಚಾರವೇ ಸರಿ. ಇವರಲ್ಲಿ ನೂರ ನಲವತ್ತು ಮಂದಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳ ಮಕ್ಕಳಾಗಿದ್ದು ನಲವತ್ತೆಂಟು ಮುಸ್ಲಿಂ ಮಕ್ಕಳಿದ್ದರು. ಇನ್ನುಳಿದ ಐವತ್ತು ಮಕ್ಕಳು ಇತರ ಹಿಂದುಳಿದ ಜಾತಿಗಳಿಗೆ ಸೇರಿದವರಾಗಿದ್ದರು. ಆದರೆ ಆ ಊರಿನಲ್ಲಿ ಬಹುಸಂಖ್ಯೆಯಲ್ಲಿರುವ ಲಿಂಗಾಯತ ಸಮುದಾಯದ ಮಕ್ಕಳು ಇಲ್ಲಿಗೆ ಬಾರದೆ ಪಟ್ಟಣದಲ್ಲಿರುವ ಹತ್ತು ಹನ್ನೆರಡು ಖಾಸಗಿ ಶಾಲೆಗಳಲ್ಲಿ ವ್ಯಾಸಂಗವನ್ನು ಮಾಡುತ್ತಿದ್ದರು.

ಮೂಲಸೌಲಭ್ಯಗಳ ಸಮಸ್ಯೆ ಪರಿಹಾರವಾದ ನಂತರ ದುಂಡಪ್ಪ ಇನ್ನಷ್ಟು ಶಿಕ್ಷಕರನ್ನು ಪಡೆದುಕೊಳ್ಳುವ ಕೆಲಸಕ್ಕೆ ಗಮನ ಹರಿಸಿದರು. ಅದರಲ್ಲಿ ಬೇಗನೆ ಯಶಸ್ಸು ಗಳಿಸಿದರು ಕೂಡಾ. ನಾಲ್ವರು ಶಿಕ್ಷಕರ ನೇಮಕ ಆಯಿತು. ಜೊತೆಗೆ ಮೂವರು ಅತಿಥಿ ಶಿಕ್ಷಕರು ನಿಯೋಜನೆಯ ಮೂಲಕ ಬಂದರು. ತಮ್ಮ ತಂಡದಲ್ಲಿ ಅವರೀಗ ಹತ್ತು ಶಿಕ್ಷಕರನ್ನು ಹೊಂದಿದ್ದು ವಿದ್ಯಾರ್ಥಿ–ಶಿಕ್ಷಕ ಅನುಪಾತ 35:1 ಆಗಿದೆ. ಈಗ ಅವರು ಶಿಕ್ಷಣದ

ಗುಣಮಟ್ಟವನ್ನು ಸುಧಾರಿಸುವುದರ ಮೇಲೆ ಗಮನವನ್ನು ಕೇಂದ್ರೀಕರಿಸಿದರು. ಪ್ರಾರಂಭದ ವರ್ಷಗಳಲ್ಲಿನ ಮೂಲಭೂತ ಅಂಶಗಳ ಕಲಿಕೆ, ಅನಂತರದ ವರ್ಷಗಳಲ್ಲಿ ಮಕ್ಕಳು ಎಷ್ಟು ಚೆನ್ನಾಗಿ ಕಲಿಯುತ್ತಾರೆಂಬುದನ್ನು ನಿರ್ಧರಿಸುತ್ತದೆ ಎಂಬುದು ದುಂಡಪ್ಪನವರ ನಂಬಿಕೆಯಾಗಿತ್ತು. ಆದ್ದರಿಂದ ಅವರು 1–3ನೇ ತರಗತಿಗಳ ಕಲಾಪಗಳನ್ನು ಅತಿ ನಿಕಟವಾಗಿ ಗಮನಿಸುತ್ತಾರೆ. ನಾಲ್ಕನೆಯ ಒಂದು ವಿಭಾಗವನ್ನು ಪ್ರಾರಂಭಿಸಿ ಅಲ್ಲಿ ಮೂರು ತರಗತಿಗಳ ಮಕ್ಕಳನ್ನು ವಿತರಿಸಬೇಕೆಂದು ಯೋಚಿಸುತ್ತಿದ್ದಾರೆ.

ಶಿಕ್ಷಕರು ಅನುಭವ ಹಂಚಿಕೊಳ್ಳಲು ಪ್ರತಿ ತಿಂಗಳೂ ಸಭೆ ನಡೆಸುವ ಔಪಚಾರಿಕ ವ್ಯವಸ್ಥೆಯನ್ನು ದುಂಡಪ್ಪ ರೂಪಿಸಿದ್ದರು. ಅವರು ಎದುರಿಸಿದ ಪ್ರಮುಖ ಸಮಸ್ಯೆಗಳು ಹಾಗೂ ಅದರ ಸಂಭಾವ್ಯ ಪರಿಹಾರಗಳನ್ನು ಸಭೆಯಲ್ಲಿ ಚರ್ಚಿಸುತ್ತಿದ್ದರು. ದುಂಡಪ್ಪ ಸಹೋದ್ಯೋಗಿಗಳ ಜೊತೆ ಕುಳಿತು ಪಠ್ಯದ ಬೋಧನೆ ಬಗ್ಗೆ ಯೋಜನೆ ರೂಪಿಸುತ್ತಿದ್ದರು. ಯಾವುದಕ್ಕೆ ಎಷ್ಟು ಸಮಯ ಬೇಕು, ಯಾವ ಭಾಗ ಮಕ್ಕಳಿಗೆ ಕಷ್ಟಕರ – ಇವೆಲ್ಲ ಚರ್ಚೆಗೆ ಬಂದು ರೂಪು–ರೇಷೆ ತೀರ್ಮಾನವಾಗುತ್ತಿತ್ತು. ಇಂತಹ ವಿಷಯಗಳಿಗಾಗಿಯೇ ಅವರು ಸಹಶಿಕ್ಷಕರ ನೆರವಿನಿಂದ ತಖ್ತೆಯೊಂದನ್ನು ತಯಾರಿಸಿದ್ದು ಶಿಕ್ಷಕರು ಅದರಲ್ಲಿ ವಿವರ ನಮೂದಿಸಿ ಚರ್ಚೆಗೆ ಒಳಪಡಿಸಬಹುದಿತ್ತು. ಬೋಧನೆಯ ಗುಣಮಟ್ಟ ಹೆಚ್ಚಳಕ್ಕೆ ಇದು ಸಹಕಾರಿಯಾಯಿತು. ಶಿಕ್ಷಕರಿಗೆ ಪ್ರತಿ ತಿಂಗಳು ಒಂದು ‘ಮಾದರಿ’ ತರಗತಿಯನ್ನು ಕೊಡುವಂತೆ ಕೇಳಿ ಒಪ್ಪಿಸಿದ್ದರು. ಒಬ್ಬ ಶಿಕ್ಷಕ ಬೋಧಿಸುತ್ತಿದ್ದರೆ ಇತರರು ವೀಕ್ಷಿಸಿ ಅದನ್ನು ಹೇಗೆ ಉತ್ತಮಪಡಿಸಬಹುದು ಎಂಬುದಕ್ಕೆ ಸಲಹೆ–ಸೂಚನೆ ಒದಗಿಸುತ್ತಿದ್ದರು.

ಈಶಾನ್ಯ ಕರ್ನಾಟಕದಲ್ಲಿ ಕಲಿಕಾ ಖಾತ್ರಿ (ಎಲ್‌ಜಿಪಿ) ಕಾರ್ಯಕ್ರಮವನ್ನು ಆರಂಭಿಸಿದಾಗ ದುಂಡಪ್ಪನವರು ಫೌಂಡೇಷನ್‌ನೊಂದಿಗೆ ಅಷ್ಟೇನೂ ನಿಕಟವಾದ ಸಂಬಂಧವನ್ನು ಹೊಂದಿರಲಿಲ್ಲವೆಂಬುದನ್ನು ಸ್ಮರಿಸುತ್ತಾರೆ. 2004ರಲ್ಲಿ CFSI ಕಾರ್ಯಕ್ರಮವನ್ನು ಆರಂಭಿಸಿದ ಬಳಿಕ ಈ ಸಂಬಂಧ ಬಲವಾಯಿತು. ಅವರು ಎಲ್ಲ ಪ್ರಮುಖ ಶಾಲಾ ನಾಯಕತ್ವ ಅಭಿವೃದ್ಧಿ (SLDP) ಕಾರ್ಯಕ್ರಮಗಳಲ್ಲಿ ಹಾಜರಿರುತ್ತಿದ್ದರು. ಅಧ್ಯಾಪನದಲ್ಲಿ ತುಂಬ ಪ್ರೀತಿಯಿರುವ ಹಾಗೂ ಕೆಳಗಿನ ತರಗತಿಗಳಲ್ಲಿ ಬುನಾದಿ ಕಲಿಕೆಗೆ ಮಹತ್ವ ನೀಡುತ್ತಿದ್ದುದರಿಂದ ಅವರು ನಲಿ–ಕಲಿ ತರಬೇತಿ ಕಾರ್ಯಕ್ರಮದಲ್ಲಿ ಸಹ ಭಾಗವಹಿಸಿದ್ದರು. ಮಕ್ಕಳು ಓದುವುದು, ಬರೆಯುವುದು, ವಿಷಯಗ್ರಹಣ ಮತ್ತು ಅಂಕಗಣಿತ ಸಾಮರ್ಥ್ಯವನ್ನು ಗಳಿಸುವ ಬಗ್ಗೆ ಮಾತ್ರ ತಾನು ಗಮನ ಹರಿಸಬಲ್ಲೆ ಎಂದು ಅವರು ಬಿಚ್ಚು ಮನಸ್ಸಿನಿಂದ ಹೇಳಿದರು. ಕೆಲವು ಮಕ್ಕಳು 6–8ನೇ ತರಗತಿಗಳಲ್ಲಿ ಸಹ ಓದುವುದಕ್ಕೆ, ಬರೆಯುವುದಕ್ಕೆ ಮತ್ತು ಮೂಲ ಗಣಿತವನ್ನು ಮಾಡುವುದಕ್ಕೆ ಸಮರ್ಥರಿರುವುದಿಲ್ಲ. ದುಂಡಪ್ಪನವರು ಅಂತಹ ಮಕ್ಕಳನ್ನು ಗುರುತಿಸಿ ಬೇಸಿಗೆ ರಜೆಯಲ್ಲಿ ವಿಶೇಷ ಪರಿಹಾರಾತ್ಮಕ ತರಗತಿಗಳನ್ನು ನಡೆಸುತ್ತಿದ್ದರು. ಅದನ್ನು ಅವರು “ಪರಿಹಾರ ಬೋಧನಾ ಬೇಸಿಗೆ ಶಿಬಿರ”ವೆಂದು ಕರೆಯುತ್ತಿದ್ದರು. ಶಾಲಾ ಅವಧಿಯಲ್ಲೂ ಸಹ ಅವರು ವಿಶೇಷ ತರಗತಿಗಳನ್ನು ಆರಂಭಿಸಲು ಉದ್ದೇಶಿಸಿದ್ದಾರೆ. ಇಂತಹ ಪ್ರಯತ್ನ ಅವರಿಗೆ ಮಹತ್ವದ್ದೆಂದು ಅನಿಸಿದೆ.

"ನಮ್ಮ ಶಾಲೆಗೆ ಬರುವ ಮಕ್ಕಳು ನಿಜಕ್ಕೂ ದುರ್ಬಲರು. ಅವರ ಮೇಲೆ ಗಮನವನ್ನು ಕೇಂದ್ರೀಕರಿಸುವುದು ನಮ್ಮ ಕರ್ತವ್ಯ. ನಾವು ಮಾತ್ರ ಅವರಿಗೆ ಸಹಾಯ ಮಾಡಲು ಸಾಧ್ಯ."

ಬಹಳಷ್ಟು ಮುಖ್ಯ ಶಿಕ್ಷಕರಂತೆ ದುಂಡಪ್ಪನವರು ಸಹ ತಮ್ಮ ಶಾಲೆಯು ಕರ್ನಾಟಕ ರಾಜ್ಯ ಗುಣಮಟ್ಟ ಮೌಲ್ಯಮಾಪನ ಹಾಗೂ ಮಾನ್ಯತಾ ಮಂಡಳಿಯ (KSQAAC) ಮೌಲ್ಯಮಾಪನದಲ್ಲಿ ಹೆಚ್ಚಿನ ಮಟ್ಟವನ್ನು ಸಾಧಿಸಬೇಕೆಂದು ಬಯಸುವವರೆ, ಆದರೆ "ಸ್ವಂತ ಮೌಲ್ಯಮಾಪನ ಅದಕ್ಕಿಂತ ಮಹತ್ವದ್ದು. ಹೊರಗಿನವರು ಬಂದು ಮಾಡುವ ಒಂದು ದಿನದ ಮೌಲ್ಯಮಾಪನದಲ್ಲಿ ಜಾಸ್ತಿ ಅಂಕ ಪಡೆದು ಹೆಮ್ಮೆಪಡುವುದಕ್ಕಿಂತ ನಮ್ಮ ಕಾರ್ಯವಿಧಾನ ಪರಿಣಾಮಕಾರಿಯೂ ಅರ್ಥಪೂರ್ಣವೂ ಆಗಿ ಇಡೀ ವರ್ಷ ಅದೇ ಗುಣಮಟ್ಟ ಚಾಲ್ತಿಯಲ್ಲಿರುತ್ತದೆ ಎಂದು ನಮಗೇ ಮನವರಿಕೆಯಾಗುವುದು ಅದಕ್ಕಿಂತ ಮಹತ್ವದ್ದು" ಎಂದು ಅವರು ಹೇಳುತ್ತಾರೆ.

ಅವರು ಸಾಯಂಕಾಲ 7–30ಕ್ಕೆ ಮೊದಲು ಶಾಲೆಯನ್ನು ಬಿಡುವುದಿಲ್ಲ. ಸಾಯಂಕಾಲ 4–30ಕ್ಕೆ ಶಾಲೆ ಮುಗಿದ ಬಳಿಕ ಆಡಳಿತಾತ್ಮಕ ಮಾಹಿತಿಗಳನ್ನು ಕಲೆಹಾಕಿ ದಾಖಲಿಸುತ್ತಾರೆ. ದುಂಡಪ್ಪನವರನ್ನು ಬೆಳಗಿನಿಂದ ಸಂಜೆ ತನಕ ನೋಡಿದವರು ಬಿಳಿ ಧೋತಿ, ಗಾಂಧಿ ಟೋಪಿಯ ಈ ವ್ಯಕ್ತಿ ಎಂದೂ ಎಲ್ಲೂ ಕೂರುವುದೇ ಇಲ್ಲವೇನೋ ಎಂದು ಅನಿಸುವಷ್ಟು ಚಟುವಟಿಕೆಯಿಂದ ಓಡಾಡುವುದನ್ನು ಕಾಣಬಹುದು. ಮಕ್ಕಳು ಎದುರಿಗೆ ಸಿಕ್ಕಿದಾಗ ಬೆನ್ನುತಟ್ಟಿ ಪ್ರೋತ್ಸಾಹದ ಮಾತನ್ನಾಡಿ ಹುರಿದುಂಬಿಸುವ ದುಂಡಪ್ಪ ಸದಾ ಚೈತನ್ಯದ ಚಿಲುಮೆಯೇ ಆಗಿ ಸಹೋದ್ಯೋಗಿಗಳ ಮೇಲೆ, ಕೆಲಸದ ವಿಷಯದಲ್ಲಿ ಒತ್ತಡವನ್ನೂ ಹೇರುತ್ತಿರುತ್ತಾರೆ – ಆದರೆ ಅವರು ನಿಷ್ಕರುಣಿಯಲ್ಲ. "ನಮ್ಮ ಹತ್ತು ಶಿಕ್ಷಕರಲ್ಲಿ ಇಬ್ಬರಿಗೋ ಮೂವರಿಗೋ ಹೆಚ್ಚಿನ ಬೆಂಬಲದ ಅಗತ್ಯವಿದೆ. ಅವರನ್ನೂ ಜೊತೆಗೆ ಕರೆದೊಯ್ಯಬೇಕಲ್ಲ; ಅದಕ್ಕೆ ಅವರನ್ನು ಪ್ರೋತ್ಸಾಹಿಸುತ್ತೇನೆ, ಅವರಲ್ಲಿ ನೈತಿಕ ಸ್ಥೈರ್ಯ ತುಂಬುತ್ತೇನೆ" ಅನ್ನುತ್ತಾರೆ ದುಂಡಪ್ಪ.

---

## "ಶಾಲೆಗೆ ಶುದ್ಧ ಕುಡಿಯುವ ನೀರಿನ ಘಟಕ ಸಿಗದಿದ್ದರೆ, ನಾನು ಶಾಲೆಯನ್ನೇ ಬಿಡುವೆ"

### ಬಸವಗೌಡ

ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆ, ಹುಣಸಗಿ ಕ್ಯಾಂಪ್
ಸುರಪುರ ಬ್ಲಾಕ್, ಯಾದಗಿರಿ ಜಿಲ್ಲೆ, ಕರ್ನಾಟಕ ರಾಜ್ಯ

---

ಇದು ಒಬ್ಬ ನೀತಿವಂತನಾದ, ದೃಢ ಸಂಕಲ್ಪವುಳ್ಳ ಧೀರನ ಕಥೆ. ನಲವತ್ತೇಳರ ವಯಸ್ಸಿನ ಬಸವಗೌಡ ಚೌಧರಿ 1997ರಲ್ಲಿ ಆಗಿನ ಕಲ್ಬುರ್ಗಿ ಜಿಲ್ಲೆಯ ಶಹಾಪುರ ಬ್ಲಾಕಿನ ಹಳೇಪೇಠದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕರಾಗಿ ಸೇರಿದರು. ಪ್ರಾರಂಭದ ಅನೇಕ ವರ್ಷಗಳು ಬಸವಗೌಡರಿಗೆ ಅಪ್ರತಿಮವಾದ ಕಲಿಕೆಯ ಕಾಲವೆಂದೇ ಹೇಳಬೇಕು. ಅವರು ಅದೇ ಶಾಲೆಯಲ್ಲಿ 2002ರಲ್ಲಿ ಪ್ರಭಾರ

ಮುಖ್ಯೋಪಾಧ್ಯಾಯರಾದರು. ಹಳೇಪೇಠದಲ್ಲಿ ಹೆಚ್ಚಿನವರು ಬಡವರೇ, ಅಲ್ಲಿ ಮುಸ್ಲಿಮರ ಸಂಖ್ಯೆಯೇ ಜಾಸ್ತಿ. ಸಮುದಾಯದೊಂದಿಗೆ ಸೇರಿ ಕೆಲಸ ಮಾಡುವ ಹಾಗೂ ಮಕ್ಕಳು ಏನು ಮತ್ತು ಹೇಗೆ ಕಲಿಯುತ್ತಿದ್ದಾರೆಂದು ಅವರಿಗೆ ತಿಳಿಸಬೇಕಾದ ಅಗತ್ಯವನ್ನು ಗೌಡರು ಅಲ್ಲಿಯೇ ತಿಳಿದುಕೊಂಡರು.

ಹಳೇಪೇಠದಲ್ಲಿ ಹನ್ನೆರಡು ವರ್ಷಗಳನ್ನು ಕಳೆದ ಬಸವಗೌಡರು 2009ರಲ್ಲಿ ಹುಣಸಗಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗೆ ಬಂದರು. ಅಲ್ಲಿಗೆ ಬಂದೊಡನೆಯೇ ಬಸವಗೌಡರು ಅತ್ಯಂತ ತುರ್ತಿನ ಸವಾಲುಗಳನ್ನು ಸಾಲು ಸಾಲಾಗಿ ಎದುರಿಸಬೇಕಾಯಿತು. ಅಲ್ಲಿನ ಒಟ್ಟು ಏಳು ತರಗತಿಗಳಲ್ಲಿ ನಾನೂರು ವಿದ್ಯಾರ್ಥಿಗಳು ಮತ್ತು ಎಂಟು ಶಿಕ್ಷಕರಿದ್ದರು. ನಾಲ್ಕು ಹುದ್ದೆಗಳು ಖಾಲಿ ಇದ್ದವು. ಆ ಶಾಲೆಯಲ್ಲಿ ಆಡಳಿತಾತ್ಮಕ ಹಾಗೂ ಶೈಕ್ಷಣಿಕ ಪರಿಸರ ಶಾಲೆಯ ಅಭಿವೃದ್ಧಿಗೆ ಸೂಕ್ತವಾಗಿರಲಿಲ್ಲ. ಪರಿಸರ ಗೌಡರಿಗೆ ಪ್ರತಿಕೂಲವಾಗಿತ್ತು. ಇದನ್ನು ಬಸವಗೌಡ ಥಟ್ಟನೆ ಗುರುತಿಸಿದರು.

ಸವಾಲು ಅಗಾಧವಾಗಿದ್ದರೂ ಬಸವಗೌಡರು ಅದನ್ನು ನೇರವಾಗಿ ಎದುರಿಸಲು ತೀರ್ಮಾನಿಸಿದರು. ಶಾಲೆಗೆ ಸಮೀಪ ಇರುವಂತೆ ಮನೆಯನ್ನು ಬದಲಾಯಿಸುವುದು ಅವರ ಕಾರ್ಯತಂತ್ರದ ಮೊದಲ ಹೆಜ್ಜೆಯಾಗಿತ್ತು. ಇದರಿಂದಾಗಿ ಅವರು ಪ್ರತಿದಿನ ಬೆಳಿಗ್ಗೆ ಎಂಟು ಘಂಟೆಗೆ ಶಾಲೆಗೆ ಬರುವುದು ಸಾಧ್ಯವಾಯಿತು. ಗೈರುಹಾಜರಿ, ಅಶಿಸ್ತು, ಪ್ರಾರ್ಥನಾ ಸಭೆಗಳ ಅವ್ಯವಸ್ಥೆ, ಶಾಲೆಯ ನಿರ್ವಹಣೆಯಲ್ಲಿ ಸಿಬ್ಬಂದಿಯ ಸಂಪೂರ್ಣ ನಿರಾಸಕ್ತಿ ಮುಂತಾದ ಸಮಸ್ಯೆಗಳನ್ನು ಎದುರಿಸಲು ಸಾಧ್ಯವಾಯಿತು. ಪ್ರತಿಯೊಬ್ಬ ಶಿಕ್ಷಕರು ಬೆಳಗಿನ ಸಭೆಯಲ್ಲಿ ಹಾಜರಿರಲೇಬೇಕು ಎಂದು ಅವರು ಕಟ್ಟುಪಾಡು ಮಾಡಿದರು. ಶಾಲೆಯ ಹಾಗೂ ಮಧ್ಯಾಹ್ನದ ಬಿಸಿಯೂಟದ ಹಣವನ್ನು ಬಸವಗೌಡರು ತಿಂದುಹಾಕಿದ್ದಾರೆಂದು ಪೊಲೀಸ್ ಠಾಣೆಯಲ್ಲಿ ಯಾರೋ ದೂರು ಕೊಟ್ಟಿದ್ದರು. ಪೊಲೀಸರು ಶಾಲೆಗೆ ಬಂದು ತನ್ನನ್ನು ವಿಚಾರಿಸುವ ಅವಮಾನವನ್ನೂ ಬಸವಗೌಡರು ಎದುರಿಸಬೇಕಾಯಿತು. ಅವರು ಪೊಲೀಸರೊಡನೆ, "ನೀವು ನನ್ನ ಮನೆಗೆ ಹೋಗಿ, ನನ್ನ ಅನುಪಸ್ಥಿತಿಯಲ್ಲಿ ಅಲ್ಲಿ ಹುಡುಕಿರಿ, ಏನಾದರೂ ದೊರೆತರೆ ನನ್ನ ಮೇಲೆ ಕೇಸು ಹಾಕಿರಿ" ಎಂದರು. ಪೊಲೀಸರ ವಿಚಾರಣೆಯಲ್ಲಿ ಬಸವಗೌಡರು ನಿರಪರಾಧಿಗಳೆಂದು ಸಾಬೀತಾಯಿತು. ಇದನ್ನು ಅವರಿಗೆ ಆಗದ ಯಾರೋ ಮಾಡಿರುವುದು ತಿಳಿಯಿತು. ಗೌಡರು ಇದನ್ನು ಅಲ್ಲಿಗೇ ಬಿಡಲಿಲ್ಲ. ತಮ್ಮ ಮೇಲೆ ದೂರು ಕೊಟ್ಟವರನ್ನು ವಿಚಾರಣೆಗೆ ಒಳಪಡಿಸುವಂತೆ ಪೊಲೀಸರನ್ನು ಒತ್ತಾಯಿಸಿದರು. ಇಲಾಖೆಯಿಂದ ತನಿಖೆ ಮಾಡಿಸುವಂತೆ ಡಿಡಿಪಿಐ ಅವರನ್ನೂ ಕೇಳಿಕೊಂಡರು. ಬಸವಗೌಡರ ಆಗಮನದಿಂದ ಅಸಮಾಧಾನಗೊಂಡ ಕೆಲವರು ಈ ಸುಳ್ಳು ದೂರನ್ನು ಕೊಟ್ಟರೆಂದು 2009ರ ನವೆಂಬರ್‌ನಲ್ಲಿ ಸಾಬೀತಾಯಿತು. ಅವರೆಲ್ಲರನ್ನೂ ವರ್ಗಾವಣೆ ಮಾಡಲಾಯಿತು. ಅವರ ಸ್ಥಾನಗಳಿಗೆ ಬೇರೆ ಶಿಕ್ಷಕರು ಬಂದರು.

ಅಷ್ಟೊತ್ತಿಗೆ ಈ ವಿವಾದದ ವಾಸ್ತವವನ್ನು ಸಮುದಾಯವು ಅರ್ಥಮಾಡಿಕೊಂಡು, ಮುಖ್ಯ ಶಿಕ್ಷಕರಿಗೆ ಸ್ಪಂದಿಸಲು ಪ್ರಾರಂಭಿಸಿತು. ಬಸವಗೌಡ ಅವರ ಪ್ರತಿಯೊಂದು ಕೆಲಸವೂ ಶಾಲೆಯಲ್ಲಿ ಉತ್ತಮ ಶಿಕ್ಷಣವನ್ನು ನೀಡುವ ಸಲುವಾಗಿ ಮಾಡಿದ್ದು

ಎಂಬುದು ಸಮುದಾಯದವರಿಗೆ ಮನವರಿಕೆಯಾಯಿತು. ಅವರೊಬ್ಬ ನಿಸ್ಪೃಹ, ಧೈರ್ಯಶಾಲಿ ಆಗಿದ್ದು ಶಾಲೆಯನ್ನು ಅಭಿವೃದ್ಧಿಪಡಿಸುವುದು ಮಾತ್ರ ಅವರ ಉದ್ದೇಶವಾಗಿದ್ದುದರಿಂದ ಜನ ಅವರನ್ನು ಬೆಂಬಲಿಸಿದರು. ಸಮುದಾಯದ ಬೆಂಬಲವನ್ನು ಪಡೆದ ಬಸವಗೌಡರು ಶಾಲಾ ಸುಧಾರಣೆಯ ತಮ್ಮ ಯೋಜನೆಯ ಮುಂದಿನ ಹಂತಕ್ಕೆ ಅಡಿಯಿಟ್ಟರು. ಪಂಚಾಯಿತಿಯಿಂದ ಶಾಲೆಗೆ 2000 ಲೀಟರ್ ಕುಡಿಯುವ ನೀರಿನ ಟ್ಯಾಂಕ್ ಮಂಜೂರು ಮಾಡಿಸಿದರು. ಹಳೆಯ ನಿರುಪಯುಕ್ತ ಪೀಠೋಪಕರಣಗಳು ತುಂಬಿದ್ದ ಕೋಣೆಗಳನ್ನು ಶುಚಿಗೊಳಿಸಿ ಅದನ್ನು ತರಗತಿ ಕೋಣೆಗಳಾಗಿ ಪರಿವರ್ತಿಸಿದರು. ಲಭ್ಯವಿರುವ ಹಣಕಾಸಿನಿಂದ ಹೆಚ್ಚಿನ ತರಗತಿ ಕೋಣೆಗಳನ್ನು ಸಿದ್ಧಪಡಿಸಿದರು. ಇದರ ಪರಿಣಾಮವಾಗಿ ಒಂದು ಕೊಠಡಿ ಮಧ್ಯಾಹ್ನದ ಊಟಕ್ಕೆ ದೊರೆಯಿತು. ಸುಸಜ್ಜಿತ ಶೌಚಾಲಯಗಳನ್ನು ಸಹ ಕಟ್ಟಿಸಿದರು.

ಮೂಲ ಸೌಲಭ್ಯಗಳನ್ನು ಸುಧಾರಿಸಿ ಸಮುದಾಯದ ವಿಶ್ವಾಸಕ್ಕೆ ಚ್ಯುತಿ ಉಂಟುಮಾಡುವುದಿಲ್ಲ ಎಂಬುದನ್ನು ಸಾಬೀತು ಮಾಡಿದ ಮೇಲೆ ಬಸವಗೌಡರು ಶಾಲೆಯನ್ನು ರಾಜಕೀಯ ಮೇಲಾಟದಿಂದ ದೂರ ಇಡುವ ಕಾರ್ಯಕ್ಕೆ ಕೈಯಿಕ್ಕಿದರು. ಅಲ್ಲಿ ತನಕವೂ ಸ್ಥಳೀಯ ರಾಜಕಾರಣಿಗಳು ಶಾಲಾ ಉಸ್ತುವಾರಿ ಸಮಿತಿಯ (SDMC) ಅಧ್ಯಕ್ಷರನ್ನು ನೇಮಿಸುತ್ತಿದ್ದರು. ಈ ಸ್ಥಾನಕ್ಕೆ ಬೇಕಾದ ವ್ಯಕ್ತಿಯನ್ನು ಪೋಷಕರು ಮಾತ್ರ ಚುನಾಯಿಸಬೇಕೆಂದು ಬಸವಗೌಡರು ಪಟ್ಟು ಹಿಡಿದರು. ಇದೊಂದು ನಿರ್ಣಾಯಕವಾದ ಸವಾಲಾಗಿತ್ತು, ಸಮುದಾಯವು ಅವರಲ್ಲಿಟ್ಟಿದ್ದ ವಿಶ್ವಾಸ ಹಾಗೂ ಸದ್ಭಾವನೆಗಳಿಂದಾಗಿ ಇದರಲ್ಲಿಯೂ ಅವರು ಜಯಶಾಲಿಯಾದರು.

ಬಸವಗೌಡರು ಇದೀಗ ಮಕ್ಕಳ ಕಲಿಕೆಯ ಗುಣಮಟ್ಟದತ್ತ ಗಮನ ಹರಿಸಿದರು. ಹೆಚ್ಚು ಉತ್ತಮ ಬೋಧನೆ ಸಾಧ್ಯವಾಗುವಂತೆ ಅವರು ಶಿಕ್ಷಕರನ್ನು ಸಂಘಟಿಸಿದರು. ತಮ್ಮ ನಿರೀಕ್ಷೆಯ ಮಟ್ಟಕ್ಕೆ ಬರುವಂತಾಗಲು ಸಲಹೆ-ಸೂಚನೆಗಳನ್ನು ನೀಡಿದರು. ಶಿಕ್ಷಕರು ತರಗತಿಯಲ್ಲಿ ಮಕ್ಕಳ ಕಲಿಕೆಯತ್ತ ಗರಿಷ್ಠ ಗಮನ ನೀಡುವಂತೆ ಸೂಚಿಸಿದರು. ಕಲಿಕೆಯ ಮಟ್ಟ ಸುಧಾರಿಸಿತು. ಮಕ್ಕಳು ನಮ್ಮೊಡನೆ ಸ್ಪಂದಿಸಿದ ರೀತಿಯಿಂದಲೇ ಅದು ನಮ್ಮ ಅನುಭವಕ್ಕೆ ಬಂತು. ಅವರು ನಮ್ಮೊಡನೆ ಪ್ರಶ್ನೆಗಳನ್ನು ಕೇಳಿದ ರೀತಿಯಿಂದ ಹಾಗೂ ವ್ಯಕ್ತಪಡಿಸಿದ ಅಭಿಪ್ರಾಯಗಳಿಂದ ಇದು ನಿಚ್ಚಳವಾಗುತ್ತಿತ್ತು. ಮಕ್ಕಳಿಗೆ ಪರೀಕ್ಷೆಯ ಭಯ ಇರಲಿಲ್ಲ. ಏನೂ ತಿಳಿಯದ ಮಕ್ಕಳು ಹೇಗೆ ಕಲಿಕೆಯಲ್ಲಿ ಮುಂಚೂಣಿಗೆ ಬಂದರು ಎಂಬುದನ್ನು ತೋರಿಸುವ ವೀಡಿಯೋಗಳನ್ನು ಬಸವಗೌಡರು ಮಕ್ಕಳಿಗೆ ತೋರಿಸಿದ್ದರು. ಅವರು ಪುಸ್ತಕ ಭಂಡಾರವೊಂದನ್ನು ತೆರೆದು ಮಕ್ಕಳು ಓದುವಂತೆಯೂ ಓದಿದ ಆಸಕ್ತಿಯ ವಿಷಯಗಳನ್ನು ಶಾಲಾಸಭೆಯಲ್ಲಿ ವಿವರಿಸುವಂತೆಯೂ ಪ್ರೋತ್ಸಾಹಿಸಿದರು. ಜನಪ್ರಿಯ ರೇಡಿಯೋ ಕಾರ್ಯಕ್ರಮವಾದ 'ಕೇಳಿ-ಕಲಿ'ಯ ಮಾದರಿಯಲ್ಲಿ ತರಗತಿಗಳನ್ನು ಸಂಘಟಿಸಿದ್ದರು. ಶಿಕ್ಷಕರು ಪ್ರತಿ ಮಗುವಿನ ಕಲಿಕೆಯ ಪ್ರಗತಿಯ ದಾಖಲೆಯನ್ನು ತಯಾರು ಮಾಡಿದ್ದು ಸ್ಥಳೀಯ ಪರಿಸರದಿಂದಲೇ ಜ್ಞಾನವೃದ್ಧಿ ಮಾಡಿಕೊಳ್ಳುವಂತಹ ಪ್ರಾಜೆಕ್ಟ್‌ಗಳನ್ನು ಕೊಡುತ್ತಿದ್ದರು. ಈ ಶಾಲೆಯಿಂದ ಪ್ರತಿವರ್ಷ ಕೊನೇಪಕ್ಷ ಹತ್ತು ಮಂದಿ ಮಕ್ಕಳು ಮೊರಾರ್ಜಿ ಶಾಲೆಗೆ

ಪ್ರವೇಶ ಪಡೆಯುತ್ತಿದ್ದಾರೆ. ತಾಲೂಕು ಹಾಗೂ ಜಿಲ್ಲಾ ಮಟ್ಟಗಳಲ್ಲಿ ಎಸ್ಸೆಸೆಲ್ಸಿಯಲ್ಲಿ ಮುಂಚೂಣಿಯಲ್ಲಿ ತೇರ್ಗಡೆಗೊಂಡವರು ಹುಣಸಗಿ ಕ್ಯಾಂಪ್ ಶಾಲೆಯಿಂದ ಹೋದವರೇ ಎಂದು ಬಸವಗೌಡ ಅವರು ಹೆಮ್ಮೆಯಿಂದ ಹೇಳುತ್ತಾರೆ. ಅವರು ತಮ್ಮ ಹಳೆ ವಿದ್ಯಾರ್ಥಿಗಳ ಪ್ರಗತಿಯ ಮೇಲೂ ಗಮನ ಇರಿಸಿದ್ದಾರೆ.

ಮಕ್ಕಳ ಸರ್ವತೋಮುಖ ಅಭಿವೃದ್ಧಿಯೇ ತನ್ನ ಗುರಿಯೆಂದೂ ಅದಕ್ಕಾಗಿ ತಾನು ಸಂಕಲ್ಪ ತೊಟ್ಟಿದ್ದೇನೆಂದೂ ಬಸವಗೌಡ ಹೇಳುತ್ತಾರೆ. 'ಮಕ್ಕಳನ್ನು ಒಂದು ದಿನ ನಿಕಟವಾಗಿ ಗಮನಿಸಿದರೆ ಪ್ರತಿಯೊಂದು ಮಗುವಿನಲ್ಲೂ ಕೆಲವೊಂದು ಕೌಶಲಗಳನ್ನು ಗುರುತಿಸಬಹುದು. ಈ ಕೌಶಲಗಳನ್ನು ಗುರುತಿಸಿ ಪೋಷಿಸುವುದು, ಪೂರ್ತಿಯಾಗಿ ಬೆಳೆಯಲು ಅನುವು ಮಾಡಿಕೊಡುವುದು ಶಾಲೆಯ ಕರ್ತವ್ಯ.' ಈ ಸ್ಫೂರ್ತಿಯಿಂದ ಹುಣಸಗಿಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಮಕ್ಕಳನ್ನು ತಯಾರು ಮಾಡುತ್ತಿದೆ. ರಾಜ್ಯ ಶಿಕ್ಷಣ ಇಲಾಖೆಯು ನಡೆಸುವ "ಪ್ರತಿಭಾ ಕಾರಂಜಿ" "ಕಲಿಕೋತ್ಸವ" ಮತ್ತು ಕ್ರೀಡೆಗಳಲ್ಲಿ ಹುಣಸಗಿ ಶಾಲೆ ಭಾಗವಹಿಸುತ್ತಿದೆ. ಈ ಎಲ್ಲ ಕಾರ್ಯಕ್ರಮಗಳಲ್ಲಿ ಶಾಲೆ ಜಿಲ್ಲಾ ಮಟ್ಟದವರೆಗೂ ಅರ್ಹತೆ ಪಡೆದಿದೆ. ಶಾಲೆಗೆ "ಪರಿಸರ ಸ್ನೇಹಿ" ಪ್ರಶಸ್ತಿ ಲಭಿಸಿದೆ. (ಪರಿಸರ ರಕ್ಷಿಸುವ ನಿಟ್ಟಿನಲ್ಲಿ ಶಾಲೆಯ ಪರಿಶ್ರಮಗಳ ಸಲುವಾಗಿ ಈ ಪ್ರಶಸ್ತಿ ಬಂದಿದೆ.)

ಈ ಎಲ್ಲ ಸಾಧನೆಗಳು ಶಿಕ್ಷಕರ ಪರಿಶ್ರಮದಿಂದ ಆಗಿವೆಯೆಂದು ಬಸವಗೌಡ ಹೇಳುತ್ತಾರೆ. "ನನ್ನ ಶಿಕ್ಷಕರ ಬಗ್ಗೆ ನನಗೆ ಸಂತೋಷವಿದೆ. ಅವರು ತುಂಬ ಪ್ರಜ್ಞಾವಂತರು. ಉದಾಹರಣೆಗೆ ಶಿಕ್ಷಕಿ ಈರಕ್ಕ ನಲಿ–ಕಲಿ ಕಾರ್ಯಕ್ರಮದ ಜವಾಬ್ದಾರಿ ಹೊತ್ತಿದ್ದು, 1ರಿಂದ 3ನೇ ತರಗತಿಯ ಮಕ್ಕಳಿಗೆ ಅತ್ಯುತ್ತಮವಾದ ಭಾಷಾಜ್ಞಾನ ಮತ್ತು ವಿಷಯ ಗ್ರಹಿಕೆಯ ಅಡಿಪಾಯವನ್ನು ಒದಗಿಸುತ್ತಾರೆ. ವಿಜ್ಞಾನದ ಶಿಕ್ಷಕಿ ಸುನೀತಾ, ಸಮಾಜ ವಿಜ್ಞಾನ ಶಿಕ್ಷಕಿ ಸುವರ್ಣ ಮತ್ತು ಭಾಷಾ ಶಿಕ್ಷಕಿ ಗೀತಾ ಎಲ್ಲರೂ ಚೆನ್ನಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ" ಎಂದು ಬಸವಗೌಡರು ಶಾಲೆಯ ಶ್ರೇಯಸ್ಸನ್ನು ಸಹೋದ್ಯೋಗಿಗಳೊಂದಿಗೆ ಹಂಚಿಕೊಂಡರು. ಅವರು ನಿಯಮಿತವಾದ ಶಿಕ್ಷಕರ ಸಭೆಗಳ ವ್ಯವಸ್ಥೆಯನ್ನು ರೂಪಿಸಿದ್ದಾರೆ. ಅದು ಪ್ರತಿ ವಾರವೂ ನಡೆಯಬೇಕೆಂದು ಅವರು ಒತ್ತಾಯಿಸುತ್ತಿದ್ದರು. ಈಗ ಅದನ್ನು ಹದಿನೈದು ದಿನಗಳಿಗೊಮ್ಮೆ ನಡೆಸಲಾಗುತ್ತಿದೆ. ಈ ಸಭೆಗಳನ್ನು ವೃತ್ತಿಪರವಾಗಿ ನಿರ್ವಹಿಸಲಾಗುತ್ತಿದ್ದು ಇವುಗಳಲ್ಲಿ ನಿರ್ದಿಷ್ಟವಾದ ಕಾರ್ಯಸೂಚಿ ಇರುತ್ತದೆ. ಹಿಂದಿನ ಸಭೆಗಳ ಪುನರವಲೋಕನ, ಕಲಾಪಗಳ ದಾಖಲಾತಿ, ಮುಂದಿನ ಕ್ರಮಗಳು – ಇವುಗಳ ಬಗ್ಗೆ ಚರ್ಚಿಸಲಾಗುತ್ತದೆ. ಶಾಲೆಯಲ್ಲಿಟ್ಟಿದ್ದ ರಿಜಿಸ್ಟರ್ ಪುಸ್ತಕವನ್ನು ನೋಡುವ ಅವಕಾಶ ನನಗೆ ಒದಗಿತು. ಅದರಲ್ಲಿ ಈ ಸಭೆಗಳ ಗಾಂಭೀರ್ಯವನ್ನೂ ಪರಿಶ್ರಮವನ್ನೂ ಕಾಪಾಡಿಕೊಂಡು ಬಂದಿರುವುದು ಗೋಚರಿಸುತ್ತಿತ್ತು. ಶಿಕ್ಷಕರು ಪಠ್ಯ ಯೋಜನೆಗಳು ಮತ್ತು ಪರೀಕ್ಷೆಗಳ ತಯಾರಿಯನ್ನು ಒಂದು ತಂಡದಂತೆ ಪುನರವಲೋಕನ ಮಾಡುತ್ತಾರೆ. ಮಕ್ಕಳ ಪ್ರಗತಿಯ ಬಗ್ಗೆ ಪೋಷಕರಿಗೆ ಅರಿವು ಮೂಡಿಸಲು ಎರಡು ತಿಂಗಳಿಗೊಮ್ಮೆ ಪೋಷಕರ ಸಭೆಗಳನ್ನು ನಡೆಸುತ್ತಾರೆ.

ಮಕ್ಕಳ ಸಾಮರ್ಥ್ಯವನ್ನು ಸಮುದಾಯಕ್ಕೆ ತೋರಿಸಲು ಕಳೆದ ಕೆಲವು ವರ್ಷಗಳಲ್ಲಿ ಶಾಲೆಯು ಮೇಳಗಳ ಸರಣಿಯನ್ನೇ ಸಂಘಟಿಸಿತ್ತು. ಪರಿಸರ ಮೇಳದ ಅನಂತರ

ವಿಜ್ಞಾನ ಮೇಳವನ್ನು ನಡೆಸಲಾಯಿತು. ಈ ಮೇಳಗಳಲ್ಲಿ ಜನರು ತುಂಬು ಹೃದಯದಿಂದ, ತಲ್ಲೀನತೆಯಿಂದ ಭಾಗವಹಿಸಿದರು. ತಮ್ಮ ಹಳ್ಳಿಯ ಮಕ್ಕಳು ಅಷ್ಟೊಂದು ಚುರುಕಾಗಿ ಪರಿಕಲ್ಪನೆಗಳನ್ನು ವಿವರಿಸುವುದನ್ನು ನೋಡಿ ಜನ ಚಕಿತರಾದರು. ಈ ಮಕ್ಕಳನ್ನು ಸಮೀಪದ ಖಾಸಗಿ ಶಾಲೆಯಿಂದ ಮೇಳಕ್ಕಾಗಿ ಕರೆತಂದಿದ್ದಾರೆಯೇ ಎಂದೂ ಕೆಲವರು ಕೇಳಿದರು! ಶಾಲೆಯ ಸಾಧನೆಗಳು ಮತ್ತು ಚಟುವಟಿಕೆಗಳನ್ನು ಇದೀಗ ಪಂಚಾಯಿತಿಯಲ್ಲಿಯೂ ಚರ್ಚಿಸಲಾಗುತ್ತಿದೆ.

ಹುಣಸಗಿ ಶಾಲೆಯ ಮಕ್ಕಳ ಸಂಖ್ಯೆ ಈಗ ನಾನೂರ ಅರುವತ್ತೆರಡು. ಅಲ್ಲಿನ ಶಿಕ್ಷಕರ ಸಂಖ್ಯೆ ಹದಿಮೂರು. ಬಹಳಷ್ಟು ದಿನಗಳು ಅಲ್ಲಿನ ಮಕ್ಕಳ ಹಾಜರಾತಿ ಶೇಕಡ 85ಕ್ಕಿಂತ ಹೆಚ್ಚೇ ಇರುತ್ತದೆ. ಈ ಶಾಲೆಯ ಸುತ್ತಮುತ್ತಲಿನ ಖಾಸಗಿ ಶಾಲೆಗಳು, ಅಲ್ಲಿಂದ ವಿದ್ಯಾರ್ಥಿಗಳನ್ನು ಪೋಷಕರು ಬಿಡಿಸುತ್ತಿರುವುದರಿಂದ ಮುಚ್ಚಿಕೊಂಡು ಹೋಗುತ್ತಿವೆ. ಇದೀಗ ಶಾಲೆಗೆ ಸೋಸಿದ ಕುಡಿಯುವ ನೀರಿನ ಘಟಕವು ಬೇಕೆಂದು ಬಸವಗೌಡರು ಒತ್ತಾಯಿಸುತ್ತಿದ್ದಾರೆ. ಪಂಚಾಯಿತಿ ಮತ್ತು ಸಮುದಾಯವು ಈ ಮನವಿಯನ್ನು ಒಪ್ಪದಿದ್ದರೆ ತಾವು ಶಾಲೆಯನ್ನೇ ಬಿಡುವುದಾಗಿ ಬೆದರಿಕೆ ಹಾಕಿದ್ದಾರೆ!

ಇದೆಲ್ಲದರ ನಡುವೆಯೂ ಬಸವಗೌಡರು ಸತತವಾಗಿ ತಮ್ಮ ಕಲಿಕೆಯನ್ನು ಮುಂದುವರಿಸಿದ್ದಾರೆ. ಅವರಿಗೆ ಕೆಲವು ವಿಷಯಗಳಿಗೆ ಸಂಬಂಧಿಸಿದಂತೆ ಕಂಪ್ಯೂಟರ್ ಬಳಕೆ ತಿಳಿದಿದೆ. ಕಂಪ್ಯೂಟರ್ ಬಳಸುವುದನ್ನು ಕಲಿಯುವಂತೆ ಅವರು ತಮ್ಮ ಮೂವರು ಶಿಕ್ಷಕರನ್ನು ಪ್ರೋತ್ಸಾಹಿಸಿದ್ದಾರೆ. ಅವರು ಫೌಂಡೇಷನ್ ನಡೆಸಿದ ಶಾಲಾ ನಾಯಕತ್ವ ಅಭಿವೃದ್ಧಿ ಕಾರ್ಯಕ್ರಮ (ಎಸ್‌ಎಲ್‌ಡಿಪಿ)ದಲ್ಲಿ ಭಾಗವಹಿಸಿದ್ದಾರೆ. ಈ ಕಾರ್ಯಕ್ರಮ ಅತ್ಯಂತ ಉಪಯುಕ್ತವೆಂದು ಹೇಳುತ್ತಾರೆ. ಅವರ ಶಿಕ್ಷಕರೂ ಅವರ ಮೇಲ್ಪಂಕ್ತಿ ಅನುಸರಿಸಿ ಫೌಂಡೇಷನ್ ನಡೆಸುತ್ತಿರುವ ಸ್ವಯಂಪ್ರೇರಿತ ಶಿಕ್ಷಕ ವೇದಿಕೆ (ವಿಟಿಎಫ್) ಹಾಗೂ ಇತರ ಎಲ್ಲ ಕಾರ್ಯಾಗಾರಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾರೆ. ಕಕ್ಕೆರದಲ್ಲಿರುವ ಶಿಕ್ಷಕರ ಕಲಿಕಾ ಕೇಂದ್ರ (ಟಿಎಲ್‌ಸಿ)ಗಳಿಗೆ ನಿಯತವಾಗಿ ಭೇಟಿ ನೀಡುತ್ತಾರೆ. ತಮ್ಮ ತರಗತಿಯ ಕಾರ್ಯಗಳಿಗೆ ಬೇಕಾದ ಸೂಕ್ತವಾದ ಸಾಮಗ್ರಿಗಳನ್ನು ರಚಿಸಲು ಸಲಹೆ–ಸೂಚನೆ ಪಡೆದುಕೊಳ್ಳುತ್ತಾರೆ. ಟಿಎಲ್‌ಸಿಯಲ್ಲಿನ ಸಂವಾದಗಳಲ್ಲಿ ಅವರ ನಿಯಮಿತವಾದ ಭಾಗವಹಿಸುವಿಕೆಯ ಪರಿಣಾಮವಾಗಿ ಅಲ್ಲಿರುವ ವಸ್ತುಗಳು, ಪುಸ್ತಕಗಳು ಮತ್ತು ಉಪಕರಣಗಳನ್ನು ಬಳಸಿಕೊಳ್ಳುವುದಕ್ಕೆ ಅವರಿಗೆ ಸಾಧ್ಯವಾಗಿದೆ. ನಲಿ–ಕಲಿ ಬೋಧನವಿಧಾನವನ್ನು 1ರಿಂದ 3ನೇ ತರಗತಿಗಳಿಗೆ ಹೇಳಿಕೊಡುವ ಶಿಕ್ಷಕಿ ಈರಕ್ಕ ಸುರಪುರದ ಅತ್ಯುತ್ತಮ ನಲಿ–ಕಲಿ ಶಿಕ್ಷಕಿ ಎಂಬ ಪ್ರಶಸ್ತಿಯನ್ನು 2011ರಲ್ಲಿ ಪಡೆದರು. ಬಸವಗೌಡರು ಚೈತನ್ಯಶೀಲ ವಿಚಾರಭರಿತ ವ್ಯಕ್ತಿ. ಆ ಊರಿನ ಮಕ್ಕಳಿಗೆ ಇಂಗ್ಲಿಷ್ ಭಾಷೆಯ ಪರಿಚಯ ಮಾಡಿಸುವ ಉದ್ದೇಶವನ್ನು ಹೊಂದಿರುವ ಅವರು ಅನಧಿಕೃತ ನೆಲೆಯಲ್ಲಿ ಎಲ್‌ಕೆಜಿ ಹಾಗೂ ಯುಕೆಜಿ ತರಗತಿಗಳನ್ನು ತೆರೆಯುವ ಉತ್ಸಾಹದಲ್ಲಿದ್ದಾರೆ. ಇದನ್ನು ಅವರು ವೈಯಕ್ತಿಕ ನೆಲೆಯಲ್ಲಿ ತನ್ನದೇ ಹಣದಿಂದ ಮಾಡಲಿದ್ದಾರೆ. ಇದರ ಹಿನ್ನೆಲೆಯ ಬಗ್ಗೆ ಕೇಳಿದಾಗ ಅವರು ಹೇಳಿದ ಮಾತು ಇದು: "ನಾನು ಕೂಡಾ ಒಂದು ಬಡ ಕುಟುಂಬದಲ್ಲಿ ಹುಟ್ಟಿದವನು. ಪ್ರೌಢಶಾಲೆವರೆಗೂ ನಾನು

ಹರಿದ ಷರಟಿಗೆ ತೇಪೆ ಹಾಕಿಕೊಂಡು ಹೋಗುತ್ತಿದ್ದೆ. ಆ ಹೀನ ಸ್ಥಿತಿಯಿಂದ ಹೊರಗೆ ಬರಲು ನನಗೆ ಶಿಕ್ಷಣ ಸಹಾಯ ಮಾಡಿತು. ಹುಣಸಗಿಯ ಮಕ್ಕಳಿಗೂ ಬಡತನದಿಂದ ಮೇಲೆದ್ದು ಬರಲು ಅವಕಾಶ ಸಿಗಬೇಕು ಎಂದೇ ಇದನ್ನು ಮಾಡುತ್ತಿದ್ದೇನೆ." ನರ್ಸರಿ ಶಾಲೆಯು ಮಗುವಿನಲ್ಲಿ ಎಳವೆಯಿಂದಲೇ ಶಾಲೆಗೆ ಹೋಗುವ ರೂಢಿಯನ್ನು ಬೆಳೆಸುತ್ತದೆ ಎಂದು ಅವರು ನಂಬಿದ್ದಾರೆ. ಮಾಸಿಕ 1,100 ರೂಪಾಯಿ ಸಂಬಳದೊಂದಿಗೆ ಜೀವನ ಪ್ರಾರಂಭಿಸಿದ ತಾನು ಈಗ 35,000 ರೂಪಾಯಿ ಸಂಪಾದಿಸುತ್ತಿದ್ದೇನೆ, ಇದು ಬೇಕಾದಷ್ಟಾಯಿತು, ಇದರಿಂದಲೇ ಸ್ವಲ್ಪ ಹಣ ಈ ನರ್ಸರಿ ಶಾಲೆಗೂ ವ್ಯಯ ಮಾಡುತ್ತೇನೆ. ಅಲ್ಲದೆ ತನಗೆ ಹತ್ತರಿಂದ ಹನ್ನೆರಡು ಎಕರೆ ಕೃಷಿ ಜಮೀನೂ ಇದೆ. ಅದರಿಂದಲೂ ಆದಾಯ ಬರುತ್ತಿದೆ; ಈ ನರ್ಸರಿಯ ಆಲೋಚನೆ ಉಂಟಾದುದಕ್ಕೆ ಅದೂ ಕಾರಣ ಎಂದು ಬಸವಗೌಡರು ಹೇಳುತ್ತಾರೆ.

ಕರ್ನಾಟಕ ರಾಜ್ಯ ಗುಣಮಟ್ಟ ಮೌಲ್ಯಮಾಪನ ಮತ್ತು ಮಾನ್ಯತಾ ಮಂಡಳಿಯ (ಕೆಎಸ್‌ಕ್ಯೂಎಎಸಿ) 2016ರ ಮೌಲ್ಯಮಾಪನದಲ್ಲಿ ಹುಣಸಗಿ ಶಾಲೆಗೆ ಬಿ+ ದೊರೆತದ್ದು ಗೌಡರ ಮನಸ್ಸನ್ನು ಕೊರೆಯುತ್ತಿದೆ. "ಹುಣಸಗಿ ಶಾಲೆಯನ್ನು ಮಾದರಿ ಶಾಲೆಯನ್ನಾಗಿ ಮಾಡುವುದೇ ನನ್ನ ಗುರಿ" ಎಂದು ಈ ಧೀರ, ಪ್ರಾಮಾಣಿಕ ಶಾಲಾ ಮುಖ್ಯೋಪಾಧ್ಯಾಯ ಹೇಳುತ್ತಾರೆ.

---

## 'ಪಠ್ಯಕ್ರಮ ಒತ್ತಟ್ಟಿಗಿರಲಿ ! ಮಕ್ಕಳಿಗೆ ನಾವು ಮೂಲಭೂತ ವಿಷಯಗಳನ್ನು ಕಲಿಸೋಣ.'

### ರಮೇಶ್ ಚಂದ್ರ ಪಾಲ್

ಸರ್ಕಾರಿ ಉತ್ಕೃಷ್ಟ ಹಿರಿಯ ಪ್ರಾಥಮಿಕ ಶಾಲೆ
ಮೀತನ್, ರೇವಧರ್ ಬ್ಲಾಕ್, ಸಿರೋಹಿ ಜಿಲ್ಲೆ, ರಾಜಸ್ಥಾನ

---

ಮೀತನ್ ಹಳ್ಳಿ ರೇವಧರ್ ಬ್ಲಾಕ್‌ನಲ್ಲಿದ್ದು ಸಿರೋಹಿ ಪಟ್ಟಣದಿಂದ ಅರವತ್ತು ಕಿ.ಮೀ. ದೂರದಲ್ಲಿದೆ. ಸಿರೋಹಿ ಅದರ ಜಿಲ್ಲಾ ಕೇಂದ್ರ. ಅದಕ್ಕೆ ಅತ್ಯಂತ ಸಮೀಪವಿರುವ ಪಟ್ಟಣವೆಂದರೆ ಸುಮಾರು ಮೂವತ್ತು ಕಿ.ಮೀ. ದೂರದಲ್ಲಿರುವ ಅಬೂ ರೋಡ್. ಈ ರಸ್ತೆಯ ಎರಡೂ ಬದಿಗಳಲ್ಲಿ ಸಿರೋಹಿ ಜಿಲ್ಲೆಯ ಬಹುತೇಕ ಕೃಷಿ ಭೂಮಿಯಿದೆ. ಮೀತನ್‌ಗೆ ಹೋಗುವ ಹಾದಿಯಲ್ಲಿ ಕಣ್ಣು ಹಾಯಿಸಿದಷ್ಟೂ ಹರಳು ಬೀಜದ ಹೊಲಗಳಿವೆ. ಹಳ್ಳಿಯ ತಿರುವು ಮುರುವು ರಸ್ತೆಯಲ್ಲಿ ಸಾಗಿದರೆ ಸರ್ಕಾರಿ ಉತ್ಕೃಷ್ಟ ಹಿರಿಯ ಪ್ರಾಥಮಿಕ ಶಾಲೆಗೆ ಬಂದು ತಲಪುತ್ತೇವೆ. ರಾಜಸ್ಥಾನದ ಉತ್ಕೃಷ್ಟ ಶಾಲೆಯು ಮಾದರಿ / ಆದರ್ಶ ವಿದ್ಯಾಲಯಕ್ಕೆ ಸಮನಾದುದು. ಶಿಕ್ಷಣ ಇಲಾಖೆಯು ಶಾಲೆಗಳ ಮೌಲ್ಯಮಾಪನವನ್ನು ಮಾಡಿ ಪ್ರತಿ ಗ್ರಾಮ ಪಂಚಾಯ್ತಿಯಲ್ಲಿ ಒಂದು ಪ್ರಾಥಮಿಕ ಶಾಲೆಯನ್ನು ಮತ್ತು ಒಂದು ಹಿರಿಯ ಪ್ರಾಥಮಿಕ ಶಾಲೆಯನ್ನು ಉತ್ಕೃಷ್ಟ ಶಾಲೆಯೆಂದು ಹೆಸರಿಸುತ್ತದೆ. ಅದು ಒಂದು ಗೌರವ ಸೂಚಕ ಹೆಸರಾಗಿ ಉಳಿದಿದೆಯೇ ಹೊರತು ಅಂತಹ ಶಾಲೆಗಳಿಗೆ ಇಲಾಖೆ ಯಾವುದೇ ವಿಶೇಷ ಸೌಲಭ್ಯಗಳನ್ನು ಒದಗಿಸಿಲ್ಲ. ವಿವಿಧ

ರಾಜ್ಯಗಳಲ್ಲಿ ಕಾರ್ಯಕ್ರಮಗಳಿಗೂ ಅವುಗಳ ಅನುಷ್ಠಾನಕ್ಕೂ ಬಹಳಷ್ಟು ವ್ಯತ್ಯಾಸ ಇರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಕೆಲವೊಮ್ಮೆ ಒಂದೇ ರಾಜ್ಯದ ಬೇರೆ ಬೇರೆ ಜಿಲ್ಲೆಗಳಲ್ಲಿ ಸಹ ಇಂತಹ ವಿದ್ಯಮಾನವನ್ನು ನೋಡಬಹುದು.

ಬೆಳಗಿನ ಪ್ರಾರ್ಥನಾ ಸಭೆಗೆ ಎಂಟು ತರಗತಿಗಳ ಮಕ್ಕಳು ಸಾಲುಗಟ್ಟಿ ನಿಲ್ಲುತ್ತಿದ್ದಂತೆ ನಾವು ಅಲ್ಲಿಗೆ ಹೋದೆವು. ಅದು ಬೆಳಗಿನ ಗಜಿಬಿಜಿಯ ಗರಿಷ್ಠ ಚಟುವಟಿಕೆಯ ಸಮಯವಾಗಿದ್ದರೂ ಅಲ್ಲಿ ಅವ್ಯವಸ್ಥೆಯಿರಲಿಲ್ಲ. ಮಕ್ಕಳೆಲ್ಲ ಚುರುಕಿನಿಂದ ಶಿಸ್ತುಬದ್ಧವಾಗಿ ಸೇರಿಕೊಂಡರು. ಒಂದು ಧ್ವನಿವರ್ಧಕ ಮತ್ತು ಬ್ಯಾಂಡ್ ಸೆಟ್ಟನ್ನು ಅಲ್ಲೇ ಮುಂಭಾಗದಲ್ಲೇ ಇಡಲಾಗಿತ್ತು. ಆ ಕಾರ್ಯಕಲಾಪ ನಿರ್ವಹಿಸಲಿರುವ ವಿದ್ಯಾರ್ಥಿಗಳ ಸಣ್ಣ ಗುಂಪು ಅಲ್ಲಿತ್ತು. ಶಾಲೆಯ ಮುಖ್ಯ ಶಿಕ್ಷಕರು ಮುಂಭಾಗದಲ್ಲಿ ನಿಂತಿದ್ದರು. ಕನ್ನಡಕವನ್ನು ಧರಿಸಿದ್ದ ಆ ವ್ಯಕ್ತಿ ಸುಮಾರು ಐವತ್ತು ದಾಟಿದವರಿದ್ದಿರಬಹುದು. ಅವರು ಅನಾರೋಗ್ಯದಿಂದಿರುವುದು ಸ್ಪಷ್ಟವಾಗಿ ಕಾಣುತ್ತಿತ್ತು. ಆದರೆ ಇಡೀ ದಿನ ಕಾರ್ಯನಿರ್ವಹಿಸಲು ಸಂಕಲ್ಪ ತೊಟ್ಟು ಬಂದಂತೆ ಕಾಣಿಸುತ್ತಿದ್ದರು. ಎಲ್ಲ ಎಂಟು ಮಂದಿ ಶಿಕ್ಷಕರು ಮತ್ತು ಒಟ್ಟು ಇನ್ನೂರ ಐವತ್ತನಾಲ್ಕು ವಿದ್ಯಾರ್ಥಿಗಳ ಪೈಕಿ ಇನ್ನೂರು ವಿದ್ಯಾರ್ಥಿಗಳು ಹಾಜರಿದ್ದರು. ಸಾಂಪ್ರದಾಯಿಕ ಹಾಡುಗಳ ಜೊತೆಗೆ ಆ ಸಭೆಯನ್ನು ನಿರ್ವಹಿಸುತ್ತಿದ್ದ ವಿದ್ಯಾರ್ಥಿಗಳ ಗುಂಪು ಇತರ ವಿದ್ಯಾರ್ಥಿಗಳನ್ನು ಪ್ರಸಕ್ತ ವಿದ್ಯಮಾನಗಳು, ಪದ್ಯ, ಕಥೆಗಳ ವಾಚನ ಮುಂತಾದವುಗಳಲ್ಲಿ ತೊಡಗಿಸಿತು. ಸಭೆ ಮುಗಿದು ಎಲ್ಲ ವಿದ್ಯಾರ್ಥಿಗಳು ತರಗತಿಗಳಿಗೆ ಹೋದ ಅನಂತರ ಮುಖ್ಯ ಶಿಕ್ಷಕರು ತಮ್ಮ ಕಛೇರಿಗೆ ಹೋದರು. ಮುಖ್ಯ ಶಿಕ್ಷಕರೊಂದಿಗಿನ ಭೇಟಿಯೇ ನಮ್ಮ ಈ ಯಾತ್ರೆಯ ಮುಖ್ಯಾಂಶವಾಗಿರುತ್ತದೆ ಎಂದು ನನ್ನ ಸಹೋದ್ಯೋಗಿ ನನ್ನೊಡನೆ ಹೇಳಿದ್ದರು. ರಮೇಶ್ ಚಂದ್ರ ಪಾಲ್ ಅವರು ಕುಳಿತುಕೊಂಡು ನಮ್ಮನ್ನೂ ಕುಳ್ಳಿರಿಸಿ ಪರಸ್ಪರ ಪರಿಚಯ ಮಾಡಿಕೊಳ್ಳುವ ಔಪಚಾರಿಕ ಕೆಲಸಗಳು ಮುಗಿದ ಮೇಲೆ ನಾವು ಅವರೊಡನೆ ಹಾಗೂ ಅವರ ಸಹೋದ್ಯೋಗಿ ರಾಮರಾಜ ಗುಜ್ಜರ್ ಅವರೊಡನೆ ಗಂಟೆಗಟ್ಟಲೆ ಮಾತನಾಡಿದೆವು. ಈ ಪ್ರಕ್ರಿಯೆಯಲ್ಲಿ ನಾವು ಮೀಠನ್ ಹಿರಿಯ ಪ್ರಾಥಮಿಕ ಶಾಲೆಯ ಚರಿತ್ರೆ ಹಾಗೂ ವಿಕಾಸದ ರೋಚಕ ಮಾಹಿತಿಗಳನ್ನು ಸಂಗ್ರಹಿಸಿದೆವು. ಶಾಲೆಯ ಮಕ್ಕಳೊಂದಿಗೂ ಸಂವಾದ ನಡೆಸುತ್ತ, ಅವರ ಚಟುವಟಿಕೆಗಳನ್ನು ನೋಡುತ್ತ ಕೆಲಕಾಲ ಕಳೆದೆವು.

ಮೀಠನ್ ಶಾಲೆಯನ್ನು ಸಂದರ್ಶಿಸುವವರಿಗೆ ಮೊದಲಿಗೆ ಕಣ್ಣಿಗೆ ಬೀಳುವುದೇ ಆ ಒಂದು ದೊಡ್ಡ ಆಲದ ಮರ. ಶಾಲೆಯ ಆವರಣದ ಮಧ್ಯಭಾಗದಲ್ಲಿ ಆ ಮರ ತನ್ನ ಬಿಳಲುಗಳೊಂದಿಗೆ ವಿಶಾಲವಾಗಿ ಬೇರೂರಿದೆ. ಆ ಮರ ಶಿಕ್ಷಕರನ್ನೂ ವಿದ್ಯಾರ್ಥಿಗಳನ್ನೂ ಅಯಸ್ಕಾಂತದಂತೆ ತನ್ನತ್ತ ಸೆಳೆದುಕೊಳ್ಳುತ್ತದೆ. ಅವರೆಲ್ಲರೂ ಅದರಡಿಯಲ್ಲಿ ಸೇರುತ್ತಾರೆ. ರಮೇಶ್ ಚಂದ್ರ ಪಾಲ್ ಅವರು ಆ ಶಾಲೆಯ ಇತಿಹಾಸವನ್ನು ಹೇಳಲು ಪ್ರಾರಂಭಿಸಿದ ಸ್ವಲ್ಪ ಹೊತ್ತಿನಲ್ಲೆ ಆಲದ ಮರದ ಮಹತ್ವ ನಮಗೆ ತಿಳಿಯಿತು. 1956ರಲ್ಲಿ ಸ್ಥಾಪಿತಗೊಂಡ ಆ ಶಾಲೆಗೆ ಕಟ್ಟಡವಾಗಲಿ ತರಗತಿ ಕೋಣೆಗಳಾಗಲಿ ಇರಲಿಲ್ಲ. ಈ ಆಲದ ಮರದ ಕೆಳಗೆ ಪಾಠಗಳನ್ನು ಹೇಳಿಕೊಡುತ್ತಿದ್ದರು. ಮುಂದೆ ತರಗತಿ ಕೊಠಡಿಗಳನ್ನು ಒಂದೊಂದಾಗಿ ಸೇರಿಸಲಾಯಿತು. 2005ರಲ್ಲಿ ಈ ಶಾಲೆಯನ್ನು ಎಂಟನೇ ತರಗತಿಯವರೆಗೆ

ವಿಸ್ತರಿಸಿದರು. ಆಗ ಅದು ನಿಜವಾದ ಅರ್ಥದಲ್ಲಿ ಹಿರಿಯ ಪ್ರಾಥಮಿಕ ಅಥವಾ ಮಾಧ್ಯಮಿಕ ಶಾಲೆಯಾಯಿತು. "ನಾನು ಬಡ್ತಿ ಪಡೆದು 2009ರಲ್ಲಿ ಈ ಶಾಲೆಗೆ ಬಂದೆ. ಆ ಸಮಯದಲ್ಲಿ ದಾಖಲಾತಿ ನೂರ ಇಪ್ಪತ್ತರಷ್ಟಿತ್ತು. ಆದರೆ ಎಂಬತ್ತರಿಂದ ಎಂಬತ್ತೈದು ವಿದ್ಯಾರ್ಥಿಗಳು ಮಾತ್ರ ಹಾಜರಾಗುತ್ತಿದ್ದರು. ಅದರ ಹಿಂದಿನ ವರ್ಷ ಬೋರ್ಡ್ ನಡೆಸಿದ ಎಂಟನೇ ತರಗತಿ ಪರೀಕ್ಷೆಯಲ್ಲಿ ಒಬ್ಬನೇ ಒಬ್ಬ ವಿದ್ಯಾರ್ಥಿಯೂ ತೇರ್ಗಡೆಯಾಗಿರಲಿಲ್ಲ. ನಾನು ಇಲ್ಲಿಗೆ ಬಂದಾಗ ನನ್ನ ಮೇಜಿನ ಮೇಲೆ ಮೊದಲು ಕಂಡಿದ್ದು ಬೋರ್ಡ್ ನಡೆಸಿದ ಎಂಟನೇ ತರಗತಿ ಪರೀಕ್ಷೆಯಲ್ಲಿ ಯಾಕೆ ಶೂನ್ಯ ಫಲಿತಾಂಶ ಬಂದಿದೆ ಎಂಬ ಪ್ರಶ್ನೆಯಿದ್ದ ನ್ಯಾಯಾಲಯದ ಮೊಕದ್ದಮೆಯ ನೋಟೀಸ್."

ಅಲ್ಲಿನ ಶಿಕ್ಷಕರು ಶಾಲೆಯನ್ನು ಉಳಿಸಿಕೊಳ್ಳಲು ನ್ಯಾಯಾಲಯಕ್ಕೆ ಎಡತಾಕುತ್ತಿದ್ದರು. ಬೋರ್ಡ್ ನಡೆಸಿದ ಪರೀಕ್ಷೆಯಲ್ಲಿ 'ಶೇಕಡ ನೂರರಷ್ಟು' ವಿಫಲತೆ ಯಾಕೆ ಬಂತು ಎಂದು ನ್ಯಾಯಾಲಯದ ಮುಂದೆ ಸಮರ್ಥಿಸಿಕೊಳ್ಳುವುದೊಂದೇ ಅವರ ಗುರಿಯಾಗಿತ್ತು. ಈ ಸನ್ನಿವೇಶದಲ್ಲಿ "ನಾನು ಬಂದಿದ್ದಾದರೂ ಎಲ್ಲಿಗೆ?" ಎಂಬ ಯಕ್ಷಪ್ರಶ್ನೆ ರಮೇಶ್ ಅವರನ್ನು ಕಾಡಿತು. ಆದರೆ ರಮೇಶ್ ತಮಗೆ ತಾವೇ ಒಂದು ಪ್ರಶ್ನೆಯನ್ನು ಕೇಳಿಕೊಂಡರು: ಈಗ ನಾನು ಏನು ಮಾಡಬೇಕು? ಅವರು ಅಬು ರೋಡ್‌ನಲ್ಲಿ ವಾಸವಾಗಿದ್ದುದರಿಂದ ದಿನಾಲೂ ಮೀಠನ್‌ಗೆ 30ಕ್ಕಿಂತಲೂ ಹೆಚ್ಚು ಕಿ.ಮೀ. ಪ್ರಯಾಣ ಮಾಡಬೇಕಾಗುತ್ತಿತ್ತು. ಅದು ಅವರಿಗೆ ಸರಿ ಕಾಣಿಸಲಿಲ್ಲ. ಮೀಠನ್‌ನಲ್ಲೇ ನೆಲೆಸಲು ತೀರ್ಮಾನಿಸಿದರು. ಅನಾರೋಗ್ಯದ ಹಿನ್ನೆಲೆಯಿತ್ತು; (ಇದರ ಬಗ್ಗೆ ಮುಂದೆ ತಿಳಿದುಕೊಳ್ಳೋಣ). ಅವರ ಕುಟುಂಬಕ್ಕೆ ಅದು ಅಪಾಯಕಾರಿ ತೀರ್ಮಾನ ಎಂದು ಅನಿಸಿತು. ಆದರೆ ಶಾಲೆಯ ಪರಿಸ್ಥಿತಿ ಸುಧಾರಿಸಬೇಕೆಂದು ರಮೇಶ್ ದೃಢವಾಗಿ ನಿಶ್ಚಯಿಸಿದ್ದರು. ತಾವು ದೂರದಲ್ಲಿದ್ದುಕೊಂಡು ಅದನ್ನು ಮಾಡುವುದು ಸಾಧ್ಯವಿಲ್ಲವೆಂಬುದು ರಮೇಶ್ ಅವರ ಅನಿಸಿಕೆಯಾಗಿತ್ತು. ತಾವು ಶಾಲೆಗೆ ಬೇಗನೆ ಬಂದು ಶಾಲಾ ಸಿಬ್ಬಂದಿಯಲ್ಲಿ ಸಮಯ ಪ್ರಜ್ಞೆಯನ್ನು ತಂದರು. ಕ್ರಮೇಣ ಇತರ ಶಿಕ್ಷಕರೂ ಶಾಲೆಗೆ ಸರಿಯಾದ ಸಮಯಕ್ಕೆ ಬರಲಾರಂಭಿಸಿದರು. ರಮೇಶ್ ತರಗತಿಗಳಲ್ಲಿ ಸುತ್ತಾಡುತ್ತ ಮಕ್ಕಳನ್ನು ಮಾತನಾಡಿಸುತ್ತ ಸಂಬಂಧದ ಸೇತುವೆ ಕಟ್ಟತೊಡಗಿದರು. ಪ್ರತಿಯೊಂದು ಮಗುವಿನ ಬಗ್ಗೆಯೂ ತಿಳಿದುಕೊಂಡರು. 2009ರ ನವೆಂಬರ್ ಹೊತ್ತಿಗೆ ಪಠ್ಯಕ್ರಮ ಬೋಧನೆ ಶೇ.50–60ರಷ್ಟು ಪೂರ್ಣಗೊಂಡಿತ್ತು. ಆದರೆ ಮಕ್ಕಳಲ್ಲಿನ ಗ್ರಹಿಕೆ ಮತ್ತು ತಿಳಿವಳಿಕೆ ರಮೇಶ್ ಅವರ ಮಾತಿನಲ್ಲಿ ಹೇಳುವುದಾದರೆ "ಶೂನ್ಯ"ವಾಗಿತ್ತು. ಶಿಕ್ಷಕರನ್ನು ಕರೆದು ಹೇಳಿದರು: "ಕಲಿಕೆಯು ಶೂನ್ಯವಾಗಿರುವಾಗ ಪಠ್ಯಕ್ರಮ ಪೂರ್ಣಗೊಳಿಸಿ ಪ್ರಯೋಜನವೇನು? ನಿಮ್ಮ ಪಠ್ಯಕ್ರಮ ಹಾಗೇ ಇರಲಿ! ಮಕ್ಕಳಿಗೆ ಮೂಲಭೂತ ಅಂಶಗಳನ್ನು ಕಲಿಸೋಣ." ಆ ಮಕ್ಕಳಿಗೆ ಮೂಲ ಅಕ್ಷರ ಜ್ಞಾನವನ್ನೂ ಮೂಲ ಸಂಖ್ಯಾಜ್ಞಾನವನ್ನೂ ಬೋಧಿಸಬೇಕು ಎಂಬ ಬಗ್ಗೆ ರಮೇಶ್ ಅವರಿಗೆ ಸ್ಪಷ್ಟತೆಯಿತ್ತು. ಇದು ಓದುವ, ಬರೆಯುವ ಮತ್ತು ಗ್ರಹಿಕೆಯ ಬಾಗಿಲನ್ನು ತೆರೆಯುತ್ತದೆ. ಇಂಥ ಸ್ಪಷ್ಟ ತಿಳಿವಳಿಕೆಯೊಂದಿಗೆ ಶಿಕ್ಷಕರು ತಮ್ಮ ವೇಳಾಪಟ್ಟಿಗಳನ್ನು ಸಿದ್ಧಪಡಿಸಿಕೊಂಡು

ಮಕ್ಕಳಿಗೆ ಮೂಲ ಪರಿಕಲ್ಪನೆಗಳನ್ನು ವಿಷಯಗಳನ್ನು ಕಲಿಸುವುದರತ್ತ ಗಮನ ಹರಿಸಿದರು. ಅರ್ಥಹೀನ ಪಠ್ಯಕ್ರಮ ಮುಗಿಸುವ ಆದ್ಯತೆ ಹಿನ್ನೆಲೆಗೆ ಬಿತ್ತು. ಅಲ್ಲಿ ಸಂಸ್ಕೃತ ಬೋಧಿಸಲು ಯಾರೂ ಇರಲಿಲ್ಲ. ತಾನೆಂದೂ ಸಂಸ್ಕೃತ ಬೋಧನೆ ಮಾಡಿಲ್ಲವಾದರೂ ರಮೇಶ್ ಈ ಜವಾಬ್ದಾರಿಯನ್ನು ತಾನೇ ವಹಿಸಿಕೊಂಡರು.

ಅವರ ಮುಂದಿನ ಹೆಜ್ಜೆ ಹಳ್ಳಿಯ ಜನರ ಸಭೆಯನ್ನು ನಡೆಸುವುದು. "ದಯವಿಟ್ಟು ನಿಮ್ಮ ಮಕ್ಕಳನ್ನು ಶಾಲೆಗೆ ದಿನಾಲೂ ಸರಿಯಾದ ಸಮಯಕ್ಕೆ ಕಳಿಸಿ. ಈ ಶಾಲೆ ಸರಿಯಾಗಿ ನಡೆಯುವಂತೆ ನಾನು ನೋಡಿಕೊಳ್ಳುತ್ತೇನೆ" ಎಂದು ಜನರಲ್ಲಿ ಕೈಮುಗಿದು ಕೇಳಿಕೊಂಡುದಾಗಿ ರಮೇಶ್ ಹೇಳುತ್ತಾರೆ. ಅವರು ಇದನ್ನು ಅಲ್ಲಿಗೇ ಬಿಡದೆ ತಮ್ಮ ಶಿಕ್ಷಕರನ್ನು ಒಡಗೂಡಿಕೊಂಡು ಎಲ್ಲ ಪೋಷಕರ ಮನೆಗಳಿಗೆ ಭೇಟಿಕೊಟ್ಟರು. ದಿನವೂ ಸಾಯಂಕಾಲ ಕೆಲವು ನಿಮಿಷ ಬಿಡುವು ಮಾಡಿಕೊಂಡು ಆ ದಿನ ಮಕ್ಕಳು ಶಾಲೆಯಲ್ಲಿ ಏನು ಕಲಿತಿದ್ದಾರೆ, ಮನೆಗೆಲಸ ಏನಾದರೂ ಕೊಟ್ಟಿದ್ದಾರೆಯೇ ಎಂದು ಪರಿಶೀಲನೆ ಮಾಡಬೇಕೆಂದು ಪೋಷಕರಲ್ಲಿ ಮನವಿ ಮಾಡಿಕೊಂಡರು. ಏನೇ ಅನುಮಾನಗಳಿದ್ದರೂ ತಮ್ಮೊಡನೆ ಮಾತನಾಡುವಂತೆಯೂ ತಮ್ಮ ಮನೆ ಎಲ್ಲರಿಗೂ ಮುಕ್ತವೆಂದೂ ಮಕ್ಕಳು ಇಪ್ಪತ್ನಾಲ್ಕು ಗಂಟೆಗಳಲ್ಲಿ ಯಾವಾಗೆಂದರೆ ಆಗ ಬಂದು ಸಮಸ್ಯೆ ಪರಿಹಾರ ಮಾಡಿಕೊಳ್ಳಬಹುದೆಂದೂ ಸೂಚಿಸಿದರು. ಇದರ ಪರಿಣಾಮವಾಗಿ ಭಾನುವಾರಗಳಲ್ಲೂ ಕೆಲವು ಮಕ್ಕಳು ಬಂದು ತಮ್ಮ ಸಂದೇಹಗಳಿಗೆ ಪರಿಹಾರ ಕಂಡುಕೊಳ್ಳತೊಡಗಿದರು. ಶಾಲೆಗೂ ಸಮುದಾಯಕ್ಕೂ ನಡುವೆ ವಿಶ್ವಾಸದ ಸಂಬಂಧ ಬೆಳೆಯತೊಡಗಿತು. ಮಕ್ಕಳ ಹಾಜರಿ ಹೆಚ್ಚಿತು. ಶಿಕ್ಷಕರ ಉತ್ಸಾಹವೂ ವೃದ್ಧಿಯಾಯಿತು. ಕಲಿಕೆಯ ಗುಣಮಟ್ಟದಲ್ಲಿ ಏರಿಕೆಯಾಯಿತು. ರಮೇಶ್ ಶಾಲೆಯ ಕಾರ್ಯಕಲಾಪಗಳನ್ನು ನಿಕಟವಾಗಿ ಗಮನಿಸುತ್ತಿದ್ದರು. ಎಂಟನೇ ತರಗತಿಯಲ್ಲಿ ವ್ಯಯಮಾಡಿದಷ್ಟು ಸಮಯವನ್ನು ಅವರು ಒಂದನೇ ತರಗತಿಯಲ್ಲೂ ಕಳೆಯುತ್ತಿದ್ದರು. ಮಕ್ಕಳ ಕಲಿಕೆಯ ಪ್ರಗತಿಯನ್ನು ಅವರು ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ಇದೇ ವೇಳೆ ತಮ್ಮದೇ ಆದ ಬೋಧನಾ ವಿಧಾನವನ್ನು ಅನುಸರಿಸಲು ಅವರು ಶಿಕ್ಷಕರಿಗೆ ಸ್ವಾತಂತ್ರ್ಯವನ್ನೂ ನೀಡಿದ್ದರು.

ರಮೇಶ್ ಅವರು ಉತ್ತರ ಪ್ರದೇಶದ ಕಾನ್ಪುರದವರು. ಮೀಠನ್ ಶಾಲೆಯಲ್ಲಿ ಅವರ ಮೊದಲನೇ ವರ್ಷ ಮುಗಿದು ಬೇಸಿಗೆ ರಜೆಯಲ್ಲಿ ಸ್ವಂತ ಊರಿಗೆ ಹೋಗಿದ್ದರು. ಆ ವರ್ಷ ಎಂಟನೇ ತರಗತಿ ಬೋರ್ಡ್ ಪರೀಕ್ಷೆಯಲ್ಲಿ ಅವರ ಶಾಲೆಯ ಎಲ್ಲಾ ಇಪ್ಪತ್ಮೂರು ಮಕ್ಕಳೂ ತೇರ್ಗಡೆಯಾಗಿರುವ ಸುದ್ದಿ ಅವರಿಗೆ ತಲಪಿತು. ಅವರು ಮೀಠನ್‌ಗೆ ವಾಪಸಾದಾಗ ಬಿಇಓ, ಡಿಇಓ, ಸಮುದಾಯದ ಗಣ್ಯರು ಮುಂತಾದವರೆಲ್ಲ ಬಂದು "ಇದು ಹೇಗೆ ಸಾಧ್ಯವಾಯಿತು?" ಎಂದು ಪ್ರಶ್ನೆ ಮಾಡಿ ಅಭಿನಂದನೆ ಹೇಳುವವರೇ. "ನಾವು ಒಟ್ಟಾಗಿ ಕೆಲಸ ಮಾಡಿದೆವು, ಪೋಷಕರೂ ನಮ್ಮಲ್ಲಿ ವಿಶ್ವಾಸವಿಟ್ಟರು; ನಮ್ಮನ್ನು ಬೆಂಬಲಿಸಿದರು. ನಮ್ಮ ಶಿಕ್ಷಕರು ನಿಸ್ಪೃಹರಾಗಿ ಕೆಲಸ ಮಾಡಿದರು. ಈ ಫಲಿತಾಂಶ ಬರಲೇಬೇಕಿತ್ತು" ಎಂಬುದು ರಮೇಶರ ಉತ್ತರವಾಗಿತ್ತು. ಈ ಫಲಿತಾಂಶದ ಪರಿಣಾಮ ಕೆಲವೇ ದಿನಗಳಲ್ಲಿ ಗೋಚರಿಸಿತು. ಸಮುದಾಯದವರು ಮಕ್ಕಳನ್ನು ಖಾಸಗಿ ಶಾಲೆಗೆ ಕಳಿಸುವುದನ್ನು ನಿಲ್ಲಿಸಿದರು. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗೆ ಸೇರಿಸಿದರು.

ರಮೇಶರ ಮಾತಿನಲ್ಲಿ ಹೇಳುವುದಾದರೆ, 'ವಹಾಂ ಸೆ ನಿಕಾಲ್ ಲಿಯಾ, ಔರ್ ಹಮಾರೇ ಸ್ಕೂಲ್ ಮೆ ಭರ್ತಿ ಕರ್ ಲಿಯಾ' ( ಮಕ್ಕಳನ್ನು ಅಲ್ಲಿಂದ ಬಿಡಿಸಿದರು, ನಮ್ಮ ಶಾಲೆಗೆ ಸೇರಿಸಿದರು). ಆ ಹೆಮ್ಮೆಯನ್ನು ತೋರಿಸುವ ಹಕ್ಕು ಅವರಿಗಿತ್ತು. ಆ ವರ್ಷ, ಅಂದರೆ 2010ರಲ್ಲಿ ಮಕ್ಕಳ ದಾಖಲಾತಿಯು ನೂರಾ ಇಪ್ಪತ್ತರಿಂದ ಇನ್ನೂರಕ್ಕೆ ಏರಿತು. ಪೋಷಕರು ಖಾಸಗಿ ಶಾಲೆಗಾಗಿ ಶುಲ್ಕ, ಬಸ್ ಪ್ರಯಾಣ ಮತ್ತಿತರ ಬಾಬತ್ತಿಗೆ ಖರ್ಚುಮಾಡುತ್ತಿದ್ದ ದೊಡ್ಡಮೊತ್ತದ ಹಣ ಉಳಿಯಿತು. ಅದರಲ್ಲಿ ಒಂದಂಶವನ್ನು ಅವರು ಸರ್ಕಾರಿ ಶಾಲೆಗೆ ಕೊಟ್ಟರು. ಹೀಗೆ ಮಾತನಾಡುತ್ತಿದ್ದಂತೆ ರಮೇಶ್ ಕೆಮ್ಮತೊಡಗಿದರು. ಅವರು ಜ್ವರತಾಪದಿಂದ ಬಳಲುತ್ತಿದ್ದರು. ಆದರೂ ಎದ್ದು ನಮ್ಮನ್ನು ಹೊರಗಡೆ ಹಜಾರದಲ್ಲಿ ಹಾಕಿದ 'ಭಾಮ್‌ಷಾ'ವನ್ನು (ದಾನಿಗಳ ಪಟ್ಟಿ– ಆ ಪ್ರದೇಶದಲ್ಲಿ ಅದನ್ನು ಹಾಗೆ ಕರೆಯುತ್ತಾರೆ) ತೋರಿಸಿದರು. "ಇದೆಲ್ಲವೂ 2010ರ ನಂತರದಲ್ಲಿ ಬಂದದ್ದು; ಇಲ್ಲಿನ ಎಲ್ಲ ಸೌಕರ್ಯಗಳನ್ನೂ ಈ ದೇಣಿಗೆಗಳಿಂದ ಮಾಡಿಕೊಂಡಿದ್ದೇವೆ" ಎಂದರು. ಸ್ವಲ್ಪ ಸಮಯದ ನಂತರ ರಮೇಶ್ ಸ್ವಗತವೆಂಬಂತೆ ಹೇಳಿದರು: "ಯೇ ಜುನೂನ್ ಹೆ (ಇದು ಒಂದು ಹುಚ್ಚು). ನಾನು ಹುಟ್ಟೂರು ಬಿಟ್ಟು ಇಲ್ಲಿಗೆ ಬಂದಿದ್ದೇನೆ. ಅತಿ ಹೀನಾವಸ್ಥೆಯಲ್ಲಿರುವ ಬಡ ಮಕ್ಕಳಿಗೆ ನಾನು ಏನನ್ನಾದರೂ ಮಾಡಬೇಕು ಎಂಬ ಹಂಬಲದಿಂದ ಬಂದೆ." ಅವರ ಮಾತು ಪೊಳ್ಳು ಅನಿಸಲಿಲ್ಲ. ಸಹೋದ್ಯೋಗಿಗಳ ಜತೆಗಿನ ಅವರ ಸುಲಲಿತ ಸಂಬಂಧವನ್ನು ನಾವು ನೋಡಿದೆವು. ಅವರಿಗೆ ರಮೇಶ್ ಗೌರವ ಕೊಡುತ್ತಿದ್ದರು. ಸ್ವಾತಂತ್ರ್ಯವನ್ನೂ ಕೊಟ್ಟಿದ್ದರು. ತಾನು ಯಾವಾಗಲೂ ಅವರ ಸಹೋದ್ಯೋಗಿಯೇ, ಅವರು ಶಾಲೆಯ ಅಭಿವೃದ್ಧಿಗೆ ಏನೇ ಸಲಹೆ ಕೊಟ್ಟರೂ ಅದನ್ನು ಜಾರಿಗೆ ತರಲು ಯತ್ನಿಸುವುದಾಗಿ ಅವರಿಗೆ ಹೇಳಿದ್ದೇನೆ ಎಂದರು ರಮೇಶ್. ನಾವು ಮಾತನಾಡುತ್ತಿರಬೇಕಾದರೆ ಕೆಲವು ಮಕ್ಕಳು ಒಳಗೆ ಬಂದರು. ಅವರಿಗೆ ಕಾಗದ ಬೇಕಾಗಿತ್ತು. ರಮೇಶ್ ಅದನ್ನು ಅವರಿಗೆ ಕೊಟ್ಟರು. ಜತೆಗೆ ಕಾಯಿಲೆಯಿಂದ ಸುಧಾರಿಸಿದ ಮಗುವನ್ನು ಹತ್ತಿರ ಕರೆದು ಮೈದಡವಿ ಮಾತನಾಡಿಸಿದರು. ಮಕ್ಕಳೊಡನೆ ಅವರ ನಡೆನುಡಿ ಸಹಜವಾದುದಾಗಿತ್ತು. ಇದನ್ನು ನಾವು ಅವರ ಗಮನಕ್ಕೆ ತಂದಾಗ "ಅದು ಸಹಜವೂ ನೈಜವೂ ಆಗಿರಬೇಕು. ಅವರು ನನ್ನ ಮಡಿಲಲ್ಲೇ ಕುಳಿತುಕೊಳ್ಳುತ್ತಾರೆ. ನಾನು ಅವರ ಕೈಹಿಡಿದು ಮಾತನಾಡಿಸುತ್ತೇನೆ. ಆದರೆ ಅವರು ಕಲಿಯಲೇಬೇಕು. ಶಾಲೆಗೆ ತಪ್ಪದೆ ಬರಬೇಕು. ಅವರ ಜನ್ಮದಿನವನ್ನೂ ನಾವು ಆಚರಿಸುತ್ತೇವೆ. ಅವರ ಪೋಷಕರನ್ನೂ ಕರೆಯುತ್ತೇವೆ." ಮಕ್ಕಳಿಗೆ ಪೌಷ್ಟಿಕ ಆಹಾರ ಸಿಗಬೇಕು ಎಂಬುದು ಅವರ ಕಾಳಜಿ. ಅದಕ್ಕೆ ಸಹಾಯ ಮಾಡುವಂತೆ ಅವರು ಸಮುದಾಯದವರನ್ನು ಕೇಳಿದ್ದಾರೆ. "ನಾವು ಶಿಕ್ಷಕರೂ ಕೈಲಾದ್ದನ್ನು ಕೊಡುತ್ತೇವೆ. ಇದರಿಂದಾಗಿ ಊಟದಲ್ಲಿ ಹಣ್ಣುಗಳೂ ಇರುತ್ತವೆ. ನಾವು ಶಾಲೆಯ ಗೋಡೆಗಳಿಗೆ ಬಣ್ಣ ಬಳಿದಿದ್ದೇವೆ. ಒಂದು ತೂಗುಯ್ಯಾಲೆ, ಒಂದು ಜಾರುಬಂಡಿ ಒದಗಿಸಿದ್ದೇವೆ. ಮಕ್ಕಳು ಶಾಲೆಗೆ ಸಂತೋಷದಿಂದ ಬರಬೇಕು, ಸಂತೋಷದಿಂದ ಹೋಗಬೇಕು, ಆಗ ಕಲಿಕೆ ಭಾರವಾಗುವುದಿಲ್ಲ."

ರಮೇಶ್ ಅವರ ತಂದೆಗೆ ಮಗ ಶಿಕ್ಷಕನಾಗುವುದು ಖಂಡಿತಾ ಇಷ್ಟವಿರಲಿಲ್ಲ. "ನಾನು ಪೊಲೀಸ್ ಅಥವಾ ಕಂದಾಯ ಅಧಿಕಾರಿಯಾಗಬೇಕು ಎಂದು ಅವರು ಅಪೇಕ್ಷಿಸಿದ್ದರು.

ಆದರೆ ನನಗೆ ಶಿಕ್ಷಕನಾಗಬೇಕೆಂಬ ಮನಸ್ಸಿತ್ತು. ನಾನು ಖಾಸಗಿ ಶಾಲೆಯೊಂದರಲ್ಲಿ ಹಂಗಾಮಿ ಶಿಕ್ಷಕನಾಗಿ ಐದು ವರ್ಷ ಕೆಲಸ ಮಾಡಿದೆ. ಆಮೇಲೆ ಶಿಕ್ಷಣ ಇಲಾಖೆಯಲ್ಲಿ ಈ ಕೆಲಸ ದೊರಕಿತು." ರಮೇಶ್ ಅವರಿಗೆ ಬಂದಿರುವ ಹೆಸರು, ದೊರಕಿರುವ ಮನ್ನಣೆ ಅನೇಕ ವರ್ಷಗಳ ಸೇವೆಯ ಫಲ. ಇಪ್ಪತ್ತು ವರ್ಷಗಳ ಹಿಂದೆ ಅವರು ವಯಸ್ಕರ ಶಿಕ್ಷಣ ಕಾರ್ಯಕ್ರಮದಲ್ಲಿ ತಮ್ಮನ್ನು ತಾವು ಗಾಢವಾಗಿ ತೊಡಗಿಸಿಕೊಂಡಿದ್ದರು. ಆ ಸಂದರ್ಭದಲ್ಲಿ ಅವರು ಕಲಿಸಿದ ಅನಕ್ಷರಸ್ಥ ಮಹಿಳೆಯರು ಅವರನ್ನು ಈಗಲೂ ನೆನೆಯುತ್ತಾರೆ. ಅವರು ಯಾವುದೇ ಸಾಂದರ್ಭಿಕ ರಜೆಯನ್ನು ತೆಗೆದುಕೊಳ್ಳುವುದಿಲ್ಲ. (ಕೆಲವು ವರ್ಷಗಳ ಹಿಂದೆ ಅವರಿಗೆ ಅನಾರೋಗ್ಯ ಉಂಟಾಯಿತು. ಅವರಿಗೆ ಲಕ್ವ ಹೊಡೆದಿತ್ತು. ಹಾಗಾಗಿ ಈಗಲೂ ಸ್ವಲ್ಪ ನಿಧಾನವಾಗಿ ನಡೆಯುತ್ತಾರೆ). ಮುಖ್ಯ ಶಿಕ್ಷಕರ ತರಬೇತಿ ಕಾರ್ಯಾಗಾರಕ್ಕೆ ಹೋಗಲೇಬೇಕೆಂದು ಅವರು ಪಟ್ಟು ಹಿಡಿದರು. ಸಹಾಯಕ್ಕೆ ಅಲ್ಲಿಗೆ ಪತ್ನಿಯನ್ನೂ ಕರೆದೊಯ್ಯುವುದಾಗಿ ಜಿಲ್ಲಾಧಿಕಾರಿಗೆ ಹೇಳಿದರು. "ನನ್ನ ಪತ್ನಿ ನನ್ನ ಬಲಗೈ ಇದ್ದಂತೆ" ಎಂದು ಅವರು ಹೇಳಿದರು. "ನಾನು ಮಾಡುವ ಕೆಲಸಕ್ಕೆಲ್ಲ ಅವರು ಸ್ಫೂರ್ತಿಯಾಗಿದ್ದಾರೆ."

2010ರಿಂದ ಶಾಲೆಗೆ ಎಂಟನೇ ತರಗತಿ ಬೋರ್ಡ್ ಪರೀಕ್ಷೆಯಲ್ಲಿ ನೂರಕ್ಕೆ ನೂರರಷ್ಟು ತೇರ್ಗಡೆ ಫಲಿತಾಂಶ ಬರುತ್ತಿದೆ. ಪ್ರತಿ ವರ್ಷವೂ ದಾಖಲಾತಿ ಸಂಖ್ಯೆ ಹೆಚ್ಚುತ್ತಾ ಸಾಗಿದೆ. ಸಮುದಾಯದ ಬೆಂಬಲವೂ ದೊರಕಿದೆ. ಶಾಲೆಯಲ್ಲಿ ದೀಪಗಳು, ಕಂಪ್ಯೂಟರ್‌ಗಳು, ಕೆಲವು ಲ್ಯಾಪ್‌ಟಾಪ್‌ಗಳು ಹಾಗೂ ಒಂದು ಲೇಸರ್ ಮುದ್ರಣ ಯಂತ್ರವನ್ನು ಸಹ ಹಾಕಿಸಲು ಸಾಧ್ಯವಾಗಿದೆ. ಶಾಲಾ ಅಭಿವೃದ್ಧಿ ಉಸ್ತುವಾರಿ ಸಮಿತಿ 2015ರಲ್ಲಿ ಒಂದು ಅತ್ಯುತ್ತಮ ಎಸ್‌ಡಿಎಂಸಿಯೆಂಬ ಪ್ರಶಸ್ತಿ ಗಳಿಸಿದೆ. ಈ ಶಾಲೆಯನ್ನು "ಉತ್ಕೃಷ್ಟ ಶಾಲೆ"ಯೆಂದು ಮನ್ನಣೆ ನೀಡಬೇಕೆಂದು ಜಿಲ್ಲೆಯು ನಾಮನಿರ್ದೇಶನ ಮಾಡಿದೆ. ರಮೇಶ್ ಅವರು ಜಿಲ್ಲೆಯ ಅತ್ಯುತ್ತಮ ಶಿಕ್ಷಕನೆಂಬ ಪ್ರಶಸ್ತಿ ಗಳಿಸಿದ್ದಾರೆ. ಇದು ಅವರು ಮೀಶನ್‌ನಲ್ಲಿ ಮಾಡಿದ ಕೆಲಸಕ್ಕೆ ಮಾತ್ರವಲ್ಲದೆ ಅವರ ಇಪ್ಪತ್ತು ವರ್ಷಗಳ ಪರಿಶ್ರಮಪೂರ್ವಕ ಸೇವೆಗೂ ಸಂದ ಗೌರವವಾಗಿದೆ.

ನಾವು ಶಾಲೆಯ ಸುತ್ತ ನಡೆದಾಡುತ್ತಿದ್ದಾಗ ರಮೇಶ್ ಅವರಿಗೆ ಅವರ ಹಳೆ ವಿದ್ಯಾರ್ಥಿಯ ಮಗನ ಮದುವೆಯ ಆಮಂತ್ರಣ ಪತ್ರಿಕೆ ಬಂತು. ಅದನ್ನು ರಮೇಶ್ ಅವರು ನಸುನಗುತ್ತ ನಮಗೆ ತೋರಿಸಿ: "ನಾನು ಗೋವರ್ಧನ್ ಮದುವೆಗೂ ಹೋಗಿದ್ದೆ. ಈಗ ಅವನ ಮಗನ ಮದುವೆಗೆ ಹೋಗುವ ಕಾಲವೂ ಬಂದಿದೆ!" ಎಂದರು.

ರಾಮ್‌ರಾಜ್ ಗುರ್ಜರ್ ಅವರು ತೆಗೆದುಕೊಳ್ಳುತ್ತಿದ್ದ ತರಗತಿಗೆ ನಾವು ಬಂದೆವು. ಅವರೊಂದಿಗೆ ಸಮಯ ಕಳೆಯದೆ ನಮ್ಮ ಭೇಟಿ ಪೂರ್ಣವಾಗದು ಎಂದು ನಮ್ಮ ಸಹೋದ್ಯೋಗಿಗಳು ನಮಗೆ ಹೇಳಿದ್ದರು. 2010ರಿಂದ ರಾಮ್‌ರಾಜ್ ಮೀಶನ್‌ನಲ್ಲಿ ಇದ್ದಾರೆ. ಅವರು ಪ್ರಾಥಮಿಕ ತರಗತಿಗಳಿಗೆ ಹಿಂದಿ ಮತ್ತು ಹಿರಿಯ ಪ್ರಾಥಮಿಕ ತರಗತಿಗಳಿಗೆ ಸಂಸ್ಕೃತವನ್ನು ಕಲಿಸುತ್ತಾರೆ. ರಾಮ್‌ರಾಜ್ ಚಿಕ್ಕ ಮಕ್ಕಳಿಗೆ ಕಲಿಸುತ್ತಿದ್ದಾಗ ನಾವೂ ಅದರಲ್ಲಿ ತಲ್ಲೀನರಾದೆವು. ಶಿಕ್ಷಕನಿಗೂ ವಿದ್ಯಾರ್ಥಿಗಳಿಗೂ ಹೊರಪ್ರಪಂಚದ ಅರಿವು ಉಂಟಾದದ್ದು ಪಾಠದ ಸಮಯ ಮುಗಿದ ಮೇಲೆಯೇ. ತರಗತಿಯುದ್ದಕ್ಕೂ

ರಾಮ್‌ರಾಜ್‌ರ ಮುಖದಲ್ಲಿ ಕಿರುನಗೆ ಇತ್ತು. ಪ್ರತಿಯೊಂದು ಮಗುವೂ ಪಾಠದಲ್ಲಿ ಮುಳುಗಿಹೋಗಿತ್ತು. ಎಂಬುದು ನಮಗೆ ಮಾರ್‌ವಾಡಿ ಉಪಭಾಷೆಯ ಅರಿವಿಲ್ಲದಿದ್ದರೂ ತಿಳಿಯುತ್ತಿತ್ತು. ತರಗತಿ ಮುಗಿದ ಬಳಿಕ ರಾಮ್‌ರಾಜ್ ನಮಗೆ ಹೇಳಿದರು: "ರಮೇಶ್ ಮುಖ್ಯ ಶಿಕ್ಷಕರಾಗಿ ಬರುವ ಮೊದಲು ಶಾಲೆ ಒಂದು ರೀತಿ ಅಸ್ತವ್ಯಸ್ತವಾಗಿತ್ತು. ಇಬ್ಬರು ಶಿಕ್ಷಕರು ಸದಾಕಾಲ ಜಗಳವಾಡುತ್ತಿದ್ದರು. ಅವರಲ್ಲೊಬ್ಬರು ಆತ್ಮಹತ್ಯೆ ಮಾಡಿಕೊಂಡರು. ಈ ಶಾಲೆಯ ಸುತ್ತ ವಿಷಾದದ ಛಾಯೆ ಕವಿದಿತ್ತು. ಸಹಜವಾಗಿಯೇ ಪೋಷಕರು ತಮ್ಮ ಮಕ್ಕಳನ್ನು ಖಾಸಗಿ ಶಾಲೆಗೆ ಕಳುಹಿಸುತ್ತಿದ್ದರು. ಆದರೆ ಈಗ ಶಾಲೆ ಸಂಪೂರ್ಣವಾಗಿ ಸಂತೋಷದಾಯಕವಾದ ನೆಮ್ಮದಿಯ ಕೇಂದ್ರವಾಗಿ ಮಾರ್ಪಟ್ಟಿದೆ." ರಾಮ್‌ರಾಜ್ ತಮ್ಮ ಪಾಠದ ವಿಧಾನವನ್ನು ಸಂಕ್ಷಿಪ್ತವಾಗಿ ವಿವರಿಸಿದರು: "ಇಲ್ಲಿನ ಮಕ್ಕಳ ಮಾತೃಭಾಷೆ ಮಾರ್‌ವಾಡಿ. ಅವರಿಗೆ ಕಲಿಸಲು ನಾನು ಮಾರ್‌ವಾಡಿ ಭಾಷೆ ಕಲಿಯಬೇಕಾಯಿತು. ನಾನು ಒಂದನೇ ಮತ್ತು ಎರಡನೇ ತರಗತಿಗಳಿಗೆ ಮಾತನಾಡುತ್ತಾ, ಹಾಡುತ್ತಾ, ನಡು ನಡುವೆ ಪದ್ಯವನ್ನೂ ಕಥೆಗಳನ್ನೂ ಸೇರಿಸಿಕೊಂಡು ಕಲಿಸುತ್ತೇನೆ. ಅವರು ಮುಕ್ತವಾಗಿ ಮಾತನಾಡುವಂತೆ ಉತ್ತೇಜಿಸಲು ನಾನು ಈ ತಂತ್ರ ಬಳಸುತ್ತೇನೆ. ಮಕ್ಕಳು ಯಾವುದೋ ಒಂದು ವಿಷಯಕ್ಕೆ ಹಿಂದಿ ಪದ ತಕ್ಷಣಕ್ಕೆ ಸಿಗದಿದ್ದರೆ ಮಾರ್‌ವಾಡಿ ಪದವನ್ನೇ ಬಳಸಲು ಹೇಳುತ್ತೇನೆ. 2 ನೇ ತರಗತಿಯಲ್ಲಿ ಬರವಣಿಗೆಯ ಕಲಿಕೆ ಪ್ರಾರಂಭವಾಗುತ್ತದೆ. ಎಲ್ಲ ಮಕ್ಕಳು ಭಿಲ್ಲ ಬುಡಕಟ್ಟು ಸಮುದಾಯಕ್ಕೆ ಸೇರಿದವರಾಗಿದ್ದು ಅವರ ಆರ್ಥಿಕ ಪರಿಸ್ಥಿತಿ ದುಸ್ತರವಾಗಿದೆ. ಅವರ ಪೋಷಕರು ಕಲ್ಲಿನ ಗಣಿಗಳಲ್ಲಿ ಕೂಲಿ ಕೆಲಸವನ್ನೋ ರೇವಧರ್‌ನಲ್ಲಿ ಕಟ್ಟಡದ ಕೆಲಸವನ್ನೋ ಮಾಡುತ್ತಾರೆ. ನೂರಕ್ಕೆ ತೊಂಬತ್ತರಷ್ಟು ಮಂದಿ ಪುರುಷರು ಕುಡಿಯುವ ಚಟಕ್ಕೆ ಬಿದ್ದಿದ್ದಾರೆ. ಮಕ್ಕಳಿಗೆ ಬೆಚ್ಚನೆಯ ಬಟ್ಟೆ ಇರದಿದ್ದರೂ ಸಹ ಇವರಿಗೆ ಕುಡಿತ ಇರಲೇಬೇಕು. ರೋಗಪೀಡಿತರ ಸಂಖ್ಯೆ ಬಹಳಷ್ಟಿದ್ದು ಕೆಲವರು ಏಡ್ಸ್‌ಗೂ ತುತ್ತಾಗಿದ್ದಾರೆ.

ಈಗಿನ ಶಾಲಾಭಿವೃದ್ಧಿ ಸಮಿತಿಯಲ್ಲಿ ಸಮರ್ಥರಾದ ಸದಸ್ಯರಿದ್ದಾರೆ. ಅವರಲ್ಲಿ ಬದ್ಧತೆ ಕಾಣಿಸುತ್ತಿದೆ. ಮಕ್ಕಳು ಒಳ್ಳೆಯ ಗುಣಮಟ್ಟದ ಶಿಕ್ಷಣವನ್ನು ಪಡೆಯುತ್ತಿರುವುದರಿಂದ ಮೀಠನ್‌ನ ಮುಂದಿನ ತಲೆಮಾರಿನ ಯುವಕರು ಒಳ್ಳೆಯ ಹವ್ಯಾಸಗಳನ್ನು ಬೆಳೆಸಿಕೊಂಡು ಹೆಚ್ಚಿನ ಜವಾಬ್ದಾರಿಯುಳ್ಳ ನಾಗರಿಕರಾಗುತ್ತಾರೆಂದು ರಾಮ್‌ರಾಜ್ ನಂಬಿದ್ದಾರೆ. ನಿಧಾನವಾಗಿ ಪೋಷಕರಲ್ಲೂ ಅಕ್ಷರಜ್ಞಾನ ಉಂಟಾಗುತ್ತಿದೆ. ಕೇವಲ ಶೇಕಡ ಮೂವತ್ತು ಮಂದಿ ಮಾತ್ರ ಹೆಬ್ಬೆಟ್ಟು ಒತ್ತುವ ಅನಕ್ಷರಸ್ಥರಾಗಿ ಉಳಿದಿದ್ದಾರೆ. ಮೀಠನ್‌ನ ಶೇಕಡ ಎಪ್ಪತ್ತರಷ್ಟು ಹಳೆಯ ವಿದ್ಯಾರ್ಥಿಗಳು ವ್ಯಾಸಂಗವನ್ನು ಮುಂದುವರಿಸಿದ್ದಾರೆ. ಆದರೆ ಹುಡುಗಿಯರು ಮನೆಯ ಜವಾಬ್ದಾರಿ ಅಥವಾ ಮದುವೆ ಮುಂತಾದ ಕಾರಣಗಳಿಂದ ಶಿಕ್ಷಣವನ್ನು ಮುಂದುವರಿಸಲಾಗುತ್ತಿಲ್ಲ.

ರಾಮ್‌ರಾಜ್ ತಾನು ಒಬ್ಬ ಶಿಕ್ಷಕನಾಗಿ ಬೆಳೆದು ಬಂದ ಬಗ್ಗೆ ಒಂದು ಪುನರವಲೋಕನವನ್ನು ಮಾಡಿದರು, "ಹಿಂದೆ ನಾನು ಸಾಂಪ್ರದಾಯಿಕ ಕ–ಖ–ಗ ಶಿಕ್ಷಕನಾಗಿದ್ದೆ. ಪಾಠವನ್ನು ಯಾಂತ್ರಿಕವಾಗಿ ಕಂಠಪಾಠ ಮಾಡಿ ನೆನಪಿಟ್ಟುಕೊಳ್ಳುವಂತೆ ಮಕ್ಕಳಿಗೆ ಹೇಳುತ್ತಿದ್ದೆವು. ಆದರೆ ಈಗ ಭಾಷಾ ಬೋಧನೆಯ ಸಮಗ್ರ ಕಲಿಕಾ

ಪದ್ಧತಿಯನ್ನು ಅಳವಡಿಸಿಕೊಂಡು ಆ ಮೂಲಕ ಮಕ್ಕಳಿಗೆ ಭಾಷಾ ಬಳಕೆಯ ಸಕಲ ಸಾಮರ್ಥ್ಯಗಳನ್ನು ಕಲಿಸುವ ವಿಧಾನವನ್ನು ಉಪಯೋಗಿಸುತ್ತಿದ್ದೇವೆ. ಮಕ್ಕಳ ಭಾಷಾ ಸಾಮರ್ಥ್ಯವನ್ನು ಅಭಿವೃದ್ಧಿಪಡಿಸುವುದಕ್ಕೆ ಕತೆಗಳನ್ನು ಬಳಸುವುದನ್ನೂ ಕಲಿತಿದ್ದೇನೆ." ನಾವು ಅಲ್ಲಿಂದ ಹೊರಡಲು ಅನುವಾದೆವು. ಮಕ್ಕಳು ಊಟ ಮುಗಿಸಿ ತಟ್ಟೆಗಳನ್ನು ತೊಳೆಯುತ್ತಿದ್ದರು. ಆಲದ ಮರದ ಸುತ್ತ ಆಟಗಳ ಭರಾಟೆ ಜೋರಾಗಿತ್ತು. ಕೆಲವು ಶಿಕ್ಷಕರು ಮಕ್ಕಳ ಆಟವನ್ನು ನೋಡುತ್ತ ನಿಂತಿದ್ದರು; ಅವರ ಮುಖದಲ್ಲಿ ನಸುನಗೆ ಸೂಸುತ್ತಿತ್ತು. ನಾವು ಹೊರಟದ್ದನ್ನು ನೋಡಿ ಕೆಲವು ಮಕ್ಕಳು ಸಮೀಪಕ್ಕೆ ಬಂದು ಮೀಠನ್‌ನಿಂದ ಬೆಂಗಳೂರಿಗೆ ಎಷ್ಟು ದೂರ ಎಂದು ಕೇಳಿದರು. ಒಬ್ಬನು "ರಸ್ತೆ ಮೂಲಕ ಹೋಗುತ್ತೀರಾ?" ಎಂದು ಕೇಳಿದ. "ಇಲ್ಲ, ಹವಾಯಿ ಜಹಾಜ್‌ನಲ್ಲಿ ಹೋಗುತ್ತೇವೆ" (ವಿಮಾನದಲ್ಲಿ) ಎಂದು ನಾವು ಉತ್ತರಿಸಿದೆವು. ಒಬ್ಬ ನಮಗೆ ವಿದಾಯ ಹೇಳುತ್ತ ಪ್ರಶ್ನಿಸಿದ, "ಮತ್ತೆ ಯಾವಾಗ ಬರುತ್ತೀರಿ?"



ಸುರಪುರದ ಶಾಲೆಯೊಂದರಲ್ಲಿ ಉತ್ಸಾಹದಿಂದ ನಡೆಯುತ್ತಿರುವ ಬೆಳಗಿನ ಸಭೆ
ಉತ್ತಮ ಗ್ರಾಮೀಣ ಶಾಲೆಯ ದ್ಯೋತಕವಾಗಿ ಶಾಲೆಯಲ್ಲಿ ನಡೆಯುತ್ತಿರುವ ಬೆಳಗಿನ ಸಭೆ.



ಉತ್ತರಕಾಶಿಯ ಸ್ವಯಂ ಪ್ರೇರಿತ ಶಿಕ್ಷಕರ ವೇದಿಕೆಯು ಅವರ ಸ್ವಯಂ ವಿಕಾಸದ
ಬದ್ಧತೆಗೆ ಸಂಕೇತವಾಗಿದೆ.



ಉತ್ಸಾಹಭರಿತ ಬೆಳಗಿನ ಸಭೆಯು ಉತ್ತಮ ಶಾಲೆಯ ಅವಿಭಾಜ್ಯ ಅಂಗ.



ಪ್ರಶ್ನೆಗಳು.. ಕುತೂಹಲ – ಚರ್ಚೆಯ ವಿಷಯವಾಗಿರುವ ತಾಮ್ರದ ಪಾತ್ರೆ



ಉಧಮ್‌ಸಿಂಗ್ ನಗರದ ಶಾಲೆಯಲ್ಲಿ ನೃತ್ಯಾಭ್ಯಾಸದಲ್ಲಿ ನಿರತ ಬಾಲಕಿಯರು –
ಮಕ್ಕಳ ಸರ್ವಾಂಗೀಣ ಅಭಿವೃದ್ಧಿಗೆ ವಿಶಾಲವಾದ ಅರ್ಥವಿದೆ.



ಮಣ್ಣಿನಿಂದ ಮಾಡಬಹುದಾದ ವಸ್ತುಗಳು ಮತ್ತು ಸಾಧ್ಯತೆಗಳನ್ನು ಅರಿತುಕೊಳ್ಳಲು
ಪ್ರಾಯೋಗಿಕ ಚಟುವಟಿಕೆಯಲ್ಲಿ ತೊಡಗಿರುವ ಮಕ್ಕಳು



*ಪರ್ವತ ಪ್ರದೇಶದ ಶಾಲೆಗಳಲ್ಲಿ ಕಬಡ್ಡಿ ಆಟದ ಮೋಜು.*
*ಒರಟಾದ ಮೈದಾನ, ತರಚಿದ  ಮೊಣಕಾಲುಗಳು; ಆಳವಾಗಿ ತೊಡಗಿಸಿಕೊಂಡ ಶಿಕ್ಷಕರು.*



*ಗಂಗಾನಿಯ ಚಳಿಗಾಲದ ಬೆಚ್ಚನೆ ಬಿಸಿಲಲ್ಲಿ ಬಿಸಿಯೂಟ ಸೇವಿಸುತ್ತಿರುವ ಮಕ್ಕಳು.*



*92 ವರ್ಷದ ಬಹುಗುಣ ಅವರ ಸಹಾಯದಿಂದ ರವಾಲಿ ಉಪಭಾಷೆಯ ಗಾದೆಗಳನ್ನು ಸಂಗ್ರಹಿಸುತ್ತಿರುವ ಶಿಕ್ಷಕ ಧ್ಯಾನ್ ಸಿಂಗ್‌ರೊಂದಿಗೆ ಲೇಖಕರು.*



**ಮಣ್ಣು ಮತ್ತು ಅದರ ಬಳಕೆ –**
**ರಾಜಸ್ಥಾನದ ಟೋಂಕ್‌ನಲ್ಲಿ ಕೈಯಿಂದಲೇ ಮಾಡುವ ಚಟುವಟಿಕೆಯಲ್ಲಿ ನಿರತ ಮಕ್ಕಳು.**



ಅದ್ಭುತವಾಗಿ ರೂಪಿಸಲಾದ ಚಟುವಟಿಕೆಯ ಮೂಲಕ ಸ್ಥಾನ ಬೆಲೆಯ ಪರಿಕಲ್ಪನೆಯನ್ನು ಆಳವಾಗಿ ಕಲಿಯುತ್ತಿರುವ ಮಕ್ಕಳು



ಉಧಮ್‌ಸಿಂಗ್ ನಗರದ ಶಾಲೆಯೊಂದರಲ್ಲಿ ವೈದ್ಯಕೀಯ ತಪಾಸಣೆಗೊಳಪಡುತ್ತಿರುವ ಮಕ್ಕಳು



ಮಕ್ಕಳ ವಿಜ್ಞಾನ ಮೇಳದಲ್ಲಿ ಭಾಗವಹಿಸಲು ಪೂರ್ವತಯಾರಿಯಲ್ಲಿ ಮಗ್ನರಾಗಿರುವ
ಉತ್ತರಕಾಶಿಯ ಶಾಲೆಯೊಂದರ ಶಿಕ್ಷಕರು.



ಶಾಲೆಯಲ್ಲಿ ತಂತ್ರಜ್ಞಾನವನ್ನು ಅರ್ಥಪೂರ್ಣವಾಗಿ ಹಾಗೂ ಪರಿಣಾಮಕಾರಿಯಾಗಿ ಬಳಸುವ ಪರಿಯನ್ನು
ನಿರ್ಣಯಿಸುವ ಶಿಕ್ಷಕರು – ಸುರಪುರ ತಾಲ್ಲೂಕಿನ ಯಾಳಗಿಯ ಶಾಲೆಯಲ್ಲಿ ಕಂಡ ದೃಶ್ಯ.




ಕಲಿಕೆಯ ಸಾಧನವಾದ ತರಗತಿಯ ಗೋಡೆಗಳು



ಬೋಧನೆ ಮತ್ತು ಕಲಿಕಾ ಸಾಮಗ್ರಿಗಳಿಂದ ತುಂಬಿರುವ ಸುರಪುರದ ಶಾಲಾ ಕೊಠಡಿಯಲ್ಲಿ ತಮ್ಮ ವಿದ್ಯಾರ್ಥಿಗಳೊಂದಿಗೆ ಶಿಕ್ಷಕ ಪರಮೇಶ್ವರಯ್ಯನವರು.

# 2

# ಚಿಂತನಶೀಲ ಅಭ್ಯಾಸಿಗರು :
## ಜೀವನವನ್ನು ಕಲಿಕೆಗೆ ಅರ್ಪಿಸಿಕೊಂಡವರು

"ಬೋಧನೆಯನ್ನು ಕುರಿತಾದ ನನ್ನ ದೃಷ್ಟಿಕೋನವೇ ಈಗ ಬದಲಾಗಿದೆ. ಈಗ ನಾನು ಹಿರಿಯ ಪ್ರಾಥಮಿಕ ತರಗತಿಗಳಂತೆಯೇ ಕಿರಿಯ ಪ್ರಾಥಮಿಕ ತರಗತಿಗಳಿಗೂ ಕಲಿಸುವುದನ್ನು ಇಷ್ಟಪಡುತ್ತೇನೆ. ಬೆಂಗಳೂರು ಸಮೀಪದ ಸೆಂಟರ್ ಫಾರ್ ಲರ್ನಿಂಗ್‌ಗೆ ನಾನು ಕಾರ್ಯಕ್ರಮವೊಂದರ ನಿಮಿತ್ತ ಹೋಗಿದ್ದೆ. ಅಲ್ಲಿ ಪಿಎಚ್.ಡಿ. ಪಡೆದವರೂ ಸಹ ನಾಲ್ಕು ಹಾಗೂ ಐದನೇ ತರಗತಿಗಳಿಗೆ ಪ್ರೀತಿ, ಉತ್ಸಾಹಗಳಿಂದ ಕಲಿಸುವ ನಮೂನೆಯನ್ನು ನೋಡಿ ನನಗೆ ಹೊಸ ಒಂದು ಜಗತ್ತು ತೆರೆದುಕೊಂಡಂತೆ ಆಯಿತು. ಇದರಿಂದ ನನ್ನ ದೃಷ್ಟಿಕೋನವೇ ಬದಲಾಯಿತು. ನಾನೂ ಅದೇ ಉತ್ಸಾಹದಿಂದ ಪ್ರತಿಯೊಂದು ತರಗತಿಗೆ ಕಲಿಸಬೇಕು ಎಂದು ಅಂದೇ ನಿರ್ಧಾರ ಮಾಡಿದೆ." ನನ್ನ ಪ್ರವಾಸದ ಪ್ರಾರಂಭದ ದಿನಗಳಲ್ಲಿ ನಾನು ಈ ಮಾತನ್ನು ಒಬ್ಬರು ಶಿಕ್ಷಕರಿಂದ ಕೇಳಿದೆ. ಆ ಮಾತು ಇಂದಿಗೂ ನನ್ನ ಮನಸ್ಸಿನಲ್ಲಿ ಹಸಿರಾಗಿದೆ. ಕಲಿಸುವ ವಿಷಯವನ್ನು ಕುರಿತಾದ ಜ್ಞಾನವನ್ನೂ ಬೋಧನಾ ವಿಧಾನವನ್ನೂ ಸುಧಾರಿಸಿಕೊಳ್ಳುವುದನ್ನು ಒಬ್ಬ ವೃತ್ತಿನಿಷ್ಠನಾದ ಶಿಕ್ಷಕನಿಂದ ನಿರೀಕ್ಷಿಸುತ್ತೇವೆ. ಆದರೆ ಈ ರೀತಿಯ ವೃತ್ತಿಯನ್ನು ಪ್ರೀತಿಸುವ ಮನೋಧರ್ಮ ಹಾಗೂ ಪ್ರವೃತ್ತಿಯನ್ನು ಕಾಣುವುದು ಅಪರೂಪ; ಅದನ್ನು ಸಾಧಿಸುವುದು ಕಷ್ಟಕರ ಕೂಡಾ. ಈ ಶಿಕ್ಷಕನಿಗೆ ತೆರೆದ ಮನಸ್ಸು ಇತ್ತು, ಹೊಸ ಆಲೋಚನೆಗಳನ್ನೂ ಹೊಸ ಅನುಭವಗಳನ್ನೂ ಪಡೆದುಕೊಳ್ಳುವ ಬಯಕೆ ಇತ್ತು; ಇದರಿಂದ ಆತನಲ್ಲಿ ಬದಲಾವಣೆಯಾಯಿತು. ನನ್ನ ಈ ಯಾತ್ರೆಯಲ್ಲಿ ಮುನ್ನೂರಕ್ಕೂ ಹೆಚ್ಚು ಶಿಕ್ಷಕರನ್ನು ಮಾತನಾಡಿಸಿದ್ದೇನೆ. ಇವರೆಲ್ಲರೂ ಹೆಚ್ಚೂ ಕಡಿಮೆ ಉತ್ತಮ ಶಿಕ್ಷಕರೇ ಆಗಿದ್ದರು. ಇವರಲ್ಲಿ ಹಲವರು ತಮ್ಮನ್ನು ತಾವೇ ಸುಧಾರಿಸಿಕೊಳ್ಳಬೇಕು ಎಂಬ ಮಹದಾಸೆಯಿಂದ ಹೊಸ ಅನುಭವಗಳನ್ನು, ಜ್ಞಾನವನ್ನು ಪಡೆದುಕೊಂಡು ಬದಲಾಗಿರುವುದನ್ನು ಕಂಡಿದ್ದೇನೆ.

ಸಮರ್ಥ ಹಾಗೂ ಚಿಂತನಶೀಲ ಶಿಕ್ಷಕನನ್ನು ವರ್ಣಿಸಲು "ಚಿಂತನಶೀಲ ಅಭ್ಯಾಸಿಗರು" ಎಂದು ಹೇಳುವುದು ಪದೇಪದೇ ಬಳಸುವ ನುಡಿಗಟ್ಟು. ನಾನು ಈ ಸಂಕಲನದಲ್ಲಿ ಹೇಳಿರುವ ಶಿಕ್ಷಕರು ಮೇಲಿನ ನುಡಿಗಟ್ಟಿಗೆ ಜೀವ ತುಂಬುವವರೇ ಸರಿ. ಈ ಶಿಕ್ಷಕರು ಸದಾ ಕಾಲ ತಮ್ಮ ವೃತ್ತಿಯು ಒತ್ತಾಯಿಸುವ ಬೌದ್ಧಿಕ ಮತ್ತು ನೈತಿಕ

ವಿಷಯಗಳ ಬಗ್ಗೆ ಅರ್ಥಪೂರ್ಣವಾಗಿ ಚಿಂತಿಸುತ್ತ ಇರುತ್ತಾರೆ. ಅದನ್ನು ಅವರು ಮಕ್ಕಳು ಹೇಗೆ ಯೋಚಿಸುತ್ತಾರೆ, ಅವರ ಅನಿಸಿಕೆಗಳೇನು ಮತ್ತು ಅವರು ಹೇಗೆ ಕಲಿಯುತ್ತಾರೆ ಎಂಬುದರೊಂದಿಗೆ ತಾಳೆ ಹಾಕಿ ನೋಡುತ್ತಾರೆ. ನಾನು ಭೇಟಿ ಮಾಡಿದ ಇಂತಹ ಚಿಂತನಶೀಲ ಶಿಕ್ಷಕರು ಅನೇಕ ಮಂದಿ. ಅವರಲ್ಲಿ ಬೆರಳೆಣಿಕೆಯಷ್ಟು ಮಂದಿಯನ್ನು ಮಾತ್ರ ಈ ಕೃತಿಗೆ ಆಯ್ಕೆ ಮಾಡಲು ಬಹಳ ಕಷ್ಟಪಡಬೇಕಾಯಿತು.

ಒಬ್ಬರು ಶಿಕ್ಷಕಿ ಪಾಠ ಮಾಡುವುದನ್ನು ವೀಕ್ಷಿಸಿ ನಾನು ಅವರನ್ನು ಪ್ರಶಂಸೆ ಮಾಡಿದಾಗ ಅವರು ಬಲು ವಿನಮ್ರತೆಯಿಂದ ಹೀಗೆ ಹೇಳಿದರು: "ನೀವು ನನ್ನ ಪಾಠವನ್ನು ಹತ್ತು ವರ್ಷಗಳ ಹಿಂದೆ ನೋಡಬೇಕಿತ್ತು. ನಾನು ಪಠ್ಯಕ್ರಮವನ್ನು ಯಾಂತ್ರಿಕವಾಗಿ ಮುಗಿಸುತ್ತಿದ್ದೆ. ನಾನೂ ಸಾಂಪ್ರದಾಯಿಕ ಶಿಕ್ಷಕಿಯಾಗಿದ್ದೆ." ತಾವು ನೋಡಿ, ತಿಳಿದು, ಕಲಿತು ಹೆಚ್ಚು ಸಮರ್ಥ ಶಿಕ್ಷಕರಾದೆವು ಎಂದು ಶಿಕ್ಷಕರು ಸಾಲು ಸಾಲಾಗಿ ನನ್ನೊಡನೆ ಹೇಳಿದ್ದಾರೆ. ತರಬೇತಿ ಕಾರ್ಯಕ್ರಮಗಳಿಂದಲೂ ಕಾರ್ಯಾಗಾರಗಳಿಂದಲೂ ಪ್ರಯೋಜನ ಪಡೆದುದಾಗಿ ಹೇಳಿದರು. ಅಲ್ಲಿ ಕಲಿತುದನ್ನು ತರಗತಿಯಲ್ಲಿ ಪ್ರಯೋಗ ಮಾಡಿದ್ದು, ಪ್ರಾಜೆಕ್ಟ್‌ಗಳನ್ನು ನಡೆಸಿದ್ದು ಇತ್ಯಾದಿ ವಿವರಿಸಿದರು. ಮಕ್ಕಳಲ್ಲಿ ವಾಚನಾಭಿರುಚಿಯನ್ನು ಹೆಚ್ಚಿಸುವ ಗ್ರಂಥಾಲಯದ ಸ್ಥಾಪನೆಯು ಭಾಷಾ ಕಲಿಕೆ ವೃದ್ಧಿ ಕುರಿತಾದ ಕಾರ್ಯಾಗಾರಗಳಲ್ಲಿ ತಿಳಿದು ಜ್ಞಾನ ಪಡೆದುದರ ಪರಿಣಾಮವೆಂದು ಅನೇಕರು ಹೇಳಿದರು. ಅನೇಕ ಬಾರಿ ಇಂತಹ ಕಾರ್ಯಕ್ರಮಗಳಲ್ಲಿ ಲೋಕಾಭಿರಾಮ ವಿಷಯಗಳ ಭರ್ಜರಿ ಚರ್ಚೆ ನಡೆಯುವುದುಂಟು. ಕಾರ್ಯಾಗಾರವೊಂದು ನಿಜವಾಗಿಯೂ ಅರ್ಥಪೂರ್ಣವಾಗಿದ್ದರೆ ಶಿಕ್ಷಕನಿಗೆ ಅದು ನೆನಪಿನಲ್ಲಿ ಉಳಿಯುತ್ತದೆ. ಆದ್ದರಿಂದಲೇ ನಾವು ಶಿಕ್ಷಕರಲ್ಲಿ ಅವರು ಭಾಗವಹಿಸಿದ ತರಬೇತಿ ಶಿಬಿರ ಹಾಗೂ ಕಾರ್ಯಾಗಾರಗಳ ಬಗ್ಗೆ ಹೆಚ್ಚು ವಿವರವಾಗಿ, ಅವುಗಳ ಹೆಸರು, ಏನು ಚರ್ಚೆ ನಡೆಯಿತು ಹಾಗೂ ಅವು ಹೇಗೆ ಪ್ರಯೋಜನಕಾರಿಗಳಾದವು ಎಂದು ವಿವರಿಸುವಂತೆ ಒಡಂಬಡಿಸುತ್ತೇವೆ. ಅನೇಕ ಶಿಕ್ಷಕರು ಕಾರ್ಯಾಗಾರದ ಹೆಸರನ್ನು ನೆನಪಿಟ್ಟುಕೊಳ್ಳುತ್ತಾರೆ, ಹಲವರು ಅಲ್ಲಿ ಮಾರ್ಗದರ್ಶಕರೂ ಸಂಪನ್ಮೂಲ ವ್ಯಕ್ತಿಗಳೂ ಆಗಿದ್ದವರನ್ನು ಕೃತಜ್ಞತೆಯಿಂದ ನೆನಪಿಸಿಕೊಳ್ಳುತ್ತಾರೆ. ಕಾರ್ಯಾಗಾರದ ಪ್ರಭಾವದಿಂದ ತಾವು ಅಭಿವೃದ್ಧಿಪಡಿಸಿದ ಪರಿಕರಗಳನ್ನೂ ಸಿದ್ಧಪಡಿಸಿದ ಕಲಿಕೆಯ ಅಭ್ಯಾಸಗಳನ್ನೂ ಅವರು ನಮಗೆ ತೋರಿಸಿದರು. ಅಧ್ಯಾಪನದಲ್ಲಿ ವಿಷಯ ಜ್ಞಾನವನ್ನೂ ಬೋಧನಾ ಕ್ರಮವನ್ನೂ ಸುಧಾರಿಸಿಕೊಂಡ ಬಗೆಯನ್ನು ವಿವರಿಸಿದರು. ನಕಾಶೆಗಳನ್ನು ಉಪಯೋಗಿಸುವ ಮೂಲಕ ಸಮಾಜ ವಿಜ್ಞಾನದ ಕಲಿಕೆಯನ್ನು ಹೇಗೆ ಹೆಚ್ಚು ರೋಚಕವಾಗಿ ಮಾಡಬಹುದು, ಅಥವಾ ವಿಜ್ಞಾನದ ತತ್ವವೊಂದನ್ನು ತಿಳಿಸಲು ತಾವೇ ಮನೆಯಲ್ಲಿ ತಯಾರಿಸಿದ ಪ್ರಯೋಗ ಹೇಗೆ ಸಹಕಾರಿಯಾಯಿತು ಎಂದು ಉದಾಹರಣೆಗಳನ್ನೂ ನೀಡಿದರು. 'ಶಿಕ್ಷಕರ ಸಾಮರ್ಥ್ಯ ವೃದ್ಧಿಯಲ್ಲಿ ವಿಜ್ಞಾನ ಹಾಗೂ ಗಣಿತದ ಕಾರ್ಯಾಗಾರಗಳು ಅತ್ಯಂತ ಹೆಚ್ಚು ಪ್ರಯೋಜನಕಾರಿ. ನಾವು ಈಗ ಬಳಸುತ್ತಿರುವ ನಕಾಶೆಗಳೂ ಪರಿಕರಗಳೂ ಈ ಕಾರ್ಯಾಗಾರಗಳ ಫಲಿತಾಂಶವಾಗಿವೆ' ಎಂದು ಒಬ್ಬರು ಶಿಕ್ಷಕಿ ಹೇಳಿದರು. ಈ ಶಿಕ್ಷಕರೆಲ್ಲ ಯಾವ ಕಾರ್ಯಾಗಾರ ಕಬ್ಬಿಣದ

ಕಡಲೆಯಾಯಿತು, ಯಾವುದು ಜೊಳ್ಳು ಎನಿಸಿತು ಎಂಬುದನ್ನು ಕೂಡಾ ಹಿಂದೆ–ಮುಂದೆ ನೋಡದೆ ಹೇಳಿದ್ದರಿಂದಲೇ ಅವರ ಅಭಿಪ್ರಾಯಕ್ಕೆ ತೂಕ ಬಂತು.

ತಮ್ಮ ವೇಳಾಪಟ್ಟಿ, ಬೋಧನಾ ವಿಧಾನ, ಮೌಲ್ಯಮಾಪನ ವಿಧಾನಗಳು ಮತ್ತು ಶಾಲಾ ಚಟುವಟಿಕೆಗಳ ಒಟ್ಟಾರೆ ನಿರ್ವಹಣೆ ಇವುಗಳನ್ನು ಸ್ವಾಯತ್ತವಾಗಿಯೇ ಮಾಡಲು ಕಲಿತದ್ದು, ಅವರ ವೃತ್ತಿಪರಿಣತಿಯ ಅಭಿವೃದ್ಧಿಯ ಯಾತ್ರೆಯಲ್ಲಿನ ಒಂದು ಮೈಲುಗಲ್ಲಾಗಿದೆ. ಅವರಲ್ಲಿ ಒಬ್ಬ ಶಿಕ್ಷಕರು ನಮಗೆ ಹೀಗೆ ಹೇಳಿದರು, “ನಾನು ಕಾರ್ಯಾಗಾರದಿಂದ ಹೊರ ಬಂದಾಗ ಮುಕ್ತಮನಸ್ಕನಾಗಿದ್ದೆ. ನಾನು ಪಠ್ಯಪುಸ್ತಕಗಳ ಅಥವಾ ಪಠ್ಯಕ್ರಮದ ಗುಲಾಮನಲ್ಲ: ಬದಲಾಗಿ ಅವುಗಳ ಒಡೆಯ ಎಂದು ನನಗೆ ಮೊದಲ ಬಾರಿಗೆ ಅರಿವಾಯಿತು. ಎಲ್ಲಕ್ಕಿಂತ ಮುಖ್ಯವಾಗಿ ಒಳ್ಳೆಯ ಶಿಕ್ಷಕನಾಗಬೇಕು ಎಂಬ ಹುಡುಕಾಟದಲ್ಲಿ ಶಿಕ್ಷಣದ ಉದ್ದೇಶವೇನು ಹಾಗೂ ಪಠ್ಯಕ್ರಮದ ಪಾತ್ರವೇನು ಎಂಬುದರ ಬಗ್ಗೆ ಹೆಚ್ಚು ನಿಖರವಾದ ತಿಳಿವಳಿಕೆ ಉಂಟಾದುದಲ್ಲದೆ ಎಲ್ಲ ಮಕ್ಕಳಿಗೂ ನ್ಯಾಯ ಒದಗಿಸಬೇಕು, ಸಾಮಾಜಿಕ ನ್ಯಾಯದ ಪರಿಪಾಲನೆ ಆಗಬೇಕು ಮತ್ತು ಶಿಕ್ಷಣದಿಂದ ಸಮಾಜದ ಗುಣಮಟ್ಟ ಸಮಗ್ರವಾಗಿ ಮೇಲಕ್ಕೇರಬೇಕು ಎಂಬ ತಮ್ಮ ನಂಬಿಕೆಗೆ ಹೆಚ್ಚಿನ ಹೊಳಪು ಹಾಗೂ ಅರ್ಥ ಸ್ಫುಟವಾಯಿತು ಎಂದು ಈ ಶಿಕ್ಷಕರು ಅಭಿಪ್ರಾಯಪಟ್ಟರು. ಪ್ರತಿಯೊಂದು ಮಗುವಿನಲ್ಲಿಯೂ ಕಲಿಯುವ ಸಾಮರ್ಥ್ಯವಿದೆ ಹಾಗೂ ತರಗತಿಯೊಳಗೆ ಎಲ್ಲ ವರ್ಗದ ಮಕ್ಕಳನ್ನು ಸಮಾನ ನೆಲೆಯಲ್ಲಿ ನಡೆಸಿಕೊಳ್ಳುವುದು ಯಾವುದೇ ಶಾಲೆಯ ಸಂಸ್ಕೃತಿಯನ್ನೂ ಅದು ನಂಬಿದ ಮೌಲ್ಯಗಳನ್ನೂ ತೋರಿಸುತ್ತದೆ ಎಂಬ ನಂಬಿಕೆಯನ್ನು ಶಿಕ್ಷಕರಲ್ಲಿ ಗಟ್ಟಿಗೊಳಿಸುವುದೇ ಈ ಕಾರ್ಯಾಗಾರಗಳು ನೀಡುವಂತಹ ಮಹತ್ವದ ಕೊಡುಗೆಯಾಗಿದೆ. ನಮ್ಮ ದೇಶದಲ್ಲಿ ಸಾಮಾನ್ಯವಾಗಿ ತುಂಬಾ ಪಾಂಡಿತ್ಯ ಹೊಂದಿದವರೂ ದೊಡ್ಡ ಶೈಕ್ಷಣಿಕ ಸಾಧನೆಗಳನ್ನು ಮಾಡಿದವರೂ ಶಿಕ್ಷಕ ವೃತ್ತಿ ಮಾಡಲು ಬಯಸದೇ ಇರುವುದು ವಿಷಾದನೀಯ. ಸಾಮಾನ್ಯ ಮಟ್ಟದ ಶೈಕ್ಷಣಿಕ ಸಾಧನೆಯುಳ್ಳವರು ಶಾಲಾ ಶಿಕ್ಷಕರಾಗುತ್ತಾರೆ; ಅದೂ ಕೂಡಾ ಅವರ ಮೊದಲ ಆಯ್ಕೆ ಅಲ್ಲದಿರುವುದೇ ಹೆಚ್ಚು. ಹೀಗಾಗಿ ಈ ಸಾಮಾನ್ಯ ಮಟ್ಟದ ವಿದ್ಯಾವಂತರು ಶಿಕ್ಷಕರಾದ ಮೇಲೆ ತಮ್ಮ ವೃತ್ತಿ ನೈಪುಣ್ಯವನ್ನು ಹೆಚ್ಚಿಸಿಕೊಳ್ಳುವುದಕ್ಕೆ ನಡೆಸುವ ಪ್ರಯತ್ನ, ಹೂಡುವ ಶ್ರಮ ನಿಜಕ್ಕೂ ಅದ್ಭುತವಾದದ್ದು. ಇವರ ಪರಿಣತಿ, ನೈಪುಣ್ಯಗಳನ್ನು ಇನ್ನಷ್ಟು ಬೆಳೆಸಲು ನಮ್ಮ ಶಿಕ್ಷಣ ಪದ್ಧತಿ ವಿಫಲವಾಗಿದೆ; ಅದಕ್ಕೆ ಅದರ ವಿಶಾಲ ಗಾತ್ರವೂ ಒಳಗಿನ ಸಂಕ್ಲಿಷ್ಟ ಸ್ವರೂಪವೂ ಕಾರಣ. ಗ್ರಾಮೀಣ ಶಿಕ್ಷಕರ ಪಾಡನ್ನು ಕೇಳುವವರು ಯಾರೂ ಇಲ್ಲ. ಅನೇಕರಿಗೆ ಇದನ್ನು ಎದುರಿಸುವುದು ಅಸಾಧ್ಯವಾಗುತ್ತದೆ; ಸ್ವಲ್ಪ ಹೆಚ್ಚು ಧೈರ್ಯ, ಸ್ಥೈರ್ಯ ಉಳ್ಳವರು ಉಳಿದುಕೊಳ್ಳುತ್ತಾರೆ. ಅವರು ತಮ್ಮ ನೈಪುಣ್ಯವನ್ನು ಹೆಚ್ಚಿಸಿಕೊಳ್ಳಲು ಔಪಚಾರಿಕ ವ್ಯವಸ್ಥೆಗಳಲ್ಲೂ ಅನೌಪಚಾರಿಕವಾದ ಸ್ವಯಂಪ್ರೇರಿತ ಗುಂಪುಗಳ ಮೂಲಕವೂ ಪ್ರಯತ್ನ ಪಡುತ್ತಾರೆ. ಶೈಕ್ಷಣಿಕ ವಿಷಯಗಳನ್ನೂ ಬೋಧನಾವಿಧಾನಕ್ಕೆ ಸಂಬಂಧಿಸಿದ ವಿಚಾರಗಳನ್ನೂ ಮಂಡಿಸಿ ಚರ್ಚಿಸಲು ಶಿಕ್ಷಕರ ಸ್ವಯಂಪ್ರೇರಿತ ವೇದಿಕೆಗಳ ರಚನೆ ಆಗಿದೆ. ಶಿಕ್ಷಕರು ತಮ್ಮ ರಜೆಗಳನ್ನು ಸ್ವಂತ ಇಚ್ಛೆಯಿಂದಲೇ ತ್ಯಾಗ

ಮಾಡಿ ಬೇಸಿಗೆ, ಚಳಿಗಾಲಗಳ ಸ–ನಿವಾಸ ತರಬೇತಿ, ಕಾರ್ಯಾಗಾರಗಳಿಗೆ ಹಾಜರಾಗುತ್ತಿದ್ದಾರೆ. ಸ್ವಯಂಪ್ರೇರಿತ ಶಿಬಿರಗಳಲ್ಲಿ ಹಾಗೂ ಶಿಕ್ಷಕರ ಕಲಿಕಾ ಕೇಂದ್ರ (ಟಿಎಲ್‌ಸಿ)ಗಳಲ್ಲಿ (ಇವುಗಳಿಗೆ ಕೆಲವು ಜಿಲ್ಲೆಗಳಲ್ಲಿ ಕಲಿಕಾ ಸಂಪನ್ಮೂಲ ಕೇಂದ್ರಗಳೆಂದೂ ಹೆಸರಿದೆ) ತಾವು ಪಡೆದ ಅನುಭವಗಳನ್ನು ಸಂತೋಷದಿಂದ ಸ್ಮರಿಸಿಕೊಂಡು ಈ ಕಲಿಕೆ ಅತ್ಯಂತ ಮೌಲ್ಯಯುತವಾದುದೆಂದು ಹೇಳುತ್ತಾರೆ. ಶಿಕ್ಷಕರು ತಮ್ಮ ಶಾಲಾ ತರಗತಿಗಳು ಮುಗಿದ ಮೇಲೆಯೂ ಇವುಗಳಲ್ಲಿ ಭಾಗವಹಿಸುತ್ತಾರೆ. ವೃತ್ತಿಪರವಾಗಿ ತಾವು ಬೆಳೆಯಬೇಕು ಎಂಬ ಶಿಕ್ಷಕರ ಬಯಕೆ ಈಚೆಗೆ ಎಲ್ಲಾ ವಯೋಮಾನದವರಲ್ಲೂ ಕಂಡುಬರುತ್ತಿದೆ. ಇಂಥ ಅನುಭವಗಳ ಪರಿಣಾಮವಾಗಿಯೇ ಶಿಕ್ಷಕರು ತಮ್ಮ ತರಗತಿಯ ಪಾಠದ ಸಫಲತೆ ಅಥವಾ ವೈಫಲ್ಯ–ಕೊರತೆಗಳ ಬಗ್ಗೆ ದಿನವೂ ಚಿಂತನೆ ನಡೆಸಿ ಬರೆದಿಡುವ ಹವ್ಯಾಸವನ್ನು ಬೆಳೆಸಿಕೊಂಡಿದ್ದಾರೆ. ಈಗ್ಗೆ ಹದಿನೈದು ವರ್ಷಗಳ ಹಿಂದೆ ಶಿಕ್ಷಕರಿಗೆ ದಿನಚರಿ ಬರೆಯುವ ಹವ್ಯಾಸವೇ ಇರಲಿಲ್ಲ; ಬೇರೆ ವಾಚನಗಳೂ ಕಡಿಮೆಯಿದ್ದವು, ಈಗಲಾದರೋ ಸ್ಥಿತಿ ಬದಲಾಗಿದೆ; ಹೆಚ್ಚು ಹೆಚ್ಚು ಶಿಕ್ಷಕರು ಈ ಅಭ್ಯಾಸವನ್ನು ರೂಢಿಸಿಕೊಂಡಿದ್ದಾರೆ.

ಬೇರೆ ರೀತಿಯ ಬದಲಾವಣೆಯ ಗಾಳಿಯೂ ಬೀಸುತ್ತಿದೆ. ರಾಜಸ್ಥಾನದಲ್ಲಿ ಊಳಿಗಮಾನ್ಯ ಪದ್ಧತಿ ಪ್ರಬಲವಾಗಿರುವ ಜಿಲ್ಲೆಗಳಲ್ಲಿ ಸ–ನಿವಾಸ ತರಬೇತಿ ಕಾರ್ಯಕ್ರಮಗಳಿಗೆ ಹಾಜರಾಗುವ ಶಿಕ್ಷಕಿಯರ ಸಂಖ್ಯೆ ನಿಧಾನವಾಗಿ ಹೆಚ್ಚುತ್ತಿದೆ. ಇದು ತಮ್ಮ ಶ್ರೇಯಸ್ಸಿನ ಕುರಿತಾಗಿ ಶಿಕ್ಷಕಿಯರಿಗೆ ಇರುವ ಬದ್ಧತೆಯಂತೆಯೇ ಕುಟುಂಬಗಳಲ್ಲಿನ ಲಿಂಗ ತಾರತಮ್ಯ ಮನೋಭಾವದಲ್ಲಿನ ಬದಲಾವಣೆಯನ್ನೂ ತೋರಿಸುತ್ತದೆ. 12ನೇ ತರಗತಿ ಮುಗಿಸಿ ಇಲಾಖೆಯನ್ನು ಸೇರಿದ ಕೆಲವು ಹಿರಿಯ ಶಿಕ್ಷಕರು ಪದವಿ ಮತ್ತು ಸ್ನಾತಕೋತ್ತರ ಪದವಿಗಳನ್ನು ಸಹ ಸೇವೆಯಲ್ಲಿದ್ದೇ ಪಡೆದುಕೊಂಡಿದ್ದಾರೆ. ತಂತ್ರಜ್ಞಾನದ ಅಭಿರುಚಿಯಿರುವ ಕಿರಿಯ ಶಿಕ್ಷಕರು ಕಲಿಕಾ ಕೇಂದ್ರಗಳಲ್ಲಿರುವ ಕಂಪ್ಯೂಟರ್‌ಗಳನ್ನು ಬಳಸಿ ತರಗತಿಗಳಿಗೆ ಉಪಯುಕ್ತವಾಗುವ ವಿಷಯಗಳನ್ನು ಸಂಗ್ರಹಿಸುತ್ತಾರೆ. ಕೆಲವರು ವೈಯಕ್ತಿಕ ಬಳಕೆಗಾಗಿ ಲ್ಯಾಪ್‌ಟಾಪ್‌ಗಳನ್ನು ಕೊಂಡಿದ್ದಾರೆ ಕೂಡಾ.

ಇತ್ತೀಚಿನ ವರ್ಷಗಳಲ್ಲಿ ಶಿಕ್ಷಕರಿಗೆ ವ್ಯಾಟ್ಸ್‌ಆ್ಯಪ್ ಗುಂಪುಗಳು ಶೈಕ್ಷಣಿಕ ಬೆಂಬಲದ ಪ್ರಮುಖ ಮೂಲಗಳಾಗಿವೆ. ಸ್ವಯಂಪ್ರೇರಿತ ಶಿಕ್ಷಕ ಕೇಂದ್ರಗಳಿಗೆ ಸುಮಾರು ಶೇಕಡ 15–20ರಷ್ಟು ಶಿಕ್ಷಕರು ಮಾತ್ರ ನಿಯಮಿತವಾಗಿ ಹೋಗುತ್ತಾರೆ. ಆದರೆ ಸ್ಥಳೀಯ ಬ್ಲಾಕ್ ಅಥವಾ ಜಿಲ್ಲಾ ವ್ಯಾಟ್ಸ್‌ಆ್ಯಪ್ ಗುಂಪುಗಳಲ್ಲಿ ಬಹು ಸಂಖ್ಯೆಯಲ್ಲಿ ಸದಸ್ಯರಾಗಿ ಇದ್ದಾರೆ. ಈ ಗುಂಪುಗಳಲ್ಲಿ ವಿಷಯಾಧಾರಿತ ಗುಂಪುಗಳೂ ಇದ್ದು ಸದಸ್ಯರು ತಮ್ಮ ಸಮಸ್ಯೆಗಳ ಬಗ್ಗೆ ಚರ್ಚಿಸುತ್ತಾರೆ. ಈ ಒಲವು ಇನ್ನೂ ದೊಡ್ಡದಾಗಿ ಬೆಳೆದಿಲ್ಲ. ಸಂಕೋಚ ಸ್ವಭಾವದ ಅಥವಾ ಆತ್ಮವಿಶ್ವಾಸ ಕಡಿಮೆ ಇರುವ ಶಿಕ್ಷಕರಿಗೆ ಈ ವೇದಿಕೆಯಿಂದ ಸಹಾಯವಾಗಿದೆ. ವಿಷಯದಲ್ಲಿ ಪರಿಣತಿ ಹೊಂದಿರುವವರು ಈ ಚರ್ಚೆಗಳಲ್ಲಿ ತೊಡಗುವುದರಿಂದ ಈ ವೇದಿಕೆ ಅತ್ಯಂತ ಪ್ರಸ್ತುತವೂ ಉಪಯುಕ್ತವೂ ಆಗಿದೆ. ಇಂಗ್ಲಿಷ್ ಭಾಷೆಗೆ ಸಂಬಂಧಿಸಿದಂತೆ ಎಲ್ಲ ಶಿಕ್ಷಕರಿಗೂ ಸಮಸ್ಯೆ ಇರುತ್ತದೆ. ಅವರು ಇದಕ್ಕೆ ಅಂತರ್ಜಾಲದಿಂದಲೂ ಸ್ಮಾರ್ಟ್‌ಫೋನ್ ಮೂಲಕವೂ ಪರಿಹಾರ ಕಂಡುಕೊಳ್ಳಬಹುದೆಂದು ಆಶಿಸುತ್ತಾರೆ.

# ಮಳೆಗಾಲದಲ್ಲಿ ಈ ಶಿಕ್ಷಕಿ ಸೊಂಟದ ಮಟ್ಟದ ನೀರನ್ನು ದಾಟಿ ಸರಿಯಾದ ಸಮಯಕ್ಕೆ ಶಾಲೆಗೆ ಬರುತ್ತಾರೆ

**ಮಧುಲಿಕಾ ತಪ್ಲಿಯಾಲ್**

ಪ್ರಾಥಮಿಕ ಶಾಲೆ, ಗಮ್‌ದಿದ್‌ಗಾಂವ್, ಬಟ್‌ವಾರಿ ಬ್ಲಾಕ್

ಉತ್ತರಕಾಶಿ ಜಿಲ್ಲೆ, ಉತ್ತರಾಖಂಡ್

ಗಮ್‌ದಿದ್‌ಗಾಂವ್ ಮುಖ್ಯರಸ್ತೆಯಿಂದ ಸುಮಾರು ಎರಡು ಕಿಲೋಮೀಟರ್ ದೂರದ ಬೆಟ್ಟದ ಮೇಲಿರುವ ಒಂದು ಹಳ್ಳಿ. ಮಳೆಯ ದಿನಗಳಲ್ಲಿ ಮೋಡಗಳು ಶಾಲಾ ಕಟ್ಟಡದ ಸೂರನ್ನು ಸವರಿಕೊಂಡೇ ಹೋಗುವುದನ್ನು ನೋಡಬಹುದು. ಆ ಹಳ್ಳಿಯ ಸುಮಾರು ಐನೂರರಷ್ಟು ಜನಸಂಖ್ಯೆ ಎರಡು ಮೂರು ಬಸ್ತಿ ಸಮೂಹಗಳಲ್ಲಿ ಹಂಚಿ ಹೋಗಿದೆ. ಆರರಿಂದ ಹನ್ನೊಂದರ ವಯೋಮಾನದ ಇಪ್ಪತ್ತು ಹುಡುಗರು ಮತ್ತು ಹತ್ತೊಂಬತ್ತು ಹುಡುಗಿಯರು ಗಮ್‌ದಿದ್‌ಗಾಂವ್ ಪ್ರಾಥಮಿಕ ಶಾಲೆಯಲ್ಲಿ ನೋಂದಾಯಿತರಾಗಿದ್ದಾರೆ. ಸುಮಾರು ಹತ್ತರಿಂದ ಹನ್ನೆರಡು ಮಕ್ಕಳು ಖಾಸಗಿ ಶಾಲೆಗೆ ಹೋಗುತ್ತಾರೆ. ಗಮ್‌ದಿದ್‌ಗಾಂವ್ ಪ್ರಾಥಮಿಕ ಶಾಲೆಯಲ್ಲಿ ಮೂರು ತರಗತಿ ಕೋಣೆಗಳು ಇವೆ. ಮಧುಲಿಕಾ ತಪ್ಲಿಯಾಲ್ ಅಲ್ಲಿನ ಮುಖ್ಯ ಶಿಕ್ಷಕಿ. ಪವಿತ್ರಾ ರಾವತ್ ಅವರಿಗೆ ಸಹಾಯಕಿಯಾಗಿದ್ದಾರೆ. ಈ ಇಬ್ಬರು ಮಹಿಳೆಯರು ಎಲ್ಲ ತರಗತಿಗಳಿಗೂ ಬೋಧಿಸುತ್ತಿದ್ದು ವಿವಿಧ ವಿಷಯಗಳನ್ನು ತಮ್ಮೊಳಗೆ ಹಂಚಿಕೊಂಡಿದ್ದಾರೆ.

ಮಧುಲಿಕಾ ಹಿಂದಿ ಭಾಷೆಯಲ್ಲಿ ಎಂ.ಎ. ಮುಗಿಸಿದ್ದು ಶಿಕ್ಷಕ ತರಬೇತಿಯನ್ನೂ ಪಡೆದು ಬಿ.ಟಿ.ಸಿ. (ಬೇಸಿಕ್ ಟೀಚಿಂಗ್ ಸರ್ಟಿಫಿಕೇಟ್) ಹೊಂದಿದ್ದಾರೆ. ಅವರು ಭಟ್ವಾರಿ ಬ್ಲಾಕ್‌ನಲ್ಲಿಯೇ ಮೂಷಿಕ್‌ಸೌರ್‌ನ ಪ್ರಾಥಮಿಕ ಶಾಲೆಯಲ್ಲಿ 1993ರಲ್ಲಿ ಸೇವೆ ಪ್ರಾರಂಭಿಸಿದರು. ಅಲ್ಲಿ ಅವರು ಹದಿಮೂರು ವರ್ಷ ಸೇವೆಯಲ್ಲಿದ್ದು ನಂತರ ಗಮ್‌ದಿದ್‌ಗಾಂವ್ ಶಾಲೆಗೆ ಬಂದರು. ಇಲ್ಲಿ ಹನ್ನೊಂದು ವರ್ಷಗಳಿಂದ ಇದ್ದಾರೆ. ಮೂಷಿಕ್‌ಸೌರ್ ಶಾಲೆ ಈಗ ಒಂದು ಮಾದರಿ ಶಾಲೆ ಎನಿಸಿರುವುದರ ಹಿಂದೆ ಮಧುಲಿಕಾ ಅವರ ಶ್ರಮದ ಹೆಜ್ಜೆ ಗುರುತುಗಳನ್ನು ಕಾಣಬಹುದು. ಗಮ್‌ದಿದ್‌ಗಾಂವ್‌ನಲ್ಲಿ ಅವರು ಸಮುದಾಯದೊಡನೆಯೂ ಶಾಲಾ ಉಸ್ತುವಾರಿ ಸಮಿತಿಯೊಡನೆಯೂ ಉತ್ತಮ ಬಾಂಧವ್ಯವನ್ನು ಸಾಧಿಸಿದ್ದಾರೆ. ಶಾಲಾ ಉಸ್ತುವಾರಿ ಸಮಿತಿಯ ಅಧ್ಯಕ್ಷ ಶರದ್ ಸಿಂಗ್ ನೇಗಿ ಅವರು ಶಾಲೆಯ ಅಭಿವೃದ್ಧಿ ಬಗ್ಗೆ ಕಾಳಜಿ ಹೊಂದಿದ್ದು ಹೊಲದಲ್ಲಿ ಕೆಲಸವಿಲ್ಲದ ವೇಳೆಯಲ್ಲಿ ಶಾಲೆಯಲ್ಲಿ ಇರುತ್ತಾರೆ. ಮಕ್ಕಳಿಗೆ ಕಂಪ್ಯೂಟರ್‌ನ ಪರಿಚಯವಾಗಬೇಕೆಂಬ ಉದ್ದೇಶದಿಂದ ಗೂಂಜ್‌ನ ಸರಕಾರೇತರ ಸೇವಾ ಸಂಸ್ಥೆಯಿಂದ ಒಂದು ಡೆಸ್ಕ್‌ಟಾಪ್ ಕಂಪ್ಯೂಟರ್ ದೇಣಿಗೆಯಾಗಿ ಕೊಡಿಸಿದರು. ಅಲ್ಲದೆ ನಾಲ್ಕು ಹಾಗೂ ಐದನೇ ತರಗತಿ ಮಕ್ಕಳಿಗೆ ಕಂಪ್ಯೂಟರ್‌ನ ಮೂಲ ಪಾಠಗಳನ್ನು ಕಲಿಸಲು ಶಾಲಾ ಉಸ್ತುವಾರಿ ಸಮಿತಿಯ ವತಿಯಿಂದ ಊರಿನ ಒಬ್ಬ ಯುವ ಸ್ವಯಂಸೇವಕನನ್ನು ನಿಯೋಜಿಸಿದರು. ಈ ಕೊಡುಗೆಯ ಮೌಲ್ಯದ ವಿಷಯ ಏನೇ ಇರಲಿ– ತಮ್ಮ ಹಳ್ಳಿಯ ಮಕ್ಕಳಿಗೆ

ಕಲಿಕೆಯ ಆಧುನಿಕ ಸೌಲಭ್ಯಗಳನ್ನು ಕೊಡಿಸಬೇಕೆಂಬ ಶಾಲಾ ಉಸ್ತುವಾರಿ ಸಮಿತಿಯ ಕಳಕಳಿ ಮೆಚ್ಚತಕ್ಕದ್ದಾಗಿದೆ.

ಮಧುಲಿಕಾ ಅವರು ಗಳಿಸಿರುವ ಈ ಬೆಂಬಲ ಅವರು ಆ ಊರಿನ ಮಕ್ಕಳ ವಿದ್ಯಾಭ್ಯಾಸದ ಬಗ್ಗೆ ಹೊಂದಿರುವ ಬದ್ಧತೆಗೆ ಜನ ತೋರಿಸಿರುವ ಒಂದು ಬಗೆಯ ಕೃತಜ್ಞತೆಯಾಗಿದೆ. ಮಧುಲಿಕಾ ಅವರ ವಾಸ ದೂರದ ಕಚ್ಚೇದೇವಿ ಎಂಬ ಊರಿನಲ್ಲಿ. ಅವರು ಮುಂಜಾನೆ ನಾಲ್ಕಕ್ಕೇ ಎದ್ದು ಮನೆಯವರಿಗೆಲ್ಲ ಅಡುಗೆ ಮಾಡಿಟ್ಟು ಆರೂಮುಕ್ಕಾಲರ ವೇಳೆಗೆ ಬಸ್ ತಂಗುದಾಣದಲ್ಲಿ ಇರುತ್ತಾರೆ. ಬಸ್ ಅವರನ್ನು ಗಮ್‌ದಿದ್‌ಗಾಂವ್‌ನ ಹತ್ತಿರದ ತಂಗುದಾಣದಲ್ಲಿ ಇಳಿಸಿ ಹೋಗುತ್ತದೆ. ಅಲ್ಲಿ ಅವರು ಆಟೊರಿಕ್ಷಾ ಹಿಡಿದು ಗಮ್‌ದಿದ್‌ಗಾಂವ್ ಬೆಟ್ಟದ ತಪ್ಪಲಿಗೆ ಬರುತ್ತಾರೆ. ವಾಹನ ಹೋಗುವ ರಸ್ತೆ ಅಲ್ಲಿ ಕೊನೆಗೊಳ್ಳುತ್ತದೆ. ಈ ಆಟೊ ಪ್ರಯಾಣಕ್ಕೆ ಅವರು ತಿಂಗಳಿಗೆ ಎರಡು ಸಾವಿರ ರೂಪಾಯಿ ಖರ್ಚು ಮಾಡುತ್ತಾರೆ. ತಪ್ಪಲಿನಿಂದ ಬೆಟ್ಟವನ್ನೇರಿ ಎರಡು ಕಿಲೋಮೀಟರ್ ನಡೆದು ಹೋಗಬೇಕು. ಅದು ಹಳ್ಳ–ಕೊಳ್ಳಗಳ ದಾರಿ. ಈ ಬೆಟ್ಟದ ದಾರಿಯ ಪಯಣದ ಕಷ್ಟ ಅನುಭವಿಸಿದವರಿಗಷ್ಟೇ ಗೊತ್ತು. ಭರ್ಜರಿ ಮಳೆ ಬಂದರೆ ಕೆಲವೊಮ್ಮೆ ಅವರು ಸೊಂಟಮಟ್ಟದ ನೀರು ಹರಿಯುವ ಹಳ್ಳವನ್ನು ದಾಟಿ ಹೋಗಬೇಕು. ಅಂಥ ಸಂದರ್ಭದಲ್ಲಿ ಅವರು ಮರದ ಒಣ ಕೊಂಬೆಯನ್ನು ಹಿಡಿದು ಊರುಗೋಲಾಗಿ ಬಳಸಿ ನೀರನ್ನು ದಾಟುತ್ತಾರೆ. ಬೆಳಿಗ್ಗೆ 7.45ರ ವೇಳೆಗೆ ಮಧುಲಿಕಾ ಶಾಲೆಯಲ್ಲಿ ಇರುತ್ತಾರೆ. ಮಳೆಯೋ ಮತ್ತೊಂದೋ ಕಾರಣಕ್ಕೆ ಅವರು ಎಂದೂ ಶಾಲೆ ತಪ್ಪಿಸಿಕೊಂಡದ್ದು ಇಲ್ಲ. ಆದರೆ ಅವರು ಸಮುದಾಯಕ್ಕೆ ಪ್ರೀತಿಪಾತ್ರರಾದುದಕ್ಕೆ ಕಾರಣ ಇದೊಂದೇ ಅಲ್ಲ.

ಮಧುಲಿಕಾ ವಿನಯಶೀಲೆ. "ನೀವು ಹೇಗೆ ಇಷ್ಟು ಒಳ್ಳೆಯ ಶಿಕ್ಷಕಿ ಆದಿರಿ?" ಎಂದು ಯಾರಾದರೂ ಅವರನ್ನು ಸಲಿಗೆಯಿಂದ ಕೇಳಿದರೆ ಆ ಹೊಗಳಿಕೆಯನ್ನು ಬದಿಗೆ ಸರಿಸುತ್ತಾರೆ. "ನಾನು ವಿಶೇಷವಾದುದೇನನ್ನೂ ಮಾಡುತ್ತಿಲ್ಲ" ಎಂದಷ್ಟೆ ಉತ್ತರಿಸುತ್ತಾರೆ. ಅವರು ತರಗತಿಯಲ್ಲಿ ಪಾಠ ಮಾಡುವುದನ್ನು ನೋಡಿದವರಿಗೆ ಅವರು ಪ್ರತಿಯೊಂದು ಮಗುವಿನ ಕುರಿತೂ ಕಾಳಜಿ ವಹಿಸುವುದು ಕಾಣಿಸುತ್ತದೆ. ಕಲಿಸುವುದರಲ್ಲಿ ತುಂಬಾ ಸಮರ್ಥರು ಹಾಗೂ ಪರಿಣತರು ಎಂಬುದು ಕೂಡಲೇ ಮನವರಿಕೆಯಾಗುತ್ತದೆ. ತರಗತಿಯಲ್ಲಿ ಸುತ್ತಾಡುತ್ತ ಪ್ರತಿ ಮಗುವನ್ನೂ ಗಮನಿಸುತ್ತ ಇರುತ್ತಾರೆ. ಅವರ ಏಕಾಗ್ರತೆಯೂ ಚೈತನ್ಯವೂ ಅಸದಳವಾದದ್ದು. ತರಗತಿಯಲ್ಲಿ ಮಕ್ಕಳು ನಿರಾಳವಾಗಿ ಇರುತ್ತಾರೆ. ಆ ಶಾಲೆಯಲ್ಲಿ ತುಂಬಾ ಮಳೆಯ ದಿನವೂ ಬೆಳಗಿನ ಪ್ರಾರ್ಥನಾ ಸಭೆಯಲ್ಲಿ ಒಟ್ಟು 39ರಲ್ಲಿ 36 ಮಕ್ಕಳು ಹಾಜರಿರುತ್ತಾರೆ. ಆ ಮಕ್ಕಳಿಗೆ ಶಾಲೆಯೆಂದರೆ ಹಬ್ಬವೇ; ಅವರೆಂದೂ ಅದನ್ನು ತಪ್ಪಿಸಿಕೊಳ್ಳಲಾರರು. ಈ ಮಕ್ಕಳಲ್ಲಿ ಹಲವರು ಸೋದರ ಸಂಬಂಧಿಗಳು; ಇದೂ ಕೂಡಾ ತಮ್ಮ ಶಾಲೆಯ ಹಾಜರಿ ಜಾಸ್ತಿ ಇರಲು ಕಾರಣ ಎಂದು ಮಧುಲಿಕಾ ಭಾವಿಸುತ್ತಾರೆ. ಆಂಧ್ರಪ್ರದೇಶದ ಮದನಪಲ್ಲಿಯ ರಿಷಿವ್ಯಾಲಿ ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನ್ ರಿಸೋರ್ಸಸ್ ಅಭಿವೃದ್ಧಿಪಡಿಸಿದ ಬಹು ವರ್ಗದ ಹಾಗೂ ಬಹು ಹಂತದ ಬೋಧನ ಪದ್ಧತಿಯನ್ನು ನೋಡಿ ಕಲಿತು ಬರಲು

ಉತ್ತರಾಖಂಡ ಸರ್ಕಾರವು 2010ರಲ್ಲಿ ಪ್ರತಿ ಜಿಲ್ಲೆಯಿಂದಲೂ 20 ಶಿಕ್ಷಕರನ್ನು ಆಯ್ಕೆಮಾಡಿ ಕಳಿಸಿತು. ಚಟುವಟಿಕೆ ಆಧರಿತವಾದ ಈ ಕಲಿಕಾ ಪದ್ಧತಿಯು ರಾಜ್ಯದಲ್ಲಿ ನಿಧಾನವಾಗಿಯಾದರೂ ಬೇರೂರಿ ಪ್ರಾಥಮಿಕ ಶಿಕ್ಷಣವು ಹೆಚ್ಚು ಅರ್ಥಪೂರ್ಣವಾದೀತೆಂಬ ನಿರೀಕ್ಷೆ ಸರ್ಕಾರಕ್ಕೆ ಇತ್ತು; ಆದರೆ ಅದು ಬಹುತೇಕ ಹುಸಿಯಾಯಿತು. ರಿಷಿವ್ಯಾಲಿಗೆ ಹೋಗಿ ಬಂದವರಲ್ಲಿ ಬೆರಳೆಣಿಕೆಯ ಮಂದಿ ಮಾತ್ರ ಆ ಪದ್ಧತಿಯನ್ನು ಅರ್ಥಮಾಡಿಕೊಂಡು ತಮ್ಮ ತರಗತಿಗಳಲ್ಲಿ ಜಾರಿಗೆ ತಂದರು. ಅಂತಹವರಲ್ಲಿ ಮಧುಲಿಕಾ ಒಬ್ಬರು. ಮದನಪಲ್ಲಿಯ ರಿಷಿವ್ಯಾಲಿಯಲ್ಲಿ ಕಲಿತ ವಿಷಯ ತಮ್ಮ ಮೇಲೆ ಗಾಢವಾದ ಪರಿಣಾಮ ಉಂಟುಮಾಡಿತು ಎಂದು ಅವರು ಹೇಳುತ್ತಾರೆ. ಹಿಂದೆ ತಾವು ಎಷ್ಟೇ ಪರಿಶ್ರಮ ಪಟ್ಟರೂ ತರಗತಿಯಲ್ಲಿ ಕೆಲವು ಮಕ್ಕಳು ಪಾಠದಲ್ಲಿ ಆಸಕ್ತಿ ಕಳೆದುಕೊಂಡು ಅನ್ಯಮನಸ್ಕರಾಗಿ ಕಲಿಕೆಯಲ್ಲಿ ಹಿಂದೆ ಬೀಳುತ್ತಿದ್ದರು. ರಿಷಿವ್ಯಾಲಿಯಿಂದ ಬಂದ ಮೇಲೆ ಹೊಸ ಪದ್ಧತಿಯನ್ನು ಅನುಸರಿಸತೊಡಗಿದರು. ಮಕ್ಕಳು ನಿಧಾನವಾಗಿ ಪಾಠದಲ್ಲಿ ಆಸಕ್ತರಾಗಿ ತಾವಾಗಿಯೇ ಕಲಿಯತೊಡಗಿದರು. ಇಡೀ ತರಗತಿ ಹೀಗೆ ಕಲಿಕೆಯಲ್ಲಿ ತೊಡಗಿದುದನ್ನು ಮಧುಲಿಕಾ ಗಮನಿಸಿದರು. ಸಹಪಾಠಿ ಕಲಿಯುವುದನ್ನು ನೋಡಿ ಪಕ್ಕದವನೂ ಕಲಿಯಲು ಪ್ರಾರಂಭಿಸಿದ ವಿದ್ಯಮಾನವನ್ನು ಅವರು ಗುರುತಿಸಿದರು. ಮಕ್ಕಳು ಸ್ವತಂತ್ರವಾಗಿ ಕಲಿಯುವುದಕ್ಕೆ ಈ ಪದ್ಧತಿ ಪ್ರೇರಣೆ ನೀಡುವುದೆಂಬುದು ಅವರ ಅಭಿಪ್ರಾಯವಾಗಿದೆ. ಈ ಪದ್ಧತಿಯನ್ನು ಪ್ರಯೋಗಕ್ಕೆ ಒಡ್ಡಲು ಹೆಚ್ಚಿನ ಪರಿಣತಿ ಹಾಗೂ ಪರಿಶ್ರಮ ಅಗತ್ಯ ಎಂಬುದನ್ನು ಅವರು ಒಪ್ಪಿಕೊಳ್ಳುತ್ತಾರೆ; ಮುಖ್ಯವಾಗಿ ಶಿಕ್ಷಕರ ದೃಷ್ಟಿಯೂ ಬುದ್ಧಿಯೂ ಚುರುಕಾಗಿರಬೇಕು, ಗುಂಪಿನಿಂದ ಗುಂಪಿಗೆ ಚುರುಕಾಗಿ ಸಾಗಿ ಕೆಲಸ ಮಾಡಿಸುವ ಪಟುತ್ವ ಇರಬೇಕಾಗುತ್ತದೆ.

ಗಮ್‌ದಿದ್‌ಗಾಂವ್‌ನಂತಹ ದುರ್ಗಮ ಹಳ್ಳಿಯ ಮೊದಲನೇ ಪೀಳಿಗೆಯ ವಿದ್ಯಾರ್ಥಿಗಳ ನೈಜ ಕಲಿಕೆಯ ಸೂಚನೆಗಳು ಹೊರಗೆ ಕಾಣಿಸಿಕೊಳ್ಳುವುದು ಪ್ರಾಸಂಗಿಕವಾಗಿ ಮಾತ್ರ. ಅವರು ತಮ್ಮ ಶಿಕ್ಷಕರೊಂದಿಗೆ ವಿಷಯಗಳನ್ನು ಮುಕ್ತವಾಗಿ ಚರ್ಚಿಸುವ ಸಾಮರ್ಥ್ಯವನ್ನು ಗಳಿಸಿಕೊಳ್ಳುವುದೇ ಈ ಸೂಚನೆಯ ಇನ್ನೊಂದು ಸ್ಪಷ್ಟವಾದ ರೂಪವಾಗಿದೆ. ಅದನ್ನು ನಾವು ಅಲ್ಲಿ ನೋಡಿದೆವು. ಆ ಶಾಲೆಯ ಅಂಗಳದಲ್ಲಿ ಒಂದು ಕರಿಹಲಗೆ ಇದ್ದು ಅದರಲ್ಲಿ "ದಿನದ ವಾರ್ತೆ" ಬರೆಯುತ್ತಾರೆ. ತಮಗೆ ಮಹತ್ವದ್ದು ಎಂದು ಅನಿಸಿದ ಸುದ್ದಿಗಳನ್ನುನಾಲ್ಕು ಹಾಗೂ ಐದನೇ ತರಗತಿಯ ವಿದ್ಯಾರ್ಥಿಗಳು ಅಲ್ಲಿ ಬರೆಯುತ್ತಾರೆ. ಮಳೆ ಸುರಿಯುತ್ತಿದ್ದ ಆ ದಿನ ಆ ಹಲಗೆಯಲ್ಲಿ ಮಕ್ಕಳು ಹೀಗೆ ಬರೆದಿದ್ದರು, "ಈ ದಿನ ಶಿವರಾಜನ ತಂದೆಯವರು ಡೆಹ್ರಾಡೂನ್‌ನಿಂದ ಬರುತ್ತಾರೆ." ಆ ಗ್ರಾಮದವರಿಗೆ ಆ ವಾರ್ತೆ ಮಹತ್ವದ್ದೇ ಸರಿ. ಅದನ್ನು ಮಕ್ಕಳು ಸರಿಯಾಗಿಯೇ ಆರಿಸಿ ಬರೆದಿದ್ದರು. ಇದರ ಕೆಳಗೆ ಇನ್ನೊಂದು ಸಾಲಿನಲ್ಲಿ ಇನ್ನೊಬ್ಬ ವಿದ್ಯಾರ್ಥಿ ತನ್ನ ಕೈಬರಹದಲ್ಲಿ ಹೀಗೆ ಬರೆದಿದ್ದ: "ಪಂಕಜ್‌ನ ಮುತ್ತಜ್ಜಿ ತುಂಬಾ ಅಸ್ವಸ್ಥರಾಗಿದ್ದಾರೆ." ಇವೆರಡೂ ವಿಷಯಗಳು ಆ ಊರಿನ ಜನರಿಗೆ ಸುದ್ದಿ ಎಂಬುದರ ಜೊತೆಗೆ ಅವರಲ್ಲಿ ಇರುವ ಪರಸ್ಪರ ಕಳಕಳಿಯನ್ನೂ ಸೂಚಿಸುತ್ತದೆ. ಮಕ್ಕಳು ಕರಿಹಲಗೆಯಲ್ಲಿ ಬರೆಯುವ ವಿಚಾರಗಳು ಅವರ ಅಭಿವ್ಯಕ್ತಿಯ ಸಾಮರ್ಥ್ಯವನ್ನು

ತೋರಿಸುತ್ತವೆ ಎಂದು ಮಧುಲಿಕಾ ಭಾವಿಸುತ್ತಾರೆ. ಅಲ್ಲದೆ ಶಾಲೆಯು ಮಕ್ಕಳಲ್ಲಿ ಯಾವ ರೀತಿಯ ಮೌಲ್ಯಗಳನ್ನು ಪಡಿಮೂಡಿಸುತ್ತಿದೆ ಎಂಬುದರ ಸೂಚಕವೂ ಆಗಿದೆಯೆಂದು ಅಭಿಪ್ರಾಯ ಪಡುತ್ತಾರೆ. ಫೌಂಡೇಷನ್ ಉತ್ತರಕಾಶಿಯಲ್ಲಿನ ಜಿಲ್ಲಾ ಸಂಸ್ಥೆಯ ಸದಸ್ಯರು 2005ರಿಂದಲೂ ಜಿಲ್ಲೆಯ ಶಿಕ್ಷಕರೊಂದಿಗೆ ದೀರ್ಘಕಾಲದ ಸಂಬಂಧವನ್ನು ಹೊಂದಿದ್ದಾರೆ. ಅಂದು ಅಲ್ಲಿನ ಒಟ್ಟು ಪ್ರಾಥಮಿಕ ಶಾಲೆಗಳಲ್ಲಿ ಅರ್ಧದಷ್ಟು ಶಾಲೆಗಳು ಕಲಿಕೆ ಖಾತರಿ (ಎಲ್‌ಜಿಪಿ) ಕಾರ್ಯಕ್ರಮದಲ್ಲಿ ಭಾಗವಹಿಸಿದ್ದವು. ಫೌಂಡೇಷನ್‌ನ ಸದಸ್ಯರು ಅಂದಿನಿಂದಲೂ ಗಮ್‌ದಿದ್‌ಗಾಂವ್ ಪ್ರಾಥಮಿಕ ಶಾಲೆಯೊಂದಿಗೂ ನಿಕಟ ಸಂಬಂಧವನ್ನು ಬೆಳೆಸಿಕೊಂಡಿದ್ದರು. ಮಧುಲಿಕಾ ಅವರು ಸಾಮರ್ಥ್ಯ ನಿರ್ಮಾಣದ ಕಾರ್ಯಾಗಾರಗಳು ಹಾಗೂ ಇತರೇ ಶಿಕ್ಷಕರ ಕಲಿಕಾ ಕಾರ್ಯಕ್ರಮಗಳಲ್ಲಿ ಸಕ್ರಿಯ ಪಾತ್ರ ವಹಿಸುತ್ತಿದ್ದಾರೆ. ಗೃಹಕೃತ್ಯದ ಜವಾಬ್ದಾರಿಗಳಿದ್ದರೂ ಬಿಡುವು ಮಾಡಿಕೊಂಡು ಶಾಲೆ ಮುಗಿದ ಅನಂತರ ಸಭೆಗಳಲ್ಲಿ ಭಾಗವಹಿಸುತ್ತಾರೆ. ಈ ಚರ್ಚೆ ಹಾಗೂ ಸಂವಾದಗಳಿಂದ ತಮ್ಮ ಸಾಮರ್ಥ್ಯ ಮತ್ತಷ್ಟು ಹೆಚ್ಚಿತು ಎಂದು ಅವರು ಹೇಳುತ್ತಾರೆ.

ಒಳ್ಳೆಯ ಕೆಲಸ ಮಾಡಿದವರಿಗೆ ಶಿಕ್ಷಣ ಇಲಾಖೆಯಲ್ಲಿ ಮನ್ನಣೆ ದೊರೆಯುವುದಕ್ಕೆ ಪರಿಶ್ರಮದೊಂದಿಗೆ ಅದೃಷ್ಟವೂ ಬೇಕು ಎಂಬ ಮಾತು ಇದೆ. ಮಧುಲಿಕಾ ಅವರು ಮೂಷಿಕ್‌ಸೌರ್‌ನಲ್ಲಿ ಮಾಡಿದ ಕೆಲಸವೇ ಅವರಿಗೆ ರಿಷಿವ್ಯಾಲಿ ತರಬೇತಿ ಕಾರ್ಯಕ್ರಮಕ್ಕೆ ಹೋಗಲು ಅವಕಾಶ ತಂದುಕೊಟ್ಟಿತು. ಈಗ ಗಮ್‌ದಿದ್‌ಗಾಂವ್‌ನ ಪ್ರಾಥಮಿಕ ಶಾಲೆಯ ಮಕ್ಕಳು ಉತ್ತಮ ಶಿಕ್ಷಣವನ್ನು ಪಡೆಯುತ್ತಿದ್ದಾರೆಂಬ ಹೆಸರನ್ನು ಅವರು ತಂದುಕೊಡುತ್ತಿದ್ದಾರೆ. ಆ ಶಾಲೆಯಲ್ಲಿ ಮಧುಲಿಕಾ ಅವರು ಸಹೋದ್ಯೋಗಿ ಪವಿತ್ರಾ ಜೊತೆಗೆ ಮಾಡುತ್ತಿರುವ ಕೆಲಸಗಳನ್ನು ಸ್ವತಃ ನೋಡಿ ತಿಳಿಯಲು ಉಪಸಹಾಯಕ ಬ್ಲಾಕ್ ಶಿಕ್ಷಣಾಧಿಕಾರಿ ಗಮ್‌ದಿದ್‌ಗಾಂವ್‌ಗೆ ಬಂದಿದ್ದಾರೆ. ಆ ಶಾಲೆಗೆ ಹಿಂದೆಂದೂ ಯಾವ ಶಿಕ್ಷಣಾಧಿಕಾರಿಯೂ ಭೇಟಿ ನೀಡಿರಲಿಲ್ಲವಾದ್ದರಿಂದ ಆ ಘಟನೆ ಆ ಕುಗ್ರಾಮದ ಜನರಿಗೆ ಎಂದೂ ಮರೆಯಲಾಗದ ವಿಷಯವಾಗಿ ಪರಿಣಮಿಸಿತು.

---

## "ನಾನು ಪಠ್ಯಕ್ರಮ ಮತ್ತು ಪಠ್ಯಪುಸ್ತಕದ ಯಜಮಾನಿ"

**ಶಿಖಾ ಗಂಗ್ವಾರ್**

ಸರ್ಕಾರಿ ಪ್ರಾಥಮಿಕ ಶಾಲೆ, ಮಹಾರಾಜಪುರ ಬ್ಲಾಕ್–ರುದ್ರಪುರ
ಉಧಮ್‌ಸಿಂಗ್ ನಗರ ಜಿಲ್ಲೆ, ಉತ್ತರಾಖಂಡ್

---

ಶಿಖಾ ಗಂಗ್ವಾರ್ ಅವರು ಶಿಕ್ಷಕರಾಗಿ ತಾವು ಸಾಗಿದ ಹಾದಿಯ ಬಗ್ಗೆ ಬಿಚ್ಚು ಮನಸ್ಸಿನಿಂದ ಮಾತನಾಡುತ್ತಾರೆ. ಅವರು ಹೊರಟದ್ದು ಎಲ್ಲಿಂದ ಮುಂದೆ ಏನು ಸಾಧಿಸಲು ಶ್ರಮಿಸುತ್ತಿದ್ದಾರೆ ಎಂಬುದನ್ನು ಹಂಚಿಕೊಂಡರು. ವೃತ್ತಿ ಸಂಬಂಧವಾಗಿ ಹಲವು ವರ್ಷಗಳಿಂದ ತಿಳಿದಿರುವ ವ್ಯಕ್ತಿಯೊಬ್ಬರು ತನ್ನೊಡನೆ ಇದ್ದರು ಎಂಬುದರಿಂದ ಶಿಖಾ ನನ್ನೊಡನೆ ಶಿಕ್ಷಕಿಯಾಗಿ ತಮ್ಮ ಯಾತ್ರೆಯ ಬಗ್ಗೆ ಬಿಚ್ಚು ಮನಸ್ಸಿನಿಂದ ಮಾತನಾಡಿದರು

ಎಂದು ಯಾರಾದರೂ ಹೇಳಬಹುದೇನೊ; ಆದರೆ ಅವರು ಸ್ವಭಾವತಃ ಬಿಚ್ಚು ಮನಸ್ಸಿನವರು, ನಾನೊಬ್ಬನೇ ಬಂದು ಅವರನ್ನು ಭೇಟಿಯಾಗಿದ್ದರೂ ಅವರು ಹಾಗೆಯೇ ಮಾತನಾಡುತ್ತಿದ್ದರು ಎಂದು ನಮ್ಮ ಮಾತುಕತೆಯ ಕೊನೆಗೆ ನನಗೆ ಅನಿಸಿತು.

ಶಿಖಾ ಎಂ.ಎ. ಹಾಗೂ ಬಿ.ಎಡ್. ಮುಗಿಸಿದ್ದಾರೆ. ಅವರ ಗಂಡ 1997ರಲ್ಲಿ ದಿನೇಶ್‌ಪುರದ ಒಂದು ಮಾಧ್ಯಮಿಕ ಶಾಲೆಯಲ್ಲಿ ಗಣಿತ ಶಿಕ್ಷಕರು. ಅವರ ತಾಯಿ, ಶಿಖಾರ ಅತ್ತೆ ಅನಾರೋಗ್ಯ ಪೀಡಿತರಾದುದರಿಂದ ಅವರ ಆರೈಕೆಗಾಗಿ ಶಿಖಾ ಅವರು ರುದ್ರಪುರದಲ್ಲೇ ನೆಲೆಸಬೇಕಾಯಿತು. ಅವರು ಅಲ್ಲೇ ಒಂದು ಖಾಸಗಿ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕಿಯಾಗಿ ಕೆಲಸ ಮಾಡತೊಡಗಿದರು. ಶಿಕ್ಷಕರ ಕರ್ತವ್ಯ ಪಠ್ಯಕ್ರಮವನ್ನು ಯಾಂತ್ರಿಕವಾಗಿ ಮುಗಿಸುವುದು ಎಂಬ ಕಲ್ಪನೆ ತಮ್ಮಲ್ಲಿ ಅನೇಕ ವರ್ಷಗಳ ಕಾಲ ಇತ್ತು; ತಾನು ಪಠ್ಯಪುಸ್ತಕದ ಬಂಧಿಯಾಗಿದ್ದೆ ಎಂದು ಅವರು ಒಪ್ಪಿಕೊಳ್ಳುತ್ತಾರೆ. 2006ರಲ್ಲಿ ವಿಶಿಷ್ಟ ಬಿಟಿಸಿ (ಬೇಸಿಕ್ ಟೀಚಿಂಗ್ ಸರ್ಟಿಫಿಕೇಟ್– ಬಿ.ಟಿ.ಸಿ.) ಮಾಡಿಕೊಂಡು ಶಿಕ್ಷಣ ಇಲಾಖೆಯನ್ನು ಸೇರಿದರು. ಮೂರು ವರ್ಷಗಳ ನಂತರ ಮಹಾರಾಜಪುರದ ಈ ಪ್ರಾಥಮಿಕ ಶಾಲೆಗೆ ವರ್ಗಾವಣೆಯಾಗಿ ಬಂದರು. ರುದ್ರಪುರದಿಂದ ಮಹಾರಾಜಪುರ ಸಾಕಷ್ಟು ದೂರವಿದೆ. ಅವರು ಬಸ್ಸಿನಲ್ಲಿ ಹೋಗಿ ಕೊನೆಯ ಎರಡು ಕಿ.ಮೀ.ಗಳನ್ನು ಕಾಲ್ನಡಿಗೆಯಿಂದ ಕ್ರಮಿಸಬೇಕಿತ್ತು. ಇದು ಬಲು ತ್ರಾಸದಾಯಕವೆಂದು ಕಂಡುಕೊಂಡ ಶಿಖಾ ಅವರು ತಮ್ಮ ನಲವತ್ತನೇ ವಯಸ್ಸಿನಲ್ಲಿ ಸ್ಕೂಟಿ ಓಡಿಸುವುದನ್ನು ಕಲಿತು ಒಂದು ಸ್ಕೂಟರ್ ಖರೀದಿ ಮಾಡಿದರು.

ಮಹಾರಾಜಪುರವು ಸುಮಾರು ಒಂದು ಸಾವಿರಕ್ಕೂ ಹೆಚ್ಚು ಕುಟುಂಬಗಳು ವಾಸಿಸುತ್ತಿರುವ ಒಂದು ದೊಡ್ಡ ಹಳ್ಳಿ. ಎಲ್ಲ ಊರುಗಳಂತೆ ಇಲ್ಲಿಯೂ ಶ್ರೀಮಂತರು ಮಕ್ಕಳನ್ನು ಖಾಸಗಿ ಶಾಲೆಗೂ ಬಡವರು ಸರ್ಕಾರಿ ಶಾಲೆಗೂ ಕಳಿಸುತ್ತಾರೆ. ಈ ಬಡವರಲ್ಲಿ ಹೆಚ್ಚಿನವರು ಕೃಷಿ ಕೂಲಿಕಾರರು, ಕಾರ್ಖಾನೆ ಕಾರ್ಮಿಕರು, ದಿನಗೂಲಿಯವರೂ ಆಗಿದ್ದಾರೆ. ಇಲ್ಲಿನ ಸರ್ಕಾರಿ ಶಾಲೆ ಸಾಕಷ್ಟು ಸ್ಥಳಾವಕಾಶವನ್ನು ಹೊಂದಿದ್ದು ಅಚ್ಚುಕಟ್ಟಾಗಿ ಇದೆ. ನಾಲ್ಕು ತರಗತಿ ಕೊಠಡಿಗಳು, ಒಂದು ಜಗಲಿ, ಹಾಗೂ ಇನ್ನೊಂದು ಕಚೇರಿಸಿಬ್ಬಂದಿ ಕೊಠಡಿಯೂ ಆಗಿದೆ. ಒಂದನೇ ತರಗತಿಯ ಕೊಠಡಿಯಲ್ಲಿ ವಾಚನಾಲಯಕ್ಕೆ ವ್ಯವಸ್ಥೆ ಮಾಡಲಾಗಿದೆ. 'ಇದೊಂದು ಒಳ್ಳೆಯ ಊರು, ಪೋಷಕರು ನಮಗೆ ಬೆಂಬಲ ಕೊಡುತ್ತಾರೆ' ಎಂದು ಶಿಖಾ ಹೇಳುತ್ತಾರೆ. ಒಟ್ಟು 160 ಮಕ್ಕಳಿದ್ದು 90 ಮಂದಿ ಹುಡುಗಿಯರು ಹಾಗೂ 70 ಹುಡುಗರು. ಮುಖ್ಯೋಪಾಧ್ಯಾಯಿನಿಯೂ ಸೇರಿ ನಾಲ್ವರು ಶಿಕ್ಷಕರಿದ್ದಾರೆ. ಶಿಖಾ ಮೂರನೇ ತರಗತಿಗೆ ಎಲ್ಲಾ ವಿಷಯಗಳನ್ನೂ ನಾಲ್ಕನೇ ತರಗತಿಗೆ ಪರಿಸರ ವಿಜ್ಞಾನವನ್ನೂ ಬೋಧಿಸುತ್ತಾರೆ. 'ಇಲ್ಲಿ ನಮ್ಮಲ್ಲಿ ಪರಸ್ಪರ ತಿಳಿವಳಿಕೆಯೂ ಏಕತೆಯೂ ಇದೆ. ಅದೊಂದು ಬಲು ಒಳ್ಳೇ ವಿಚಾರ. ಆದರೆ ವಿದ್ಯಾರ್ಥಿ–ಶಿಕ್ಷಕ ಅನುಪಾತ ಮಾತ್ರ ಪ್ರತಿಕೂಲವಾಗಿರುವುದು ಒಂದು ಸಮಸ್ಯೆಯೇ ಸರಿ. ಜೊತೆಗೆ ಶೈಕ್ಷಣಿಕೇತರ ಕೆಲಸಗಳೂ ನಮಗಿವೆ' ಎಂದರು ಶಿಖಾ. ಅವರ ವೃತ್ತಿಜೀವನದ ಕವಲುದಾರಿ, ಅಂದರೆ ಬೋಧನೆಯ ಕುರಿತಾದ ಸಂಪೂರ್ಣ ಬೇರೆಯೇ ದಾರಿಯ ಅರಿವು ಅವರಿಗೆ

ದೊರೆತದ್ದು ರುದ್ರಪುರದಲ್ಲಿ ಜರುಗಿದ ಕಾರ್ಯಾಗಾರದಲ್ಲಿ. ಅಂದು ಅಲ್ಲಿ ಫೌಂಡೇಶನ್ ವತಿಯಿಂದ ಗಣಿತ ಹಾಗೂ ಸಮಾಜ ವಿಜ್ಞಾನದ ಬೋಧನೆಯ ವಿಷಯದಲ್ಲಿ ನಡೆದ ಕಾರ್ಯಾಗಾರದಲ್ಲಿ ಭಾಗವಹಿಸುವಂತೆ ಶಿಖಾ ಅವರನ್ನು ಫೌಂಡೇಶನ್ ಪ್ರತಿನಿಧಿಯೂ ಕ್ಲಸ್ಟರ್ ಸಂಪನ್ಮೂಲ ಸಮನ್ವಯಕಾರರೂ ಆದ ಅಮಿತ್ ಕೇಳಿಕೊಂಡರು. 'ಆ ಕಾರ್ಯಾಗಾರ ನನ್ನ ಕಣ್ಣುಗಳನ್ನು ತೆರೆಯಿಸಿತು. ಬೋಧನೆಯು ಏಕಮುಖ ಮಾರ್ಗವಲ್ಲ ಎಂಬುದು ನನಗೆ ತಿಳಿಯಿತು. ಪಠ್ಯಕ್ರಮವೂ ಪಠ್ಯಪುಸ್ತಕಗಳೂ ನನ್ನ ಒಡೆಯರಲ್ಲ; ನಾನೇ ಅವುಗಳ ಒಡತಿ ಎಂಬುದು ಸ್ಪಷ್ಟವಾಯಿತು' ಅನ್ನುತ್ತಾರೆ ಶಿಖಾ. 'ಒಂದು ಉದಾಹರಣೆ ಹೇಳಿ' ಎಂದಾಗ, 'ಹಿಂದೆಲ್ಲ 'ನನ್ನ ಕುಟುಂಬ', ನನ್ನ ಮನೆ' ಮುಂತಾದ ವಿಷಯಗಳು ಬಂದಾಗ ನಾನು ಅವುಗಳನ್ನು ಕರಿ ಹಲಗೆಯಲ್ಲಿ ಬರೆಯುತ್ತಿದ್ದೆ. ಮಕ್ಕಳು ಅದನ್ನು ಬರೆದುಕೊಳ್ಳುತ್ತಿದ್ದರು. ಮಕ್ಕಳು ಅವಕ್ಕೆ ಸಂಬಂಧಿಸಿ ಕೆಲವು ಮಾಮೂಲಿ ಉತ್ತರಗಳನ್ನು ಸಿದ್ಧಪಡಿಸಿ ಬರೆಯುತ್ತಿದ್ದರು. ಆದರೆ ಈಗ ನಾನು ಪ್ರತಿಯೊಂದು ಪ್ರಶ್ನೆಯನ್ನೂ ಮಕ್ಕಳು ಅವರ ಜೀವನಕ್ಕೆ ಸಂಬಂಧಿಸಿ ಅರ್ಥಮಾಡಿಕೊಂಡು ಉತ್ತರ ಬರೆಯುವಂತೆ ಮಾಡುತ್ತೇನೆ. ಈ ಮೂಲಕ ಮಕ್ಕಳ ಜ್ಞಾನದ ವಿಸ್ತರಣೆಯಾಗುತ್ತದೆ. ಈಗ 'ನನ್ನ ಕುಟುಂಬ', 'ನನ್ನ ಮನೆ'ಯಂತಹ ಪ್ರಶ್ನೆಗಳು ಮಕ್ಕಳಲ್ಲಿ ಶೋಧಕ ಬುದ್ಧಿಯನ್ನು ಬೆಳೆಸುತ್ತಿವೆ; ಅವರು ಪೋಷಕರೊಡನೆಯೂ ಸಂಬಂಧಿಕರೊಡನೆಯೂ ಚರ್ಚಿಸಿ ಒಂದು ರೀತಿಯ ಸಮೀಕ್ಷೆಯನ್ನು ನಡೆಸಿ ಉತ್ತರ ಸಿದ್ಧಪಡಿಸುತ್ತಾರೆ. ಈ ಮೂಲಕ ಅಭಿವ್ಯಕ್ತಿ ಸಾಮರ್ಥ್ಯವೂ ಬೆಳೆಯುತ್ತಿದೆ. ಅವರು ಈಗ ವಾಕ್ಯಗಳನ್ನು ರಚಿಸುತ್ತಾರೆ, ಚಿತ್ರಗಳನ್ನೂ ಬರೆಯುತ್ತಾರೆ. ನಾನು ಅವರಿಗೆ ಕೆಲವು ವಾಕ್ಯಗಳನ್ನು ಕೊಟ್ಟು ಕತೆಯನ್ನು ರಚಿಸಲು ಹೇಳಿದರೆ ಅವರು ಅದನ್ನು ಮಾಡುತ್ತಾರೆ ಇದರಿಂದ ಅವರ ಸೃಜನಾತ್ಮಕ ಶಕ್ತಿಯು ಅವರ ಬೌದ್ಧಿಕ ಪ್ರಕ್ರಿಯೆಯಲ್ಲಿ ಮಿಳಿತವಾಗಿ ಬೆಳವಣಿಗೆ ಹೊಂದುತ್ತದೆ' ಎಂದು ಶಿಖಾ ಹೇಳುತ್ತಾರೆ. ಇವೆಲ್ಲ ಚಟುವಟಿಕೆಗಳಿಂದ ಅವರಿಗೆ ಕೆಲಸದ ಹೊರೆ ಜಾಸ್ತಿಯಾಗುತ್ತದೆ ಎಂಬುದನ್ನು ನಾವು ಗಮನಿಸಬೇಕು, ಆದರೆ ಅವರು ಅದನ್ನು ಲೆಕ್ಕಿಸುವುದಿಲ್ಲ. ಶಿಖಾ ಅವರು ಆಯ್ದುಕೊಂಡಿರುವ ಈ ಮಾರ್ಗದ ದೆಸೆಯಿಂದ ಅವರಿಗೆ ಬೋಧನಾ ಯೋಜನೆಯ ರಚನೆ ನಿರ್ಣಾಯಕವೆನಿಸುತ್ತದೆ. ಅವರ ತರಗತಿಯು ಹೊಂದಿರುವ ವೈವಿಧ್ಯದ ಕಾರಣದಿಂದಾಗಿ ಬೋಧನಾ ಯೋಜನೆಯ ತಯಾರಿಯಲ್ಲಿ ಹೆಚ್ಚು ಕಾಲವನ್ನು ವ್ಯಯಿಸಬೇಕಾಗಿದೆ. ಚುರುಕಾದ ವಿದ್ಯಾರ್ಥಿಗಳಿಗೆ ಹೆಚ್ಚು ಸವಾಲಿನ ಕೆಲಸಗಳನ್ನು ಕೊಟ್ಟು ಮಿಕ್ಕವರ ಅರಿವಿನ ಬುನಾದಿಯನ್ನು ಬಲಪಡಿಸುವ ಕಾರ್ಯವನ್ನು ತಾಳ್ಮೆಯಿಂದ ಮಾಡುತ್ತಾರೆ. ಬೇರೆ ಬೇರೆ ವಿಷಯಗಳಿಗೆ ತಮ್ಮ ವಿಧಾನ ಬೇರೆ ಬೇರೆ ರೀತಿಯದ್ದೂ ನಮ್ಮವೂ ಆಗಿರಬೇಕು ಎಂದು ಅವರೆನ್ನುತ್ತಾರೆ. ಈ ವ್ಯತ್ಯಾಸವನ್ನು ಅವರಂತೆಯೇ ಅವರ ಶಾಲೆಯನ್ನು ಸಂದರ್ಶಿಸುವವರೂ ಅಲ್ಲಿ ಕಾಣಬಹುದಾಗಿದೆ. ಆ ಮಕ್ಕಳು ಪದ ಸಮಸ್ಯೆಯನ್ನು ಸುಲಭವಾಗಿ ಅರ್ಥಮಾಡಿಕೊಂಡು ಬಿಡಿಸುತ್ತಾರೆ. ಅವರು ಗಣಿತದ ಭಾಷೆಯನ್ನು ತಿಳಿದುಕೊಂಡಿದ್ದಾರೆ ಎಂಬುದಕ್ಕೆ ಅದುವೇ ನಿದರ್ಶನ. 'ಇಬರ್ತಿ ಸವಾಲ್ ಹಮಾರೇ ಲಿಯೇ ಬಹುತ್ ಇಂಪಾರ್ಟೆಂಟ್ ಹೆ' ಅನ್ನುತ್ತಾ ಶಿಖಾ ಅವರು

ಗಣಿತದ ಸಮಸ್ಯೆಗಳನ್ನು ಪದಗಳಲ್ಲಿ ಹೇಳುವ ಈ ಪದ್ಧತಿಯನ್ನು ವಿವರಿಸಿದರು. ಅವರ ತರಗತಿಯ ಮಕ್ಕಳಿಗೆ ಮಾತನಾಡಲು ಅಳುಕು ಇರಲಿಲ್ಲ. ವಿಷಯದ ಕುರಿತು ತಾವು ತಿಳಿದುಕೊಂಡದ್ದನ್ನು ವಾಕ್ಯಗಳಲ್ಲಿ ಹೇಳುವ ಸಾಮರ್ಥ್ಯವೂ ಅವರಿಗಿತ್ತು. ಮಕ್ಕಳ ಈ ಸಾಮರ್ಥ್ಯದ ಬಗ್ಗೆ ನಾವು ಶಿಖಾರಲ್ಲಿ ಹೇಳಿದಾಗ ಅವರು ಅಭಿಮಾನ ಪಡುತ್ತ "ನಮಗೆ ಈ ಮಕ್ಕಳ ಸಾಧನೆಯನ್ನು ಹೊರಗಿನವರ ಮುಂದೆ ಪ್ರದರ್ಶಿಸಬೇಕಾದ ಅಗತ್ಯವೇನೂ ಇಲ್ಲ. ನಮಗೆ ಇದು ತಿಳಿದಿರುವ ಸಂಗತಿಯೇ; ಪ್ರತಿ ದಿನವೂ ನಾವು ಅದನ್ನು ಕಾಣುತ್ತಿದ್ದೇವೆ. ನಮಗೆ ನಿರಂತರ ಸಮಗ್ರ ಮೌಲ್ಯಮಾಪನದ (ಸಿಸಿಇ) ಮೇಲೆ ಸಂಪೂರ್ಣ ಹಿಡಿತವಿದೆ. ಆದರೂ ಒಟ್ಟು ನೂರಾ ಅರವತ್ತು ಮಕ್ಕಳಲ್ಲಿ ಮೂವತ್ತರಿಂದ ಮೂವತ್ತೈದು ಮಕ್ಕಳ ಹಾಜರಾತಿ ನಿಯಮಿತವಾಗಿ ಇಲ್ಲ. ಪರಿಣಾಮವಾಗಿ ಅವರ ಶೈಕ್ಷಣಿಕ ಬೆಳವಣಿಗೆ ಕುಂಠಿತವಾಗಿದೆ. ನನಗೆ ಇದಕ್ಕಿಂತ ಹೆಚ್ಚು ನೋವು ಕೊಡುವ ವಿಷಯ ಬೇರೆ ಇದೆ; ಕೆಲವು ಮಕ್ಕಳು ತಪ್ಪದೆ ಶಾಲೆಗೆ ಬರುತ್ತಿದ್ದರೂ, ನಾವು ಅವರ ಬಗ್ಗೆ ಸಾಕಷ್ಟು ಗಮನ ಹರಿಸುತ್ತಿದ್ದರೂ ಅವರಲ್ಲಿ ಬೆಳವಣಿಗೆ ಕಾಣಿಸದೇ ಇರುವುದು. ಇದು ನನ್ನ ವೈಫಲ್ಯವೆಂದೇ ನಾನು ಭಾವಿಸುತ್ತೇನೆ. ಆದ್ದರಿಂದಲೇ ನಾನು ಪ್ರತಿದಿನವೂ ಶಾಲೆಗೆ ಹೊಸ ಚೈತನ್ಯದೊಡನೆ ಬರಬೇಕು ಅಂದುಕೊಳ್ಳುತ್ತೇನೆ" ಎಂದು ತಮ್ಮ ಮನದಾಳದ ನೋವನ್ನೂ ಬಿಚ್ಚಿಟ್ಟರು.

ಇಲ್ಲಿಗೆ ಬಂದು ಮಹಾರಾಜಪುರ ಶಾಲೆಯ ಶಿಖಾ ಗಂಗ್ವಾರ್ ಎಂಬ ಶಿಕ್ಷಕಿಯೊಡನೆ ನಡೆಸಿದ ಮಾತುಕತೆ ಹೊಸ ವಿಧಾನಗಳೊಂದಿಗೆ ಕೆಲಸ ಮಾಡುತ್ತಿರುವ ಒಬ್ಬಾಕೆ ಶ್ರದ್ಧಾಳು ಶಿಕ್ಷಕಿಯ ಅನುಭವಗಳ ಸಮೃದ್ಧ ಬುತ್ತಿಯನ್ನು ನಮಗೆ ಕಟ್ಟಿಕೊಟ್ಟಿತು. ಪ್ರತಿದಿನವೂ ತಮ್ಮನ್ನು ತಾವು ಉತ್ತಮಪಡಿಸಿಕೊಳ್ಳಬೇಕು ಎಂಬ ಅವರ ನಿಷ್ಠೆ ಮತ್ತು ಎಚ್ಚರ ಅಪರೂಪವಾಗಿ ಕಾಣಿಸುವ ಗುಣವಿಶೇಷವೇ ಸರಿ.

---

## ನನ್ನ ವಿದ್ಯಾರ್ಥಿಗಳು ತರ್ಕ ಮತ್ತು ವಿವೇಚನೆಯಿಂದ ಒಂದು ಸಮ ಸಮಾಜದ ಸೌಂದರ್ಯವನ್ನು ಗ್ರಹಿಸುತ್ತಾರೆ


**ಚಂದ್ರಭೂಷಣ್ ಬಿಜ್‌ಲಾವಾನ್**

ಹಿರಿಯ ಪ್ರಾಥಮಿಕ ಶಾಲೆ, ಸುನಾಲಿ

ಪುರೋಲಾ ಬ್ಲಾಕ್, ಉತ್ತರಕಾಶಿ ಜಿಲ್ಲೆ, ಉತ್ತರಾಖಂಡ್


---

ಒಂದು ಒಳ್ಳೆಯ ಶಾಲೆಗೆ ನಾವು ನೀಡುವ ಭೇಟಿಯನ್ನು ಎರಡು ರೀತಿಯಲ್ಲಿ ಆನಂದಿಸಬಹುದು. ಒಂದು ಯಾರ ಕಣ್ಣಿಗೂ ಅಷ್ಟಾಗಿ ಕಾಣಿಸಿಕೊಳ್ಳದೆ, ಎಲೆ ಮರೆಯ ಕಾಯಿಯಂತೆ, ಅಥವಾ ಹತ್ತರೊಳಗೆ ಹನ್ನೊಂದಾಗಿ ಎಂಬಂತೆ ಶಾಲೆಯಲ್ಲಿ ನಡೆಯುವುದೆಲ್ಲವನ್ನೂ ಗಮನಿಸುವುದು. ಮಕ್ಕಳು ಒಬ್ಬೊಬ್ಬರಾಗಿಯೂ ಗುಂಪುಗಳಾಗಿಯೂ ಬಂದು ಸೇರಿಕೊಳ್ಳುತ್ತಾರೆ. ತರಗತಿಯಲ್ಲಿ ಚೀಲವನ್ನಿಟ್ಟು ಹೊರಬಂದು ಕಸ ತೆಗೆಯುವುದು, ಗಿಡಗಳಿಗೆ ನೀರು ಹಾಕುವುದು ಇತ್ಯಾದಿ ಕೆಲಸಗಳನ್ನು ತಮ್ಮಲ್ಲೇ ಹಂಚಿಕೊಂಡು ಮಾಡಿ ಮುಗಿಸುತ್ತಾರೆ. ಶಿಕ್ಷಕರು ಮೌನವಾಗಿಯೇ ಮಕ್ಕಳ

ಚಟುವಟಿಕೆಗಳ ಮೇಲೆ ಒಂದು ಕಣ್ಣನ್ನಿರಿಸಿ ತಮ್ಮ ಮುಂದಿನ ಕರ್ತವ್ಯಗಳಿಗೆ ಅಣಿಯಾಗುತ್ತಾರೆ. ನಾವು ತರಗತಿಗೆ ಹೋಗಿ ಕುಳಿತರೆ ಅಲ್ಲಿ ಶಿಕ್ಷಕರು ಒಂದು ಪಾಠವನ್ನು ಇಲ್ಲವೇ ಒಂದು ವಿಷಯವನ್ನು ಹೇಗೆ ಮಂಡಿಸುತ್ತಾರೆ ಎಂಬುದನ್ನು ನೋಡಬಹುದು. ಪ್ರಶ್ನೆಯನ್ನು ಕೇಳಿ ವಿಷಯವನ್ನು ಅರ್ಥಮಾಡಿಕೊಳ್ಳುವುದಕ್ಕೆ ಮಕ್ಕಳಿಗೆ ಶಿಕ್ಷಕರು ನೆರವಾಗುತ್ತಾರೆ. ತಂಡಗಳನ್ನು ಮಾಡಿಕೊಂಡು, ಪರಸ್ಪರ ಚರ್ಚಿಸಿ ಹಾಗೂ ಒಬ್ಬನು ಇನ್ನೊಬ್ಬನಿಂದ ಕೇಳಿ ತಿಳಿದುಕೊಂಡು ಕಲಿಯಲು ಶಿಕ್ಷಕರು ಅವಕಾಶ ಕೊಡುತ್ತಾರೆ. ಶಿಕ್ಷಕರು ಬೋಧನೆಯ ಕಲಿಕೆಯ ಪರಿಕರಗಳನ್ನೂ ಬಳಸುತ್ತಾರೆ. ತರಗತಿಯಲ್ಲಿ ಮಕ್ಕಳು ಪ್ರಶ್ನೆಯನ್ನು ಕೇಳಲು, ಅನ್ವೇಷಕ ಬುದ್ಧಿಯನ್ನು ಪ್ರಯೋಗಿಸಲು, ಆ ಮೂಲಕ ಕಲಿಯಲು ಶಿಕ್ಷಕ ಅವಕಾಶ ನೀಡುತ್ತಾನೆಯೇ ಎಂಬುದನ್ನೂ ತಿಳಿಯಬಹುದು. ಮಕ್ಕಳು ತಮ್ಮೊಳಗಿನ ಜಗಳಗಳನ್ನು, ವಾಗ್ವಾದಗಳನ್ನು ಹೇಗೆ ಬಗೆಹರಿಸಿಕೊಳ್ಳುತ್ತಾರೆ, ಮಧ್ಯಾಹ್ನದ ಬಿಸಿಯೂಟದ ಏರ್ಪಾಟು ಹೇಗೆ ನಡೆದಿದೆ, ತರಗತಿಗಳೆಲ್ಲ ಮುಗಿದ ಮೇಲೆ ಸಾಯಂಕಾಲ ಶಿಕ್ಷಕರೆಲ್ಲ ಸೇರಿ ಇಂದಿನ ಕಲಿಕೆ ಹೇಗೆ ನಡೆಯಿತು ಎಂದು ಸಿಂಹಾವಲೋಕನ ಮಾಡಿಕೊಳ್ಳುವ ಬಲು ಮಹತ್ವದ ಕ್ಷಣವನ್ನೂ ಕಾಣಬಹುದು. ಶಿಕ್ಷಕರು ಪರಸ್ಪರರಿಗೂ ಮಕ್ಕಳಿಗೂ ವಿದಾಯ ಹೇಳುತ್ತ ಮಂದಹಾಸವನ್ನು ಬೀರಿ ಮನೆ ಕಡೆ ಹೆಜ್ಜೆ ಹಾಕುವುದನ್ನು ನೋಡುವುದು ಕೂಡಾ ಆಗಂತುಕ ಕುತೂಹಲಿಗೆ ಆಪ್ಯಾಯಮಾನವೇ ಆಗಬಹುದು. ಅಂಥದೊಂದು ದಿನದ ಅನುಭವ ಚೇತೋಹಾರಿಯಾಗಿರುತ್ತದೆ.

ಒಮ್ಮೊಮ್ಮೆ ಶಿಕ್ಷಕರೊಂದಿಗೆ ಸುಮ್ಮನೆ ಕುಳಿತು ದೀರ್ಘವಾಗಿ, ಮುಕ್ತವಾಗಿ ಅದೂ ಇದೂ ಹರಟುತ್ತಾ ಕಾಲಕಳೆದದ್ದೇ ಗೊತ್ತಾಗದಂತೆ ಇಷ್ಟೇ ಆಹ್ಲಾದಕರವಾಗಿ ಶಾಲೆಯೊಂದರಲ್ಲಿ ಇಡೀ ದಿನವನ್ನು ಕಳೆಯಬಹುದು – ಇದು ಇನ್ನೊಂದು ರೀತಿ. ದೂರ, ದುರ್ಗಮ ಪ್ರದೇಶಗಳ ನಮ್ಮ ಸರ್ಕಾರಿ ಶಾಲೆಯ ಶಿಕ್ಷಕರಿಗೆ ಆಸಕ್ತ ಸಂದರ್ಶಕರೊಂದಿಗೆ ದೀರ್ಘಕಾಲ ಹರಟೆ ಹೊಡೆಯುವ ಅವಕಾಶಗಳು ಸಿಗುವುದು ತುಂಬಾ ದುರ್ಲಭ. ಹೀಗಾಗಿ ಅವರೂ ಇಂಥ ಸಂದರ್ಭದಲ್ಲಿ ಖುಷಿಯಿಂದ ಆರಾಮವಾಗಿ ತೊಡಗಿಕೊಳ್ಳುತ್ತಾರೆ. ಉತ್ತರಾಖಂಡ್‌ನ ಉತ್ತರಕಾಶಿ ಜಿಲ್ಲೆಯ ಸುನಾಲಿಯಲ್ಲಿನ ಹಿರಿಯ ಪ್ರಾಥಮಿಕ ಶಾಲೆಗೆ ನಾವು ನೀಡಿದ ಭೇಟಿ ಇಂಥದ್ದೇ ಆಗಿತ್ತು. ನಮ್ಮ ಭೇಟಿ ಪೂರ್ವಯೋಜಿತವೇನೂ ಆಗಿರಲಿಲ್ಲ, ಆ ದಿನ ಬ್ಲಾಕ್ ಮಟ್ಟದ ಕ್ರೀಡಾಕೂಟವಿದ್ದುದರಿಂದ ಬಹುತೇಕ ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಅದರಲ್ಲಿ ಭಾಗವಹಿಸಲು ಹೋಗಿದ್ದರಿಂದ ಬಿಡುವಾಗಿ ಮಾತನಾಡಲು ಸಾಧ್ಯವಾಯಿತು. ಈ ಶಾಲೆ ಪುರೋಲಾ ಪ್ರದೇಶದ 'ಒಳ್ಳೆಯ' ಶಾಲೆಗಳಲ್ಲಿ ಒಂದು ಎಂಬ ಹೆಸರು ಪಡೆದುದರಿಂದ ನಾವು ಈ ಶಾಲೆಯನ್ನು ಆರಿಸಿಕೊಂಡಿದ್ದೆವು. ಜೊತೆಗೆ ಇಸವಿ 2000ದಿಂದ 2015ರವರೆಗೆ ಇಲ್ಲಿ ಮುಖ್ಯೋಪಾಧ್ಯಾಯರಾಗಿದ್ದ ಸತ್ಯಪಾಲ್ ಸಿಂಗ್‌ರವರು ಒಂದು ದಂತಕಥೆಯೇ ಆಗಿದ್ದರು. ಅಲ್ಲಿನ ಇಡಿಯ ಬ್ಲಾಕ್ ಪ್ರದೇಶದಲ್ಲಿ ಅತ್ಯಂತ ಸ್ಫೂರ್ತಿದಾಯಕ ಮುಖ್ಯೋಪಾಧ್ಯಾಯರ ಹೆಸರು ಹೇಳಿ ಎಂದು ಬೇರೆ ಶಾಲೆಗಳ ಶಿಕ್ಷಕರನ್ನು ಕೇಳಿದರೂ ಅವರು ಸತ್ಯಪಾಲ್ ಸಿಂಗ್ ಅವರ ಹೆಸರನ್ನೇ ಹೇಳುವುದು

ಖಚಿತ ಎಂಬಷ್ಟರ ಮಟ್ಟಿಗೆ ಅವರು ಪ್ರಖ್ಯಾತರಾಗಿದ್ದರು. ಆದರೆ ಸತ್ಯಪಾಲರ ಈ ಪ್ರಖ್ಯಾತಿಯ ಹಿನ್ನೆಲೆಯನ್ನು ಸ್ವಲ್ಪ ಕೆದಕಿದರೆ ಅವರ ಒಂದಿಬ್ಬರು ಸಹೋದ್ಯೋಗಿಗಳ ಬೆಂಬಲದಿಂದ ಅವರಿಗೆ ಈ ಕೀರ್ತಿ ಪ್ರಾಪ್ತವಾಯಿತು ಅನ್ನುತ್ತಾರೆ ಅವರನ್ನು ತಿಳಿದವರು. ಆ ಸಹೋದ್ಯೋಗಿಗಳಲ್ಲಿ ಒಬ್ಬರು ಚಂದ್ರಭೂಷಣ್ ಬಿಜ್‌ಲಾವಾನ್. ಇಡೀ ದಿನ ಅವರೊಡನೆ ನಾವು ಬೋಧನೆ, ಕಲಿಕೆ, ಪಠ್ಯಕ್ರಮ ಹಾಗೂ ಶಿಕ್ಷಣದ ಒಟ್ಟಾರೆ ಧ್ಯೇಯೋದ್ದೇಶ ಮುಂತಾದ ವಿಸ್ತಾರವಾದ ವಿಷಯಗಳ ಕುರಿತು ನಡೆಸಿದ ಆಸಕ್ತಿದಾಯಕ ಚರ್ಚೆಯ ಫಲಶ್ರುತಿಯೇ ಈ ಕಥನ.

ಪುರೋಲಾ ಮೂಲದವರೇ ಆದ ಚಂದ್ರಭೂಷಣ್ 1985ರಲ್ಲಿ ಹಿಂದಿ, ರಾಜ್ಯಶಾಸ್ತ್ರ ಮತ್ತು ಸಮಾಜಶಾಸ್ತ್ರಗಳಲ್ಲಿ ಬಿ.ಎ. ಮುಗಿಸಿ ಶೈಕ್ಷಣಿಕ ಸೇವೆಗೆ ಬಂದರು. ಅವರು ಬಿಟಿಸಿ (ಬೇಸಿಕ್ ಟೀಚಿಂಗ್ ಸರ್ಟಿಫಿಕೇಟ್) ಕೋರ್ಸ್ ಅನ್ನೂ ಮಾಡಿದ್ದಾರೆ. ನೌಗಾಂವ್ ಬ್ಲಾಕ್‌ನ ಬಡಕೋಟ್‌ನಲ್ಲಿ ಇಪ್ಪತ್ತು ವರ್ಷ ಸೇವೆಯಲ್ಲಿದ್ದೇ ಚಂದ್ರಭೂಷಣ್ ಅಂಚೆ ತೆರಪಿನ ಶಿಕ್ಷಣದ ಮೂಲಕ ಎಂ.ಎ. ಪದವಿಯನ್ನೂ ಗಳಿಸಿಕೊಂಡರು. 2005ರಲ್ಲಿ ಸುನಾಲಿಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗೆ ಬಂದರು. ಆ ದಿನಗಳಲ್ಲಿ ಶಾಲೆಯ ಆರು, ಏಳು ಮತ್ತು ಎಂಟನೆಯ ತರಗತಿಗಳಲ್ಲಿ ಒಟ್ಟು ಎಪ್ಪತ್ತೆಂಟು ವಿದ್ಯಾರ್ಥಿಗಳಿದ್ದರು. ಆದರೆ ಹತ್ತಿರದಲ್ಲಿಯೇ ಇನ್ನೊಂದು ಹಿರಿಯ ಪ್ರಾಥಮಿಕ ಶಾಲೆ ಪ್ರಾರಂಭವಾದ ಮೇಲೆ ಇವರ ಶಾಲೆಯ ವಿದ್ಯಾರ್ಥಿಗಳ ಸಂಖ್ಯೆ ಮೂವತ್ತಮೂರಕ್ಕೆ ಇಳಿಯಿತು. ಶ್ರೀರಾಮ್ ಸಿಂಗ್ ಚೌಹಾಣ್ ಇದೀಗ ಮುಖ್ಯೋಪಾಧ್ಯಾಯರಾಗಿದ್ದು, ಅವರೂ ಸೇರಿ ಶಿಕ್ಷಕರ ಒಟ್ಟು ಸಂಖ್ಯೆ ನಾಲ್ಕು. ಚಂದ್ರಭೂಷಣ್ ವಿಜ್ಞಾನ ಮತ್ತು ಗಣಿತವನ್ನು ಕಲಿಸುತ್ತಾರೆ ಇನ್ನುಳಿದ ಇಬ್ಬರು ಶಿಕ್ಷಕರು ಭಜನ್ ಸಿಂಗ್ ರಾವತ್ ಮತ್ತು ಸರೋಜಿನಿ ರಾವತ್. ಭಜನ್ ಸಿಂಗ್ ಅವರು ಇಲ್ಲಿ 2002ರಿಂದಲೂ ಇದ್ದು ಸಮಾಜ ವಿಜ್ಞಾನ, ಹಿಂದಿ ಹಾಗೂ ಸಂಸ್ಕೃತ ಕಲಿಸುತ್ತಾರೆ. ಸರೋಜಿನಿ ರಾವತ್ ಈಗ್ಗೆ ಎರಡು ವರ್ಷಗಳ ಹಿಂದೆ ಈ ಶಾಲೆಗೆ ಬಂದರು. ಅವರು ಇಂಗ್ಲಿಷ್ ಕಲಿಸುತ್ತಾರೆ.

ಚಂದ್ರಭೂಷಣ್ ಅವರಿಗೆ ಮಾತು ಇಷ್ಟ. ಆದರೆ ಅವರು ವಾಚಾಳಿ ಅಲ್ಲ. ಅವರು ಒಳ್ಳೆಯ ಮಾತುಗಾರ; ಜೊತೆಗೆ ಚಿಂತಕನು ಕೂಡಾ. "ಹೀಗೆ ಆಗಂತುಕರೊಡನೆ ಶಿಕ್ಷಣದ ಆಗು–ಹೋಗುಗಳ ಬಗ್ಗೆ ಮಾತನಾಡುವ ಅವಕಾಶ ತುಂಬಾ ದುರ್ಲಭ, ನೋಡಿ. ಇಂತಹ ಸಂದರ್ಭಗಳಲ್ಲಿ ನಾನು ನನ್ನನ್ನೇ ಮರೆತುಬಿಡುತ್ತೇನೆ. ನಮ್ಮ ಶಾಲೆಗೆ ಅಧಿಕಾರಿಗಳು ಬಂದಾಗಲೂ ಇಂತಹ ಸಂವಾದ ನಡೆಯುವುದಿಲ್ಲ ಎಂಬುದೂ ವಾಸ್ತವವೇ" ಎಂದರು ಚಂದ್ರಭೂಷಣ್. ಆದರೆ ಅವರ ಈ ಮಾತಿನಲ್ಲಿ ಅಧಿಕಾರಿಗಳ ಬಗ್ಗೆ ತಾತ್ಸಾರವೇನೂ ಇದ್ದಂತೆ ಕಾಣಿಸಲಿಲ್ಲ.

ಮಕ್ಕಳ ಬಗ್ಗೆ, ಮಕ್ಕಳು ಹೇಗೆ ಕಲಿಯುತ್ತಾರೆ ಎಂಬ ಬಗ್ಗೆ ಹೇಳತೊಡಗಿದರೆ ಬಿಜ್‌ಲಾವಾನ್‌ಗೆ ಸಮಯದ ಪರಿವೆಯೇ ಇರುವುದಿಲ್ಲ. ಮಕ್ಕಳನ್ನು ಅರ್ಥಮಾಡಿಕೊಳ್ಳುವುದು ಹಾಗೂ ಅವರು ತರಗತಿಗೆ ತರುವ ಜ್ಞಾನವನ್ನು ಅರಿತುಕೊಳ್ಳುವುದು ಬಹಳ ಮುಖ್ಯ, ಮಕ್ಕಳಿಗೆ ತಮ್ಮ ಜ್ಞಾನವನ್ನು ಪ್ರದರ್ಶಿಸಲು, ಉಪಯೋಗಿಸಲು ಅವಕಾಶ ನೀಡಬೇಕು ಎನ್ನುತ್ತಾರೆ. "ನೀವು ಮಕ್ಕಳ ಪ್ರಚಲಿತ ಜ್ಞಾನಕ್ಕೆ

ಎಷ್ಟು ಅವಕಾಶ ನೀಡುತ್ತೀರಿ ಎಂಬುದರ ಮೇಲೆ ವಿದ್ಯಾರ್ಥಿಸ್ನೇಹಿಯಾದ, ಭಯಮುಕ್ತ ವಾತಾವರಣವು ಅವಲಂಬಿತವಾಗಿರುತ್ತದೆ" ಅನ್ನುತ್ತಾರೆ. ಪಠ್ಯಕ್ರಮಕ್ಕೆ ಮಾರ್ಗದರ್ಶನ ನೀಡಲು ಪಠ್ಯಪುಸ್ತಕ ಆವಶ್ಯಕ; ಆದರೆ ಪಠ್ಯಪುಸ್ತಕವು ಯಾವಾಗ ಆವಶ್ಯಕ ಮತ್ತು ಯಾವಾಗ ಆವಶ್ಯಕವಲ್ಲ ಎಂಬುದನ್ನು ಶಿಕ್ಷಕನೇ ನಿರ್ಧರಿಸಬೇಕಾಗುತ್ತದೆ. ವಿಜ್ಞಾನವನ್ನು ಬೋಧಿಸುವಾಗ ನನಗೆ ಪ್ರಯೋಗಾಲಯ ಮತ್ತು ಸಂಪನ್ಮೂಲ ಸಾಮಗ್ರಿಗಳು ಮುಖ್ಯವಾಗುತ್ತವೆ; ಆದರೆ ಜೀವಶಾಸ್ತ್ರದ ಬಗ್ಗೆಯೋ, ನಿಸರ್ಗದ ಬಗ್ಗೆಯೋ ಮಾತನಾಡುವಾಗ ವಿದ್ಯಾರ್ಥಿಗಳನ್ನು ತರಗತಿ ಕೋಣೆಯಿಂದ ಹೊರಗೆ ಕರೆದೊಯ್ಯಲು ಸ್ವಾತಂತ್ರ್ಯವಿರಬೇಕು. ಇ.ವಿ.ಎಸ್.ಅನ್ನು ದೈನಂದಿನ ಬದುಕಿನ ಸನ್ನಿವೇಶಗಳಿಗೆ ಅನ್ವಯಿಸಿ ಕಲಿಸುವ ವಿಧಾನವನ್ನು ಪಠ್ಯಪುಸ್ತಕದ ಮೂಲಕ ಕಲಿಸುವ ವಿಧಾನಕ್ಕೆ ಹೋಲಿಸಲು ಎಂದಿಗೂ ಸಾಧ್ಯವಿಲ್ಲ" ಅನ್ನುತ್ತಾರೆ ಚಂದ್ರಭೂಷಣ್.

ಪಠ್ಯಪುಸ್ತಕಕ್ಕೂ ಜಗತ್ತಿಗೂ ಪರಸ್ಪರ ಸಂಬಂಧವನ್ನು ಬೆಸೆಯಲು ವಿದ್ಯಾರ್ಥಿಗಳಿಗೆ ಸಹಾಯ ಮಾಡಬೇಕೆಂಬುದು ಚಂದ್ರಭೂಷಣ್‌ರ ಗುರಿ. ಯಮುನಾ ಕಣಿವೆ ಪ್ರದೇಶದಲ್ಲಿ ಯಥೇಚ್ಛವಾಗಿರುವ ಓಕ್ ಮರಗಳತ್ತ ಬೊಟ್ಟು ಮಾಡಿ ತೋರಿಸುತ್ತಾ, "ಪ್ರಪಂಚದೊಡನೆ ಒಂದಾಗಬೇಕು" ಎನ್ನುತ್ತಾರೆ. ತಮ್ಮ ವಿದ್ಯಾರ್ಥಿಗಳು ಓಕ್ ಮರಗಳ ಸುತ್ತಲಿನ ನೆಲವನ್ನು ಅಗೆದು ಅಲ್ಲಿ ನೀರು ಇರುವುದನ್ನು ಕಂಡುಕೊಂಡಿದ್ದಾರೆ; ಹೀಗಾಗಿ ಎಲ್ಲೆಲ್ಲಿ ಓಕ್ ಮರಗಳು ಇರುತ್ತವೋ ಅಲ್ಲೆಲ್ಲಾ ಬೇಕಾದಷ್ಟು ನೀರಿರುತ್ತದೆ ಎಂಬುದು ಅವರಿಗೆ ಗೊತ್ತು. ನಾವು ಪಠ್ಯಕ್ರಮದಲ್ಲಿ ತುಂಬಾ ವಿಷಯಗಳನ್ನು ತುರುಕಿದ್ದೇವೆ, ಅಂಥ ಮಾಹಿತಿಯನ್ನು ಕಡಿಮೆ ಮಾಡಿ ಮೂಲಭೂತವಾದ ಮತ್ತು ಪರಿಕಲ್ಪನಾತ್ಮಕವಾದ ತಿಳಿವಳಿಕೆಯನ್ನು ಹೆಚ್ಚಿಸುವುದು ಒಳ್ಳೆಯದು ಎಂಬುದು ಅವರ ಅಭಿಮತ. ಅಡಿಪಾಯ ಬಲವಾಗಿದ್ದರೆ ಮಕ್ಕಳು ತಾವೇ ಗ್ರಹಿಕೆಯ ಶಕ್ತಿಯನ್ನು ಪಡೆದುಕೊಂಡು ಜೀವನ ಪರ್ಯಂತ ಕಲಿಯುವ ವಿದ್ಯಾರ್ಥಿಗಳಾಗಿರುತ್ತಾರೆ ಎಂಬುದು ಚಂದ್ರಭೂಷಣ್‌ರ ತರ್ಕ. ಅವರ ಕಲಿಕಾ ವಿಧಾನಗಳ ತಳಹದಿಯೇ ಇದು. ಗಣಿತದ ಭಾಷೆಯ ಮೇಲೆ ಹತೋಟಿ ಸಾಧಿಸುವುದೇ ಗಣಿತದ ಕಲಿಕೆಯ ತಳಹದಿ ಎಂದು ಗಣಿತದ ಶಿಕ್ಷಕರಾದ ಚಂದ್ರಭೂಷಣ್ ಹೇಳುತ್ತಾರೆ. "ಮಕ್ಕಳು ಗಣಿತಸೂತ್ರಗಳ ಯಾಂತ್ರಿಕ ಕಲಿಕೆಯಿಂದ ಕೊಂಚ ದೂರ ಸರಿದು, ಅನೇಕ ರೀತಿಯ ಗಣಿತ ಕ್ರಿಯೆಗಳನ್ನು ಪರಿಕಲ್ಪನಾತ್ಮಕವಾಗಿ ಗ್ರಹಿಸಲು, ಮೂರ್ತದಿಂದ ಅಮೂರ್ತದತ್ತ ಸಾಗಲು ಶಿಕ್ಷಕನನ್ನು ಅವಲಂಬಿಸುತ್ತಾರೆ." ಕಲಿಕೆಯನ್ನು ಸೂಕ್ತವಾಗಿ ಗ್ರಹಿಸುವ ಎಲ್ಲ ಶಿಕ್ಷಕರಂತೆಯೇ ಇವರೂ ಸಹ ಭಾಷೆ, ಗಣಿತ ಮತ್ತು ವಿಜ್ಞಾನವನ್ನು ಬೋಧಿಸುವ ಪ್ರಕ್ರಿಯೆಯು ವಾಸ್ತವದಲ್ಲಿ ಒಂದರೊಳಗೊಂದು ಹಾಸುಹೊಕ್ಕಾಗಿದೆ ಎಂದು ತಿಳಿಯುತ್ತಾರೆ. "ನಾವು ಮಕ್ಕಳಿಗೆ ಇಂಗ್ಲಿಷನ್ನೂ ಕಂಪ್ಯೂಟರ್ ಉಪಯೋಗಿಸುವುದನ್ನೂ ಕಲಿಸಲೇಬೇಕು" ಎಂದು ಪ್ರತಿಪಾದಿಸುತ್ತಾರೆ.

ಚಂದ್ರಭೂಷಣ್ ಅನೇಕ ವರ್ಷಗಳ ಪರಿಶ್ರಮದಿಂದ, ವಿಭಿನ್ನರೀತಿಯ ಕಲಿಕಾ ಸಾಮಗ್ರಿಗಳನ್ನೂ ಸಂಪನ್ಮೂಲಗಳನ್ನೂ ಸಂಗ್ರಹಿಸಿದ್ದಾರೆ. ಅನೇಕ ಸಾಮಗ್ರಿಗಳನ್ನು ಅವರೇ ತಯಾರಿಸಿದ್ದಾರೆ. ಅವುಗಳನ್ನು ಸಂಗ್ರಹಿಸಿ ಜೋಡಿಸಿರುವ ಸಂಪನ್ಮೂಲ ಕೊಠಡಿಗೆ ಒಮ್ಮೆ ಭೇಟಿ ಕೊಡುವುದೇ ಈ ಶ್ರದ್ಧಾವಂತ ಶಿಕ್ಷಕನಿಗೆ ನಾವು ನೀಡುವ ಗೌರವವಾಗಿದೆ. ಅನೇಕ

ವರ್ಷಗಳ ಹಿಂದೆ, ಪ್ರಾಯಶಃ 2007ರಲ್ಲಿ ಇವರಿಗೆ ಗಣಿತದಲ್ಲಿ 'ಅತ್ಯುತ್ತಮ ಬೋಧನಾ– ಕಲಿಕಾ ಸಾಮಗ್ರಿಗಾಗಿ ಜಿಲ್ಲಾಮಟ್ಟದ ಪ್ರಶಸ್ತಿ ದೊರೆಯಿತು.

ಎಲ್ಲ ಬದ್ಧತೆಯುಳ್ಳ ಶಿಕ್ಷಕರಂತೆಯೇ ಚಂದ್ರಭೂಷಣ್ ಕೂಡಾ ಕಳೆದ ಮೂವತ್ತಕ್ಕೂ ಹೆಚ್ಚು ವರ್ಷಗಳಲ್ಲಿ ಕಲಿಯುತ್ತ, ಬೆಳೆಯುತ್ತ ಬಂದಿದ್ದಾರೆ. "ಮೊದಲ ಹದಿನೈದು ವರ್ಷ ನಾನು ಯಾಂತ್ರಿಕವಾಗಿಯೇ ಬೋಧಿಸುತ್ತಿದ್ದೆ. ನಾನು ಸರಿಯಾಗಿ ಕಲಿಸುತ್ತಿಲ್ಲ ಎಂದು ಅದು ಹೇಗೋ ನನಗೇ ಅನಿಸತೊಡಗಿತು. ನಿಜಕ್ಕೂ ಗಣಿತವನ್ನು ಇನ್ನೂ ಚೆನ್ನಾಗಿ ಕಲಿಸಬಹುದೆನ್ನಿಸಿತು" ಚಂದ್ರಭೂಷಣ್ ಮಾತಿನಲ್ಲಿ ಅಪರಾಧಿ ಭಾವದ ಛಾಯೆ ಇಣುಕುತ್ತಿತ್ತು. ಅನಂತರ ಅವರು ಪುಸ್ತಕಗಳನ್ನು ಕೊಂಡರು, ಅಧ್ಯಯನ ಮಾಡಿದರು, ಮನವರಿಕೆಯಾದದ್ದನ್ನು ಆಚರಣೆಗೆ ತಂದರು. ತಮ್ಮ ಜ್ಞಾನವು ಅಭಿವೃದ್ಧಿಯಾದಂತೆ, ಅದು ತಮ್ಮ ವಿದ್ಯಾರ್ಥಿಗಳು ಗಳಿಸಿಕೊಂಡ ಪರಿಕಲ್ಪನೆಗಳಲ್ಲಿ, ಮೂಲಭೂತ ತಿಳಿವಳಿಕೆಗಳು ಗಟ್ಟಿಯಾದುದರಲ್ಲಿ ಪ್ರತಿಫಲಿಸುತ್ತಿರುವುದು ಅವರಿಗೆ ಕಾಣಿಸತೊಡಗಿತು. "ಮಕ್ಕಳು ತಮ್ಮ ಕಲಿಕೆಯ ಗುಣಮಟ್ಟ ಉತ್ತಮಗೊಂಡಿದ್ದನ್ನು ಗುರುತಿಸಿ ಗೌರವಿಸುತ್ತಾರೆ" ಎನ್ನುತ್ತಾರೆ ಚಂದ್ರಭೂಷಣ್. ಶಿಕ್ಷಕರಿಗೆ ಅಧ್ಯಯನ ಬೇಕೇಬೇಕು. ಅವರು ಗಮನಿಸುತ್ತ, ಕಲಿಯುತ್ತ ಹೋಗಬೇಕು; ತರಗತಿಯಲ್ಲಿ ವಿಭಿನ್ನ ವಿಧಾನಗಳನ್ನು ಪ್ರಯೋಗಿಸಬೇಕು, ಇವು ಯಶಸ್ಸು ಗಳಿಸುತ್ತಿರುವುದಕ್ಕೆ ಅತ್ಯುತ್ತಮ ಸಾಕ್ಷಿ ಸಿಗುವುದು ಮಕ್ಕಳು ಸ್ವಾವಲಂಬಿಗಳೂ ಸಮರ್ಥರೂ ಆತ್ಮವಿಶ್ವಾಸದಿಂದ ಕೂಡಿದವರೂ ಆಗಿರುವ ಚಿಹ್ನೆಗಳನ್ನು ಪ್ರದರ್ಶಿಸಲಾರಂಭಿಸಿದಾಗ." ಕಲಿಯಬೇಕು ಎಂಬ ಇಂತಹ ಒಂದು ಅಂತರಂಗದ ಪ್ರೇರಣೆ ಇರುವುದರಿಂದಲೇ ಚಂದ್ರಭೂಷಣರು, ಫೌಂಡೇಷನ್‌ನ ಎಲ್ಲ ಸಭೆಗಳಿಗೆ, ಶೈಕ್ಷಣಿಕ ಚರ್ಚೆಗಳಿಗೆ, ವಿಟಿಎಫ್ ಸಭೆಗಳಿಗೆ ಹಾಗೂ ವಿಷಯ ಸಂಬಂಧಿ ಕಾರ್ಯಾಗಾರಗಳಿಗೆ ತಪ್ಪದೆ ಹಾಜರಾಗುತ್ತಾರೆ. ಇದರಲ್ಲಿ ಕೆಲವಂತೂ ಅವರ ಮೇಲೆ ಗಾಢವಾದ ಪ್ರಭಾವವನ್ನು ಬೀರಿವೆ. ಬೇಸಿಗೆ ಹಾಗೂ ಚಳಿಗಾಲದ ಗಣಿತದ ಕಾರ್ಯಾಗಾರಗಳು ತಮ್ಮ ಸಾಮರ್ಥ್ಯವನ್ನು ಬೆಳೆಸಿಕೊಳ್ಳುವಲ್ಲಿ ಮುಖ್ಯ ಪಾತ್ರ ವಹಿಸಿದವು ಎಂದು ಅವರು ನೆನಪಿಸಿಕೊಳ್ಳುತ್ತಾರೆ. ಈ ಕಾರ್ಯಾಗಾರಗಳ ಪ್ರಭಾವದಿಂದ ತಾವು ಸೃಷ್ಟಿಸಿಕೊಂಡಿರುವ ಸಾಮಗ್ರಿಗಳನ್ನೂ ಅವರು ತೋರಿಸುತ್ತಾರೆ. ಕಲಿತದ್ದನ್ನು ತರಗತಿಯಲ್ಲಿ ಆಚರಣೆಗೆ ತರುವುದು, ಅನ್ವಯಿಸುವುದು ಚಂದ್ರಭೂಷಣ್‌ರ ಪಾಲಿಗೆ ತುಂಬಾ ಮುಖ್ಯವಾದ ಸಂಗತಿ.

ಸ್ವಯಂ ನಿಯಂತ್ರಣದ ಇಂಥ ವಿಚಾರಗಳು ಅವರ ವ್ಯಕ್ತಿತ್ವದ ಇತರ ಮಜಲುಗಳಿಗೂ ವ್ಯಾಪಿಸಿವೆ. ಹೆಚ್ಚಿನ ಸಹಾಯದ ಆವಶ್ಯಕತೆ ಇರುವ ಮಕ್ಕಳಿಗೆ ಹೆಚ್ಚುವರಿ ಬೋಧನೆ ಮಾಡಲು ಅವರು ಪ್ರತಿದಿನ ಶಾಲೆಗೆ ಬೇಗನೆ ಬರುತ್ತಾರೆ. ಇದಲ್ಲದೆ ವಿಜ್ಞಾನದಲ್ಲಿ ಆಸಕ್ತಿ ಇರುವ ಹತ್ತು– ಹದಿನೈದು ವಿದ್ಯಾರ್ಥಿಗಳನ್ನು ಗುರುತಿಸಿ ರಾಷ್ಟ್ರೀಯ ಬಾಲ ವಿಜ್ಞಾನ ಕಾಂಗ್ರೆಸ್‌ಗೆ ಮಾದರಿ (ಪ್ರಾಜೆಕ್ಟ್) ಗಳನ್ನು ಮಾಡಲು ನೆರವಾಗುತ್ತಾರೆ. ಸಂಜೆಯ ಹೊತ್ತು ತಮ್ಮ ಮನೆಯಿರುವ ಪುರೋಲಾ ಪಟ್ಟಣದಲ್ಲಿ, ಅಲ್ಲಿ ವಾಸವಾಗಿರುವ ವಿದ್ಯಾರ್ಥಿಗಳೊಂದಿಗೆ ಸಮಯ ಕಳೆಯುತ್ತಾರೆ. ಇಂಥ ಎಲ್ಲ ಕ್ರಿಯೆಗಳಲ್ಲಿ ತಮ್ಮ ಸ್ವಾರ್ಥವೂ ಇದೆ ಎಂದು ನಗುತ್ತಾ ಹೀಗೆನ್ನುತ್ತಾರೆ; "ನೋಡಿ ನಾನು ದಿನಾಲೂ ಈ ಮಕ್ಕಳಿಂದ ಕಲಿಯುತ್ತಿದ್ದೇನೆ."

ಆದರೆ ಬೋಧನೆ ಮತ್ತು ಕಲಿಕೆಯ ಮೇಲೆ ಇಷ್ಟೊಂದು ಗಮನ ಕೊಡುವ ಚಂದ್ರಭೂಷಣರ ವ್ಯಕ್ತಿತ್ವಕ್ಕೆ ಬೇರೆ ಆಯಾಮಗಳೂ ಇವೆ.. ವಾರಾಂತ್ಯದಲ್ಲಿ ಅವರು ಚಾರಣಕ್ಕೆ ಹೊರಡುತ್ತಾರೆ. "ನಾನು ಪುರೋಲಾದ ಎಲ್ಲ ಬೆಟ್ಟ ಗುಡ್ಡಗಳಲ್ಲಿ ಅಲೆದಾಡಿದ್ದೇನೆ. ಅದೆಲ್ಲವನ್ನೂ ವಿಡಿಯೊ ಮಾಡಿ ತರಗತಿಗಳಲ್ಲಿ ಉಪಯೋಗಿಸಿದ್ದೇನೆ. ಮಕ್ಕಳಿಗೆ ಇದರಲ್ಲೂ ಕಲಿಯಲಿಕ್ಕಿದೆ. ಉದಾಹರಣೆಗೆ ಹೇಳಬೇಕೆಂದರೆ, ಪರಿಶಿಷ್ಟ ಜಾತಿಯ ಜನರು ಎಷ್ಟೇ ಶ್ರೀಮಂತರಾದರೂ ಬಂಗಾರವನ್ನು ತೊಡುವಂತಿಲ್ಲ ಎಂಬ ಸಂಪ್ರದಾಯವಿದೆ. ಹಾಗೆಯೇ ಇನ್ನೊಂದು ತಲೆಕೆಟ್ಟ ಮೌಢ್ಯದಿಂದಾಗಿ ಆ ಸಮುದಾಯದ ಜನರಿಗೆ ಯಾರೂ ಹಾಲು ಕೊಡುವುದಿಲ್ಲ. ನನ್ನ ವಿದ್ಯಾರ್ಥಿಗಳು ಮೂಢನಂಬಿಕೆಗಳನ್ನು ಬಿಡಲು ಕಲಿಯುತ್ತಿದ್ದಾರೆ; ಸಮಾನತೆಯ ಸಮಾಜವೊಂದರ ಸೌಂದರ್ಯವನ್ನು ಸಹಜವಾಗಿಯೇ ಎಂಬಂತೆ ಮನದೊಳಗೆ ತುಂಬಿಕೊಳ್ಳುತ್ತಿದ್ದಾರೆ. ಅವರು ಸರಿ– ತಪ್ಪುಗಳನ್ನು, ನೈತಿಕ– ಅನೈತಿಕಗಳನ್ನು ಗುರುತಿಸಲು ಕಲಿಯುವುದು ಭಾಷಣಗಳನ್ನು ಕೇಳಿಯೋ ಪ್ರವಚನಗಳನ್ನು ಆಲಿಸಿಯೋ ಅಲ್ಲ; ಬದಲಾಗಿ ವಿಚಾರಗಳನ್ನೂ ತಾರ್ಕಿಕ ವಿವರಣೆಗಳನ್ನೂ ವಿವೇಚನೆಗೆ ಒಳಪಡಿಸಿ ಅಂಗೀಕರಿಸಲು ಕಲಿತಾಗ ಮಾತ್ರ. ಅವರೀಗ ತಮ್ಮ ಅಭಿಪ್ರಾಯಗಳನ್ನು ಅಭಿವ್ಯಕ್ತಪಡಿಸಲು ಕೂಡಾ ಕಲಿಯುತ್ತಿದ್ದಾರೆ". ತಮಗೆ ತುಂಬಾ ಹೆಮ್ಮೆಯನ್ನು ತಂದ ಕ್ಷಣವೊಂದನ್ನು ಚಂದ್ರಭೂಷಣ್ ನೆನಸಿಕೊಂಡರು: ಕೆಲವು ವರ್ಷಗಳ ಹಿಂದೆ ಜಿಲ್ಲಾ ಮ್ಯಾಜಿಸ್ಟ್ರೇಟರು ಸುನಾಲಿಗೆ ಬಂದಿದ್ದರು. ಆ ಸಂದರ್ಭದಲ್ಲಿ ಏಳನೆಯ ತರಗತಿಯ ಪ್ರೀತಿ ಎಂಬ ಹುಡುಗಿ ಮುಂದೆ ಬಂದು ಸುನಾಲಿ ಗ್ರಾಮಕ್ಕೆ ಅಗತ್ಯವಾದ ಮೂಲ ಸೌಕರ್ಯಗಳ ಪಟ್ಟಿಯನ್ನು ಅವರಿಗೆ ಸಲ್ಲಿಸಿದಳು. ಹಿರಿಯ ಅಧಿಕಾರಿಯ ಎದುರು ಪ್ರೌಢ ವಯಸ್ಕರು ಕೂಡಾ ಮಾತನಾಡುವುದಕ್ಕೆ ಹಿಂಜರಿಯುವುದು ಸಹಜ. ಆದರೆ ಈ ಹುಡುಗಿ "ಹಳ್ಳಿಗೆ ಒಂದು ಒಳ್ಳೆಯ ರಸ್ತೆ ಮಾಡಿಕೊಡಿ" ಎಂದು ಹೇಳಿದ್ದು ಮ್ಯಾಜಿಸ್ಟ್ರೇಟರಿಗೇ ಆಶ್ಚರ್ಯವನ್ನೂ ಸಂತೋಷವನ್ನೂ ಉಂಟುಮಾಡಿತು. ಪ್ರೀತಿ ಯಾವ ಭಯವೂ ಇಲ್ಲದೆ ಮಾತನಾಡಿದ್ದು ಹಾಗೂ ತನ್ನ ಜನರ ಪರವಾಗಿ ಸೌಲಭ್ಯಗಳನ್ನು ಕೇಳಿದ್ದು ಸುನಾಲಿಯ ಹಿರಿಯ ಪ್ರಾಥಮಿಕ ಶಾಲೆ ನೀಡುತ್ತಿರುವ ಶಿಕ್ಷಣದ ಗುಣಮಟ್ಟ ಉತ್ತಮವಾಗಿದೆ ಎಂಬುದಕ್ಕೆ ಪುರಾವೆ ಎಂದು ಚಂದ್ರಭೂಷಣ್ ಭಾವಿಸುತ್ತಾರೆ. ಅವರು ಇಂತಹದೇ ಶ್ರೇಯಸ್ಕರ ಕಾರ್ಯವನ್ನು ತಮ್ಮ ಕುಟುಂಬದೊಳಗೂ ಸಾಧಿಸಿದ್ದಾರೆ. ಅವರ ಒಬ್ಬ ಹೆಣ್ಣುಮಗಳು ಡೆಹ್ರಾಡೂನ್‌ನಲ್ಲಿ ವೈದ್ಯಕೀಯವನ್ನು ಕಲಿಯುತ್ತಿದ್ದಾಳೆ. ಅವರ ದೊಡ್ಡ ಮಗ ಮತ್ತು ಇನ್ನೊಬ್ಬ ಮಗಳು ಎಂಜಿನಿಯರಿಂಗ್ ಪದವಿ ಪಡೆದುಕೊಂಡಿದ್ದಾರೆ. ಚಂದ್ರಭೂಷಣ್‌ರಿಗೆ ಇದರಲ್ಲಿ ಇನ್ನೂ ಮುಖ್ಯವಾದ ವಿಷಯವೆಂದರೆ ಅವರ ಮೂವರೂ ಮಕ್ಕಳು ತಮ್ಮ ಬದುಕಿನ ಆಯ್ಕೆಯನ್ನು ತಾವೇ ಮಾಡಿಕೊಂಡು ಡೆಹ್ರಾಡೂನ್‌ನಲ್ಲಿ ಸ್ವತಂತ್ರವಾಗಿ ವಾಸ ಮಾಡುತ್ತಿರುವುದು.

ಚಂದ್ರಭೂಷಣ್ ನಿಯತವಾಗಿ ಬರವಣಿಗೆಯಲ್ಲಿ ತೊಡಗಿಕೊಂಡಿದ್ದಾರೆ. ಡಯೆಟ್ (ಡಿಐಇಟಿ) ಪ್ರಕಟಣೆಗೆ ಶೈಕ್ಷಣಿಕ ಲೇಖನಗಳನ್ನು, 'ದೈನಿಕ್ ಜಾಗರಣ್', 'ಯುವವಾಣಿ' ಮುಂತಾದ ಜನಪ್ರಿಯ ಪತ್ರಿಕೆಗಳಲ್ಲಿ ಸಾರ್ವಜನಿಕ ಹಿತದೃಷ್ಟಿಯ ಲೇಖನಗಳನ್ನು, ಬರೆಯುತ್ತಾರೆ. ಉತ್ತರಾಖಂಡ್ ಜಿಲ್ಲೆಯಲ್ಲಿ ಲವಲವಿಕೆಯಿಂದ ಕಾರ್ಯ ನಿರ್ವಹಿಸುತ್ತಿರುವ

ಶಿಕ್ಷಕರ ವಾಟ್ಸಪ್ ಗುಂಪಿನಲ್ಲಿ ಅವರು ಹಾಕುವ ಬರಹಗಳು ಅವರ ಚಿಂತನಶೀಲತೆಗೆ, ವಿಚಾರವಂತಿಕೆಗೆ ಸಾಕ್ಷಿ. ನಮ್ಮ ಆಹ್ಲಾದಕರ ಚರ್ಚೆ ಕೊನೆ ಹಂತಕ್ಕೆ ಬರುತ್ತಿದ್ದಂತೆ ಅವರು ವಿನಯದಿಂದ ಈ ಸುಂದರ ಮಾತುಗಳನ್ನು ಹೇಳಿದರು: "ಶಿಕ್ಷಕನಾದದ್ದು ನನ್ನ ಅದೃಷ್ಟ. ಪ್ರತಿಫಲಾಪೇಕ್ಷೆಯಿಲ್ಲದೆ ಕೊಡಲೂ ಹಂಚಿಕೊಳ್ಳಲೂ ಸಾಧ್ಯವಿರುವ ವೃತ್ತಿ ಇದೊಂದೇ."

## "ದಿನವೂ ಕಲಿಯುವುದೇ ಶಿಕ್ಷಕರ ಮುಂದಿರುವ ಸವಾಲು"

**ರೇಖಾ ಚಮೋಲಿ**

ಪ್ರಾಥಮಿಕ ಶಾಲೆ, ಗಣೇಶ್‌ಪುರ, ಬಟವಾಡಿ ಬ್ಲಾಕ್
ಉತ್ತರಕಾಶಿ ಜಿಲ್ಲೆ, ಉತ್ತರಾಖಂಡ್

ಗಣೇಶಪುರದ ಪ್ರಾಥಮಿಕ ಶಾಲೆ ಉತ್ತರಕಾಶಿ ಪಟ್ಟಣಕ್ಕೆ ಬಲು ಸಮೀಪದಲ್ಲಿದೆ. ಈ ಗುಡ್ಡಗಾಡು ಜಿಲ್ಲೆಯಲ್ಲಿ ಹೆಚ್ಚಿನೆಲ್ಲಾ ಪ್ರಾಥಮಿಕ ಶಾಲೆಗಳೂ ದುರ್ಗಮ ಸ್ಥಳಗಳಲ್ಲಿ ಇದ್ದರೂ ಈ ಶಾಲೆ ಮಾತ್ರ ಹೆದ್ದಾರಿಯ ಸಮೀಪದಲ್ಲೇ ಇದೆ. ಆದ್ದರಿಂದಲೇ ಶಿಕ್ಷಕರು ಸಾಮಾನ್ಯವಾಗಿ ಈ ಶಾಲೆಗೆ ತಮ್ಮನ್ನು ಹಾಕಿಸಿಕೊಳ್ಳಲು ಇಷ್ಟಪಡುತ್ತಾರೆ. ಆದರೆ ಈ ಅನುಕೂಲದ ಹಿಂದೆಯೇ ಅವರಿಗೆ ಒಂದು ಅನನುಕೂಲವೂ ಇದೆ; ಶಾಲೆಯು ರಸ್ತೆಯ ಸಮೀಪವೇ ಇರುವುದರಿಂದ ಮೇಲಧಿಕಾರಿಗಳ ಉನ್ನತ ಮಟ್ಟದ ತನಿಖೆಯ ಕಾಟ ಜಾಸ್ತಿ ಇದೆ. ಆ ಕಾರಣದಿಂದ ಈ ಶಾಲೆಯ ಉಸಾಬರಿಯೇ ಬೇಡ ಎಂಬ ಶಿಕ್ಷಕರೂ ಇದ್ದಾರೆ.

ಗಣೇಶಪುರವನ್ನು ಒಳಗೊಂಡ ಬಟವಾಡಿ ಬ್ಲಾಕ್ ವಿಶೇಷವಾಗಿ ಸಂಪದ್ಭರಿತವೇನೂ ಅಲ್ಲ. ಆದರೆ ಉತ್ತರಕಾಶಿ ಪಟ್ಟಣಕ್ಕೂ ಅಕ್ಕ ಪಕ್ಕದ ಊರುಗಳಿಗೂ ಹಾಲು ಮತ್ತು ತರಕಾರಿಯನ್ನು ಸರಬರಾಜು ಮಾಡುವ ಗಣೇಶಪುರದ ಆರ್ಥಿಕ ಸ್ಥಿತಿ ಚೆನ್ನಾಗಿಯೇ ಇದೆ. 1991ರಲ್ಲಿ ಇಲ್ಲಿ ಘಟಿಸಿದ ತೀವ್ರ ಭೂಕಂಪದಿಂದ ಅದು ಚೇತರಿಸಿಕೊಂಡಿದೆ. 2013ರ ಪ್ರವಾಹವು ಅದೃಷ್ಟವಶಾತ್ ಈ ಊರನ್ನು ಬಾಧಿಸಲಿಲ್ಲ. ಭಾಗೀರಥಿ ನದಿಯ ಉಪನದಿಯೊಂದು ವರ್ಷವಿಡಿ ಇಲ್ಲಿ ಹರಿಯುತ್ತಿದ್ದು, ಈ ಊರಿನ ಸೌಭಾಗ್ಯಕ್ಕೆ ಅದೂ ಒಂದು ಕಾರಣ ಎಂದು ಬೇರೆ ಹೇಳಬೇಕಿಲ್ಲ.

ಗಣೇಶಪುರದ ಪ್ರಾಥಮಿಕ ಶಾಲೆಯಲ್ಲಿ ಐದು ತರಗತಿಗಳು ಇದ್ದು ಒಟ್ಟು ನಲವತ್ತೊಂದು ವಿದ್ಯಾರ್ಥಿಗಳಿದ್ದಾರೆ. ಕೆಲವು ವರ್ಷಗಳ ಹಿಂದಿನ ಒಂದು ಸಣ್ಣ ಅವಧಿಯನ್ನು ಬಿಟ್ಟರೆ ಅದು ಯಾವಾಗಲೂ ಇಬ್ಬರು ಶಿಕ್ಷಕರ ಶಾಲೆಯೇ ಆಗಿತ್ತು. ಶಾಲೆಯಲ್ಲಿ ಮೂರು ತರಗತಿ ಕೊಠಡಿಗಳು, ಒಂದು ಕಛೇರಿ ಕೊಠಡಿ ಇವೆ. ಪ್ರಾರ್ಥನಾ ಸಭೆಗೂ ಮಕ್ಕಳ ಇತರೇ ಚಟುವಟಿಕೆಗಳಿಗೂ ಇನ್ನೂರು ಚದರ ಅಡಿಯ ಒಂದು ಪುಟ್ಟ ಅಂಗಳವಿದೆ. ಇಲ್ಲಿನ ಇಬ್ಬರು ಶಿಕ್ಷಕರೂ ಮಹಿಳೆಯರೇ. ಲವಲವಿಕೆ, ಆತ್ಮವಿಶ್ವಾಸ, ಅಭಿವ್ಯಕ್ತಿ ಸಾಮರ್ಥ್ಯ ಇರುವ ರೇಖಾ ಚಮೋಲಿ ಮತ್ತು ಹೆಚ್ಚು ಶಾಂತ, ಸರಳ, ಸಹೋದ್ಯೋಗಿಗೆ ಎಲ್ಲ ಬೆಂಬಲ ನೀಡಬಲ್ಲ ವ್ಯಕ್ತಿತ್ವದ ಮಂಜು ರಾಣಾ ಇಲ್ಲಿದ್ದಾರೆ.

ಶಾಲೆಯಲ್ಲಿ ನೋಂದಾಯಿತರಾದ ಮಕ್ಕಳಲ್ಲಿ ಶೇಕಡಾ 65ರಷ್ಟು ಹೆಣ್ಣುಮಕ್ಕಳಿದ್ದು, ಹುಡುಗರು ಕೇವಲ ಶೇಕಡಾ 35. ದೇಶದ ಅನೇಕ ಭಾಗಗಳಲ್ಲಿರುವಂತೆ ಇಲ್ಲಿಯೂ

ಪೋಷಕರು ಗಂಡುಮಕ್ಕಳನ್ನು ಖಾಸಗಿ ಶಾಲೆಗಳಿಗೆ ಕಳಿಸುತ್ತಾರೆ. ಒಂದು ಖಾಸಗಿ ಶಾಲೆ ಹತ್ತಿರದಲ್ಲೇ ಇದ್ದು ಇನ್ನೆರಡು ಶಾಲೆಗಳು ಉತ್ತರಕಾಶಿ ಪಟ್ಟಣದಲ್ಲಿವೆ. ಇದಕ್ಕೆ ಪೋಷಕರು ತಿಂಗಳಿಗೆ 1,000 ರೂಪಾಯಿಗಳಿಗಿಂತಲೂ ಹೆಚ್ಚು ಶುಲ್ಕ ತೆರುತ್ತಾರೆ; ವಾಹನಕ್ಕೆ ಮಾಸಿಕ 1000 ರೂಪಾಯಿ ವೆಚ್ಚ ಬರುತ್ತದೆ. ಹೆಣ್ಣುಮಕ್ಕಳನ್ನು ಸರ್ಕಾರಿ ಶಾಲೆಗೆ ಕಳಿಸುತ್ತಾರೆ. ಮಳೆಗಾಲದ ತಿಂಗಳುಗಳಲ್ಲಿ ಮಳೆಯಿಂದಾಗಿ ಸಾಮಾನ್ಯ ಜನಜೀವನ ಅಸ್ತವ್ಯಸ್ತವಾಗಿ, ಶಾಲೆಯಲ್ಲಿನ ಹಾಜರಿ 30 ವಿದ್ಯಾರ್ಥಿಗಳಿಗೆ ಅಂದರೆ ಶೇಕಡಾ 75ಕ್ಕೆ ಇಳಿಯುತ್ತದೆ. ಗಂಡುಮಕ್ಕಳ ಪರವಾಗಿ ಪೋಷಕರ ತಾರತಮ್ಯ ಧೋರಣೆಯನ್ನು ಬೊಟ್ಟುಮಾಡಿ ತೋರಿಸುತ್ತಾ ರೇಖಾ ಚಮೋಲಿ ಹೇಳುತ್ತಾರೆ, "ಮಳೆ ಹೆಚ್ಚಾದ ದಿನಗಳಲ್ಲಿ ಪೋಷಕರು ಹೆಣ್ಣುಮಕ್ಕಳನ್ನು ಬೇಕಾದರೆ ಶಾಲೆಗೆ ಕಳಿಸುತ್ತಾರೆ, ಆದರೆ ಗಂಡುಮಕ್ಕಳು ನೆನೆದು ಒದ್ದೆಯಾಗದಂತೆ ಮನೆಯಲ್ಲೇ ಬೆಚ್ಚಗೆ ಇರಿಸುತ್ತಾರೆ. ಹೆಣ್ಣುಮಕ್ಕಳು ಏಳು-ಎಂಟು ವಯಸ್ಸಿಗೇ ತಾಯಂದಿರಿಗೆ ಅಡುಗೆಯಲ್ಲಿ ನೆರವಾಗುತ್ತಾರೆ. ಆದರೆ ಗಂಡುಮಕ್ಕಳು ತಾವು ಊಟ ಮಾಡಿದ ತಟ್ಟೆಗಳನ್ನೂ ಸಹ ಎತ್ತಿಡುವುದಿಲ್ಲ. ಇದೆಲ್ಲವೂ ಬದಲಾಗಬೇಕು. ಶಾಲೆಯಲ್ಲಿ ಉತ್ತಮ ಶಿಕ್ಷಣವು ಗಂಡುಮಕ್ಕಳಲ್ಲಿ ನ್ಯಾಯ ಮತ್ತು ಸಮಾನತೆಯ ಪ್ರಜ್ಞೆಯನ್ನು ಬೆಳೆಸಬೇಕು; ಪಿತೃಪ್ರಾಧಾನ್ಯ ಪದ್ಧತಿಯಿಂದಲೂ ಪುರುಷ ಆಧಿಪತ್ಯದಿಂದಲೂ ನಮ್ಮನ್ನು ಬಿಡುಗಡೆಗೊಳಿಸಬೇಕು."

ರೇಖಾ ಚಮೋಲಿ ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ ಮತ್ತು ರಸಾಯನಶಾಸ್ತ್ರಗಳೊಂದಿಗೆ ಬಿಎಸ್‌ಸಿ ಪದವಿಯನ್ನು ಪಡೆದು ಜೊತೆಯಲ್ಲಿ ಬಿಟಿಸಿ ಅರ್ಹತೆಯೊಂದಿಗೆ 2004ರಲ್ಲಿ ಶಿಕ್ಷಣ ಇಲಾಖೆಯನ್ನು ಸೇರಿದರು. ಆಕೆ ಗಣೇಶಪುರ ಶಾಲೆಯಲ್ಲಿ 2009ರಿಂದಲೂ ಇದ್ದಾರೆ. ಒಂದರಿಂದ ಐದನೇ ತರಗತಿವರೆಗೆ, ಎಲ್ಲಾ ವಿಷಯಗಳನ್ನು ರೇಖಾ ಮತ್ತು ಮಂಜು ತಮ್ಮಲ್ಲಿ ಹಂಚಿಕೊಂಡಿದ್ದಾರೆ. ಮಂಜು, ರೇಖಾಗಿಂತ ಐದು ವರ್ಷ ಹಿರಿಯರು; ಸೇವಾ ಹಿರಿತನದಲ್ಲಿಯೂ ಅವರೇ ಮುಂದೆ. ಆದರೆ ವಾಸ್ತವದಲ್ಲಿ ರೇಖಾ ಅವರೇ ನಾಯಕಿ. ಈ ವಿಷಯದಲ್ಲಿ ಮಂಜು ಅವರಿಗೆ ಯಾವ ತಕರಾರೂ ಇಲ್ಲ, ಬದಲಿಗೆ ಅವರು ರೇಖಾರವರನ್ನು ಪೂರ್ಣ ಮನಸ್ಸಿನಿಂದ ಬೆಂಬಲಿಸುತ್ತಾರೆ. ಗುಣಮಟ್ಟ ಮತ್ತು ಮೂಲಸೌಕರ್ಯಗಳ ಮಾನದಂಡದ ಆಧಾರದಲ್ಲಿ ಶಾಲೆಗಳ ಸ್ಥಾನ ನಿರ್ಣಯ (ರೇಟಿಂಗ್) ಮಾಡುವ ವ್ಯವಸ್ಥೆ ಉತ್ತರಾಖಂಡ್‌ನಲ್ಲಿ ಜಾರಿಯಲ್ಲಿದೆ. ಶಾಲೆಯಲ್ಲಿ ಅಗತ್ಯಕ್ಕೆ ತಕ್ಕಷ್ಟು ಕೊಠಡಿಗಳಿರುವುದರಿಂದ ಹಾಗೂ ಉಪಯೋಗದಲ್ಲಿರುವಂಥ ಶೌಚಾಲಯ ಇರುವುದರಿಂದ, ಅಂದರೆ ಮೂಲಸೌಕರ್ಯಕ್ಕೆ ಸಂಬಂಧಿಸಿದ ಎರಡು ಅಂಶಗಳು ಪೂರೈಕೆಯಾಗಿರುವುದರಿಂದ, ಈ ಶಾಲೆಗೆ ರೇಟಿಂಗ್‌ನಲ್ಲಿ 'ಎ' ಶ್ರೇಣಿ ಲಭ್ಯವಾಗಿದೆ. ಇನ್ನು ಕಲಿಕೆಗೆ ಸಂಬಂಧಿಸಿದಂತೆ ಮಾಪನ ಮಾಡಿದ ವಿಷಯಗಳಲ್ಲಿ 'ಎ' ಅಥವಾ 'ಬಿ' ಶ್ರೇಣಿ ಸಿಕ್ಕಿದೆ.

ತಮ್ಮ ಶಾಲೆಯ ಮಕ್ಕಳು ಪಠ್ಯವಿಷಯಗಳ ಕಲಿಕೆಯ ಮಟ್ಟವನ್ನೂ ಮೀರಿ ಮುಂದೆ ಸಾಗಬೇಕು ಎಂದು ರೇಖಾ ಬಯಸುತ್ತಾರೆ. ನಿಜವಾದ ಶಿಕ್ಷಣವು ಮಗುವಿನಲ್ಲಿ ಸಮಾಜದ ಎಲ್ಲ ಸದಸ್ಯರ ಬಗ್ಗೆ ಗೌರವವನ್ನು, ಆತ್ಮವಿಶ್ವಾಸ ಹಾಗೂ ಆತ್ಮಗೌರವವನ್ನು ಸೃಷ್ಟಿಸಬೇಕು ಎಂದು ರೇಖಾ ಹೇಳುತ್ತಾರೆ. ತಮ್ಮ ಶಾಲೆಯಿಂದ ತೇರ್ಗಡೆ ಹೊಂದಿದ ಪ್ರತಿಯೊಂದು

ಮಗುವಿನ ಪ್ರಗತಿಯನ್ನು ರೇಖಾ ಗಮನಿಸುತ್ತಿರುತ್ತಾರೆ. ಆ ಮಕ್ಕಳೂ ಸಹ ಅವರೊಂದಿಗೆ ಸಂಪರ್ಕ ಇರಿಸಿಕೊಂಡಿದ್ದಾರೆ. ತಮ್ಮ ಶೈಕ್ಷಣಿಕ ಪ್ರಗತಿ, ಕುಟುಂಬದ ಹಾಗೂ ಸಮಾಜದ ಆಗುಹೋಗುಗಳು ಮತ್ತಿತರ ಸಣ್ಣಪುಟ್ಟ ವಿಷಯಗಳನ್ನು ಕೂಡಾ ಅವರೊಡನೆ ಚರ್ಚಿಸುತ್ತಾರೆ. 'ಮಕ್ಕಳು ಆತ್ಮವಿಶ್ವಾಸವನ್ನು ಬೆಳೆಸಿಕೊಂಡು ಪೋಷಕರ ಹಾಗೂ ಸಮುದಾಯದವರ ಗೌರವವನ್ನೂ ವಿಶ್ವಾಸವನ್ನೂ ಗಳಿಸಿರುವ ರೀತಿಯನ್ನು ನೋಡಿದರೆ ನನ್ನ ಮನಸ್ಸು ಹಗುರವಾಗುತ್ತದೆ. ನಮಗೆ ಪ್ರೇರಣೆ ಉಂಟಾಗುವುದು ಮೇಲಧಿಕಾರಿಗಳ ಹೊಗಳಿಕೆಯಿಂದಲೋ ಮನ್ನಣೆಯಿಂದಲೋ ಅಲ್ಲ; ಬದಲಾಗಿ ನಮ್ಮ ಕೆಲಸವನ್ನು ನೋಡಿ ಅರ್ಥಮಾಡಿಕೊಳ್ಳುವ ಜನರಿಂದ' ಅನ್ನುತ್ತಾರೆ ರೇಖಾ. ಆ ಶಾಲೆಯ ಮಕ್ಕಳು ನಮ್ಮೊಡನೆ ಮಾತನಾಡುವ ರೀತಿಯಲ್ಲಿ, ತಮಗೆ ಹೊಸದಾಗಿರುವ ಪಠ್ಯಪುಸ್ತಕವೊಂದನ್ನು ಅವರು ಓದುವ, ಬರೆಯುವ ಮತ್ತು ಅರ್ಥೈಸಿಕೊಳ್ಳುವ ವಿಧಾನದಲ್ಲಿ, ಪಠ್ಯಪುಸ್ತಕದ ಆಚೆಗಿರುವ ಅಂಕಗಣಿತದ ಸಮಸ್ಯೆಗಳನ್ನು ಕೂಡಾ ಬಿಡಿಸುವ ರೀತಿಯಲ್ಲಿ ನಮಗೆ ಆಕೆ ಹೇಳಿದ 'ಆತ್ಮವಿಶ್ವಾಸ'ಎಂದರೆ ಏನು ಎಂಬುದು ವ್ಯಕ್ತವಾಗುತ್ತದೆ.

ಚಿಂತನಶೀಲ ಕೆಲಸಗಾರರಾದ ರೇಖಾ, ತಮ್ಮ ಕೆಲಸವನ್ನು ಕುರಿತಾದ ಸಾಕಷ್ಟು ವಿವರವಾದ ದೈನಂದಿನ ಕೆಲಸಕಾರ್ಯಗಳ ಆತ್ಮಾವಲೋಕನವನ್ನು ದಿನಚರಿಯಲ್ಲಿ ದಾಖಲು ಮಾಡುತ್ತಾರೆ. "ನಿರಂತರ ಕಲಿಕೆ ಹಾಗೂ ಬೆಳವಣಿಗೆ– ಇದೇ ಶಿಕ್ಷಕರ ಮುಂದಿರುವ ಸವಾಲು. 2004ರಲ್ಲಿ ನಾನು ಎಲ್ಲಿಂದ ಹೊರಟೆ, ಆಮೇಲೆ ಐದು ವರ್ಷಗಳ ನಂತರ ಎಲ್ಲಿದ್ದೆ, ಹೇಗೆ ಅಭಿವೃದ್ಧಿ ಹೊಂದಿ ಇಲ್ಲಿಗೆ ಬಂದಿದ್ದೇನೆ ಎಂಬುದು ನೆನಪಿರಬೇಕು. ಪ್ರತಿಯೊಂದು ದಿನವೂ ಕಲಿಯಲು ಬೇಕಾದ ಶಕ್ತಿಯನ್ನು ನಾನು ಸಂಪಾದಿಸಿಕೊಳ್ಳಬೇಕು." ಇಂಥ ದೃಷ್ಟಿಕೋನ ಇರುವ ವ್ಯಕ್ತಿ ಉತ್ತರಕಾಶಿಯ ವಿವಿಧ ಶೈಕ್ಷಣಿಕ ವೇದಿಕೆಗಳಲ್ಲಿ ನಡೆಯುವ ಚರ್ಚೆಗಳು ಮತ್ತು ಕಾರ್ಯಾಗಾರಗಳಲ್ಲಿ ವೈಯಕ್ತಿಕ ಅಭಿವೃದ್ಧಿಗೆ ಅಗತ್ಯವಾದ ಅಮೂಲ್ಯ ಶಕ್ತಿಯ ಸೆಲೆಯನ್ನು ಕಂಡುಕೊಳ್ಳುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಉತ್ತರಕಾಶಿಯಲ್ಲಿ ಸಂಘಟಿತವಾಗುವ ಎಲ್ಲಾ ಶಿಕ್ಷಕ ಅಭಿವೃದ್ಧಿ ಕಾರ್ಯಾಗಾರಗಳಲ್ಲಿ ತಪ್ಪದೇ ಆಸಕ್ತಿಯಿಂದ ಭಾಗವಹಿಸುವ ರೇಖಾ, ವಿಟಿಎಫ್ ಮತ್ತು ಟಿಎಲ್‌ಸಿಗಳಲ್ಲೂ ಹಾಜರಾಗುತ್ತಾರೆ. ಅದೇ ಸಂಜೆ ನಾವು ಉತ್ತರಕಾಶಿಯಲ್ಲಿ ನಡೆದ ವಿಟಿಎಫ್ ಒಂದಕ್ಕೆ ಭೇಟಿ ನೀಡಿದೆವು. ಅಲ್ಲಿ ಸುಮಾರು ಇಪ್ಪತ್ತು ಮಂದಿ ಶಿಕ್ಷಕರು ಮಕ್ಕಳ ಭಾಷಾ ಸಾಮರ್ಥ್ಯವನ್ನು ಬೆಳೆಸುವಲ್ಲಿ ಕಾವ್ಯದ ಪಾತ್ರವೇನು ಎಂಬುದರ ಬಗ್ಗೆ ಚರ್ಚಿಸುತ್ತಿದ್ದರು. ಈ ವೇದಿಕೆಯಲ್ಲಿ ರೇಖಾ ಅವರು ಯಾವ ಹಿಂಜರಿಕೆಯೂ ಇಲ್ಲದೆ ಭಾಗವಹಿಸಿ ಅಲ್ಲಿ ಚರ್ಚಿಸುತ್ತಿದ್ದ ವಿಷಯ ಬಗ್ಗೆ ಮೌಲ್ಯಯುತವಾದ ಕೊಡುಗೆ ನೀಡಿದ್ದನ್ನು ನಾವು ಕಂಡೆವು. ರೇಖಾ ಕಾವ್ಯದಲ್ಲಿ ಗಾಢ ಆಸಕ್ತಿಯನ್ನು ಬೆಳೆಸಿಕೊಂಡಿದ್ದಾರೆ. ಕೆಲವು ವರ್ಷಗಳ ಹಿಂದೆ ಪ್ರಕಟವಾದ ಅವರ "ಪೇಡ್ ಬನೀ ಸ್ತ್ರೀ" ("ಮರವು ಹೆಣ್ಣಾಯಿತು") ಎಂಬ ಕವನ ಸಂಕಲನವು ಪುರುಷ ಪ್ರಧಾನ ಸಮಾಜದಲ್ಲಿ ಬದುಕುತ್ತಿರುವ ಹೆಣ್ಣಿನ ಆತಂಕಗಳು ಹಾಗೂ ಭಾವನೆಗಳ ಕುರಿತಾಗಿಯೇ ಇವೆ. ಅವರ ಗಂಡ ಭಟ್‌ವಾರಿ ಎಂಬ ಸ್ಥಳದಲ್ಲಿ ಪಟ್ವಾರಿ ಆಗಿದ್ದಾರೆ. ಅವರು ಕರುಣಾಮಯಿಯೂ ಪ್ರಾಮಾಣಿಕರೂ ಆದ ಅಧಿಕಾರಿ ಎಂಬ ಹೆಸರು

ಗಳಿಸಿದ್ದಾರೆ. ಅವರು ಮಡದಿಯ ಎಲ್ಲ ಸಾಹಿತ್ಯಕ ಆಸಕ್ತಿಗಳಲ್ಲಿ ಸಹವರ್ತಿ ಅಲ್ಲದೇ ಇರಬಹುದು; ಆದರೆ ಈ ಅಸಾಧಾರಣ ಬಿಚ್ಚು ಮನಸ್ಸಿನ ಮತ್ತು ಬದ್ಧತೆಯುಳ್ಳ ಶಾಲಾ ಶಿಕ್ಷಕಿಗೆ ಎಲ್ಲ ಬೆಂಬಲವನ್ನೂ ನೀಡುತ್ತಿದ್ದಾರೆ.

ತಮ್ಮ ವಿಚಾರಗಳಿಗೆ ಅಭಿವ್ಯಕ್ತಿಯ ರೂಪವನ್ನು ಕೊಡುವ ಉತ್ತಮ ಸಾಮರ್ಥ್ಯ ರೇಖಾ ಅವರಲ್ಲಿದೆ. ಅವರು ಹೇಳುತ್ತಾರೆ: "ಯೋಚನಾಶಕ್ತಿ ಇರುವ ಉದ್ಯೋಗಸ್ಥ ಮಹಿಳೆಯ ಬಗ್ಗೆ ಸಮಾಜದ ದೃಷ್ಟಿಕೋನ ವಿಲಕ್ಷಣವಾದುದು. ಶಿಕ್ಷಕಿಯೊಬ್ಬಳು ಮನೆಯಲ್ಲಿ ಪುಸ್ತಕಗಳನ್ನು ಓದಿದರೆ 'ಅವಳ ಆಟಿಟ್ಯೂಡ್ ನೋಡು' ಅನ್ನುತ್ತಾರೆ. ಅವಳು ಟಿ.ವಿ. ನೋಡುತ್ತಿದ್ದರೆ, ಹೆಣಿಗೆ ಮಾಡುತ್ತಿದ್ದರೆ ಅಥವಾ ಶಾಪಿಂಗ್‌ಗೆ ಹೋದರೆ ಅದು ಮಾಮೂಲಿ ನಡವಳಿಕೆ ಅನಿಸುತ್ತದೆ. ಹೆಣ್ಣುಮಕ್ಕಳ ಮೇಲೆ ಹೇರುವ ನಿರ್ಬಂಧಗಳಿಗಿಂತಲೂ ಅವಳು ಮಾಡುವ ಪ್ರತಿಯೊಂದು ಕೆಲಸವನ್ನೂ ಕುಟುಂಬದ ಪ್ರತಿಷ್ಠೆಗೆ ತಳಕು ಹಾಕುವ ಪ್ರವೃತ್ತಿಯೇ ಹೆಚ್ಚು ದಮನಕಾರಿಯಾದುದು. ಹೆಣ್ಣುಮಕ್ಕಳ ಮೇಲೆ ಹೇರುವ ಪ್ರತಿಯೊಂದು ನಿರ್ಬಂಧದ ಮಾತು ಕೂಡಾ 'ನಾಕ್ ಕಾಟ್ ಜಾಯೆಗಿ' (ಕುಟುಂಬದ ಪ್ರತಿಷ್ಠೆ ಮಣ್ಣುಪಾಲಾದೀತು) ಎಂಬ ಹೇಳಿಕೆಯೊಡನೆ ಮುಗಿಯುತ್ತದೆ." ಕಲಿತು ಬೆಳೆಯಬೇಕು ಎಂಬ ಮಹತ್ವಾಕಾಂಕ್ಷೆ ಇರುವ ಶಿಕ್ಷಕಿಯರಿಗೆ ಅನೇಕ ಸವಾಲುಗಳು ಅನೇಕ ರೂಪಗಳಲ್ಲಿ ಎದುರಾಗುತ್ತವೆ. ತರಬೇತಿ ಶಿಬಿರಗಳಲ್ಲೂ ಕಾರ್ಯಾಗಾರಗಳಲ್ಲೂ ಪುರುಷರು ಬೇಕೆಂದಾಗ ಪಾಲ್ಗೊಳ್ಳಬಹುದು. ಆದರೆ ಶಿಕ್ಷಕಿಯರು ಮಾತ್ರ ಅಂತಹ ಪ್ರಯಾಣಕ್ಕೆ ತಿಂಗಳುಗಳ ಮೊದಲೇ ತಯಾರಿ ನಡೆಸಬೇಕು, ಕುಟುಂಬದವರನ್ನು ಒಪ್ಪಿಸಲು ಪರದಾಡಬೇಕು. ಹಲವೊಮ್ಮೆ ಶಿಕ್ಷಕಿಯರ ಕುಟುಂಬದಲ್ಲಿ ಅವರ ವೃತ್ತಿಜೀವನದ ಬಗ್ಗೆ ಗಂಡಸರಿಗೆ ಆಸಕ್ತಿ ಇರುವುದಿಲ್ಲ. ಅನೇಕ ಮಂದಿ ಶಿಕ್ಷಕಿಯರು ತಮ್ಮ ಮನೆಯ ಗಂಡಸರು ತಮ್ಮ ಕೆಲಸಗಳಲ್ಲಿ ಹಸ್ತಕ್ಷೇಪ ಮಾಡಿ ಅಡ್ಡಿಪಡಿಸದಿರುವುದೇ ತಮ್ಮ ಅದೃಷ್ಟವೆಂದು ಪರಿಗಣಿಸುತ್ತಾರೆ.

---

## "ಮಕ್ಕಳು ಮಾಹಿತಿ ತುಂಬಬೇಕಾದ ಖಾಲಿ ಕೊಡಗಳಲ್ಲ"

**ಶ್ರೀಶೈಲ**

ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕರಡ್ಕಲ್ ಕ್ಯಾಂಪ್
ಸುರಪುರ ಬ್ಲಾಕ್, ಯಾದಗಿರಿ ಜಿಲ್ಲೆ, ಕರ್ನಾಟಕ

---

ಸುರಪುರ ತಾಲ್ಲೂಕು ಎಂದರೆ ಸುರಪುರ, ನಾರಾಯಣಪುರ ಮತ್ತು ಕೆಂಭಾವಿ ಎಂಬ ಮೂರು ಒಂದರ ಜೊತೆಗೆ ಇನ್ನೊಂದು ಬೆಸೆದುಕೊಂಡಂಥ ಪ್ರದೇಶಗಳು. ಕೆಂಭಾವಿಯಲ್ಲಿರುವ ಒಂದು ಸಣ್ಣ ಹಳ್ಳಿಯೇ ಕರಡ್ಕಲ್ ಕ್ಯಾಂಪ್. ಇಲ್ಲಿನ ನಿವಾಸಿಗಳಲ್ಲಿ ಪರಿಶಿಷ್ಟ ಜಾತಿಯವರು ಹಾಗೂ ಮುಸಲ್ಮಾನರೇ ಹೆಚ್ಚು. ಅಲ್ಪಪ್ರಮಾಣದಲ್ಲಿ ಪ್ರಬಲ ರೆಡ್ಡಿ ಸಮುದಾಯದವರಿದ್ದಾರೆ. ಇಲ್ಲಿ ಒಂದರಿಂದ ಐದನೇ ತರಗತಿವರೆಗಿನ ಕಿರಿಯ ಪ್ರಾಥಮಿಕ ಶಾಲೆಯೊಂದಿದೆ. ಇದು 2004ರಲ್ಲಿ ಆರಂಭವಾಯಿತು. ಸಣ್ಣ ಗ್ರಾಮದ ಶಾಲೆಯಾದ್ದರಿಂದ ಇಲ್ಲಿ ನಲವತ್ತೆರಡು ವಿದ್ಯಾರ್ಥಿಗಳು ಮಾತ್ರ ಇದ್ದಾರೆ.

ಬಹುತೇಕ ಈ ಶಾಲೆಯ ಆರಂಭದಿಂದಲೂ ಶ್ರೀಶೈಲ ಇಲ್ಲಿದ್ದಾರೆ. ವಿಜಯಪುರ ಮೂಲದವರಾದ ತರುಣ ಶ್ರೀಶೈಲ, ಪಿಯುಸಿ ಮಾಡಿ ಟಿಸಿಎಚ್ (ಟೀಚರ್ ಸರ್ಟಿಫಿಕೇಟ್ ಹೈಯರ್)ಅನ್ನು ಮುಗಿಸುತ್ತಿದ್ದಂತೆ ಕೆಲಸ ಸಿಕ್ಕಿ ಇಲ್ಲಿಗೆ ನೇಮಕಗೊಂಡರು. ಕರಡ್ಕಲ್ ಕ್ಯಾಂಪ್‌ನ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗೆ ಸೇರಿದಾಗ, ಅಲ್ಲಿದ್ದದ್ದು ಕೇವಲ ಒಂದು ಕೊಠಡಿ. ಆಗತಾನೆ ಕೆಲಸಕ್ಕೆ ಸೇರಿದ ಇನ್ನೊಬ್ಬ ಸಹೋದ್ಯೋಗಿಯನ್ನೂ ಜೊತೆಗೂಡಿಕೊಂಡು ಶ್ರೀಶೈಲರು ಹಳ್ಳಿಯಲ್ಲಿ ಮನೆಯಿಂದ ಮನೆಗೆ ಸುತ್ತಾಡಿ ಪೋಷಕರನ್ನು ಒಪ್ಪಿಸಿ ಮೊದಲನೆಯ ತರಗತಿಗೆ ಇಪ್ಪತ್ತು ಮಕ್ಕಳನ್ನು ನೊಂದಾಯಿಸಿಕೊಂಡರು. ಒಂದೊಂದೇ ಹೆಜ್ಜೆ ಮುಂದುವರೆಯುತ್ತಾ, ಪ್ರತಿವರ್ಷವೂ ಒಂದೊಂದು ಹೊಸ ತರಗತಿಗಳನ್ನು ಆರಂಭಿಸಿದರು. ಎಸ್‌ಡಿಎಂಸಿ ಅಧ್ಯಕ್ಷರಿಂದ ಅತ್ಯುತ್ತಮ ಬೆಂಬಲ ದೊರೆಯಿತು. ಇಬ್ಬರೂ ಜೊತೆಗೂಡಿ ಇನ್ನೊಂದು ಕೊಠಡಿಯನ್ನು ಕಟ್ಟಿಸಿಕೊಂಡರು. ಅಧ್ಯಕ್ಷರು 4,000 ರೂ ದೇಣಿಗೆ ನೀಡಿದರೆ, ಇಬ್ಬರು ಶಿಕ್ಷಕರೂ ಸಹ 2,000 ರೂ.ಗಳನ್ನು ತಮ್ಮ ಸಂಬಳದಿಂದಲೇ ಉಳಿಸಿ ಸೇರಿಸಿದರು. ಈ ಹಣದಿಂದ ಶಾಲೆಗೆ ಅಗತ್ಯವಿದ್ದ ಕೆಲವೊಂದು ಮೂಲಭೂತ ಸಾಮಗ್ರಿಗಳನ್ನು ಖರೀದಿಸಿದರು.

ಈಗ ಕರಡ್ಕಲ್ ಕ್ಯಾಂಪ್‌ನ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗೆ ಯಾರೇ ಭೇಟಿ ನೀಡಿದರೂ ಚೆನ್ನಾಗಿ, ಶುಚಿಯಾಗಿ ಇರುವ ಶಾಲೆ, ಸುಂದರವಾದ ಕೈತೋಟ, ಉತ್ತಮ ಸ್ಥಿತಿಯಲ್ಲಿರುವ ಶೌಚಾಲಯ ಇವುಗಳನ್ನೆಲ್ಲ ನೋಡಿ ಸಂತೋಷ ಪಡುವುದು ಸಹಜ. ಇದು ರಾತ್ರಿ ಬೆಳಗಾಗುವುದರಲ್ಲಿ ನಡೆದ ಅಭಿವೃದ್ಧಿಯಲ್ಲ. ಶ್ರೀಶೈಲ ಅವರು ಹನ್ನೆರಡು ವರ್ಷಗಳ ಪರಿಶ್ರಮದಿಂದ ಇವನ್ನೆಲ್ಲ ನಿರ್ಮಿಸಿ ಈ ಸ್ಥಿತಿಗೆ ತಂದಿದ್ದಾರೆ. ಈತ ಇಲ್ಲಿನ ಸಮುದಾಯದೊಂದಿಗೆ ಮತ್ತು ಎಸ್‌ಡಿಎಂಸಿಯೊಂದಿಗೆ ಅತ್ಯುತ್ತಮ ಸಂಬಂಧವನ್ನು ಬೆಳೆಸಿಕೊಂಡಿದ್ದಾರೆ. ಪೋಷಕರೊಂದಿಗಿನ ಅವರ ಸಂಬಂಧವು ಪರಸ್ಪರ ನಂಬಿಕೆ, ವಿಶ್ವಾಸದ ಮೇಲೆ ಆಧರಿತವಾಗಿದೆ. ಮೊದಲು ಕೆಲಸವನ್ನು ಆರಂಭಿಸಿದಾಗ ಶ್ರೀಶೈಲ ಪ್ರತಿಯೊಂದು ಮನೆಗೂ ಭೇಟಿ ನೀಡಿ ಪೋಷಕರೊಂದಿಗೆ ಮಕ್ಕಳನ್ನು ಶಾಲೆಗೆ ಕಳಿಸಿಕೊಡಿ ಎಂದು ಬೇಡಿಕೊಳ್ಳಬೇಕಿತ್ತು. ಪ್ರತಿಯೊಬ್ಬ ಎಸ್‌ಡಿಎಂಸಿ ಸದಸ್ಯರ ಮನೆಗೂ ಹೋಗಿ ದಯಮಾಡಿ ಸಭೆಗಳಿಗೆ ಬನ್ನಿ ಎಂದು ವಿನಂತಿ ಮಾಡಿಕೊಳ್ಳಬೇಕಿತ್ತು. ಆದರೆ ಈಗ ವಿಷಯ ತಿಳಿಸಿದರೆ ಸಾಕು ಅವರೆಲ್ಲರೂ ಶಾಲೆಗೆ ಸಂಬಂಧಿಸಿದ ಕೆಲಸಗಳಿಗೆ, ಸಭೆಗಳಿಗೆ ಬಂದು ಸೇರುತ್ತಾರೆ. ಶಾಲೆಯು ಹಳೆಯ ವಿದ್ಯಾರ್ಥಿಗಳೊಡನೆಯೂ ಉತ್ತಮ ಸಂಬಂಧವನ್ನು ಹೊಂದಿದೆ; ಅವರು ಆಗಾಗ್ಗೆ ಶಾಲೆಗೆ ಬರುತ್ತಾರೆ. ನಾವು ಅಲ್ಲಿಗೆ ಹೋದ ದಿನವೇ ಮೊರಾರ್ಜಿ ಶಾಲೆಯಲ್ಲಿ ಈಗ ಓದುತ್ತಿರುವ ಇಬ್ಬರು ಹಳೆಯ ವಿದ್ಯಾರ್ಥಿಗಳು ಶ್ರೀಶೈಲ ಅವರನ್ನು ಕಾಣಲು ಬಂದಿದ್ದರು.

ಕಾಕತಾಳೀಯವೆಂಬಂತೆ ಮಾರನೆಯ ದಿನವೇ ಶಾಲೆಯ 8ನೆಯ ವಾರ್ಷಿಕೋತ್ಸವ ನಡೆಯುವುದಿತ್ತು. ನಾವು ಆ ಕಾರ್ಯಕ್ರಮದ ಬಗ್ಗೆಯೂ ಮಾತನಾಡಿದೆವು. 2009ರಲ್ಲಿ ಮೊದಲ ತಂಡದ ವಿದ್ಯಾರ್ಥಿಗಳು 5ನೆಯ ತರಗತಿಯನ್ನು ಮುಗಿಸಿದಾಗ ಮೊದಲನೆಯ ವಾರ್ಷಿಕೋತ್ಸವವನ್ನು ಆಚರಿಸಲಾಗಿತ್ತು. ಮುಂದಿನ ವರ್ಷಗಳಲ್ಲಿ ಹಳೆಯ ವಿದ್ಯಾರ್ಥಿಗಳು ತಾವಾಗಿಯೇ ಬಂದು ವಾರ್ಷಿಕೋತ್ಸವದಲ್ಲಿ ತೊಡಗಿಸಿಕೊಂಡು,

ಸಂಘಟಿಸಿ, ಯಶಸ್ವಿಯಾಗಿ ನಡೆಸಿಕೊಟ್ಟಿದ್ದಾರೆ. ಸಮುದಾಯವೂ ಇದಕ್ಕೆ ಧನಸಹಾಯ ಮಾಡುತ್ತದೆ. ಕರಡ್ಕಲ್ ಕ್ಯಾಂಪ್‌ನ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಯಿಂದ ಹೊರಬರುವ ಪ್ರತಿಯೊಬ್ಬ ವಿದ್ಯಾರ್ಥಿಗೂ ಶಾಲೆಯು ಒಂದು ಶಬ್ದಕೋಶ ಅಥವಾ ಇನ್ನಾವುದಾದರೂ ಪುಸ್ತಕವನ್ನು ಉಡುಗೊರೆ ಕೊಡುವುದು ವಾಡಿಕೆಯಾಗಿದೆ.

ವಿದ್ಯಾರ್ಥಿಗಳ ಗುಣಮಟ್ಟವನ್ನು ಗಮನಿಸಿದರೆ ಶಾಲೆಯು ಕೊಡುವ ಶಿಕ್ಷಣದ ಗುಣಮಟ್ಟ ಸ್ವಯಂವೇದ್ಯವಾಗುತ್ತದೆ. ಪ್ರತಿವರ್ಷವೂ ಐದನೇ ತರಗತಿಯ ಒಂಭತ್ತು ವಿದ್ಯಾರ್ಥಿಗಳಲ್ಲಿ ನಾಲ್ಕು ವಿದ್ಯಾರ್ಥಿಗಳು ಪ್ರವೇಶ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಮೊರಾರ್ಜಿ ಶಾಲೆಯನ್ನು ಸೇರುತ್ತಾರೆ. ಈ ಪರೀಕ್ಷೆಗೆ ಶ್ರೀಶೈಲರೂ ಅವರ ಸಹೋದ್ಯೋಗಿಯೂ ಪ್ರತಿದಿನವೂ ಒಂದಿಷ್ಟು ಸಮಯವನ್ನು ವಿನಿಯೋಗಿಸಿ, ಪರಿಶ್ರಮ ವಹಿಸಿ ಮಕ್ಕಳನ್ನು ತಯಾರು ಮಾಡುತ್ತಾರೆ. ಶಾಲೆಗೆ 'ಅತ್ಯುತ್ತಮ ವಿದ್ಯಾರ್ಥಿ ಸ್ನೇಹಿ ಪ್ರಶಸ್ತಿ' ಬಂದಿದೆ. ಶ್ರೀಶೈಲ ಅವರಿಗೆ 'ಅತ್ಯುತ್ತಮ ನಲಿ–ಕಲಿ ಶಿಕ್ಷಕ' ಪ್ರಶಸ್ತಿ ದೊರಕಿದೆ. ಶಾಲೆಯು ಉತ್ತಮ ಮಟ್ಟವನ್ನು ಸಾಧಿಸಿರುವುದಕ್ಕೆ ಅಲ್ಲಿನ ಸಮುದಾಯದವರಿಗೆ ಗಾಢವಾದ ಮೆಚ್ಚುಗೆ ಇದೆ. ತಮ್ಮ ಹಳ್ಳಿಯಂತಹ ಕುಗ್ರಾಮದ ಶಾಲೆಗೆ ಇದು ಎಂಥ ಅಸಾಧಾರಣ ಸಾಧನೆ ಎಂಬುದು ಅವರಿಗೆ ಅರ್ಥವಾಗಿದೆ. ಅವರಲ್ಲಿ ಶಾಲೆಯ ಬಗ್ಗೆ ಹೆಮ್ಮೆ ಇದೆ; ಶಾಲೆಯ ಧೀರೋದಾತ್ತ ಶಿಕ್ಷಕನ ಬಗ್ಗೆ ತುಂಬು ಮಮತೆಯೂ ಇದೆ.

ಶ್ರೀಶೈಲ ಅವರ ವಾಸ ಹತ್ತು ಕಿಲೋಮೀಟರ್ ದೂರದ ಕೆಂಭಾವಿಯಲ್ಲಿ. ಅವರು ಶಾಲೆಗೆ ಮೋಟರ್ ಬೈಕ್‌ನಲ್ಲಿ ಪ್ರಯಾಣ ಮಾಡುತ್ತಾರೆ. ಬೆಳಿಗ್ಗೆ 9–30 ರಿಂದ ಸಂಜೆ 4–30ರ ವರೆಗೆ ತಪ್ಪದೆ ಶಾಲೆಯಲ್ಲಿ ಇರುತ್ತಾರೆ. ವಿವಿಧ ತರಗತಿಗಳಿಗೆ ಬೋಧಿಸಬೇಕಾದ ಸವಾಲುಗಳನ್ನು ಎದುರಿಸಲು ತಮ್ಮದೇ ಆದ ವಿಧಾನವನ್ನು ರೂಪಿಸಿಕೊಂಡಿದ್ದಾರೆ. ತಾಲ್ಲೂಕು ಮಟ್ಟದ ಯಾವುದೇ ಶೈಕ್ಷಣಿಕ ಅಧಿಕಾರಿ 2007ರಿಂದ ಇತ್ತ ಸುಳಿದಿಲ್ಲ; ಹೀಗಾಗಿ ಇವರು ಅಗತ್ಯವಿರುವ ಎಲ್ಲ ಸ್ವಾಯತ್ತತೆಯನ್ನೂ ಹೊಂದಿದ್ದಾರೆ. ಅವರೇ ಶಾಲೆಯ ಕೆಲಸದ ವೇಳಾಪಟ್ಟಿಯನ್ನು ಅನುಕೂಲಕ್ಕೆ ಒಗ್ಗುವಂತೆ ಜಾಣ್ಮೆಯಿಂದ ಸಡಿಲವಾಗಿ ರೂಪಿಸಿಕೊಂಡಿದ್ದಾರೆ. ವಿಷಯ ಬೋಧನೆಯನ್ನು ಸಹೋದ್ಯೋಗಿಯೊಡನೆ ಹಂಚಿಕೊಂಡಿದ್ದಾರೆ. ಶಿಕ್ಷಣ ಇಲಾಖೆಯು ರೇಡಿಯೋ ಮೂಲಕ ನಡೆಸುವ 'ಕೇಳಿ–ಕಲಿ' ಕಾರ್ಯಕ್ರಮವು ಉಪಯುಕ್ತವೂ ಪ್ರಸ್ತುತವೂ ಆಗಿದೆ ಎಂದು ಭಾವಿಸುವ ಶ್ರೀಶೈಲ, ಅದನ್ನು ತಪ್ಪದೆ ನಾಲ್ಕು ಮತ್ತು ಐದನೆಯ ತರಗತಿಯ ಮಕ್ಕಳು ಕೇಳುವಂತೆ ಮಾಡಿದ್ದಾರೆ. ಒಂದು ಸಮುದಾಯ ಗ್ರಂಥಾಲಯವನ್ನೂ ಪ್ರಾರಂಭಿಸಿದ್ದು ಅದು ಅವರ ಕರ್ತೃತ್ವಶಕ್ತಿಗೂ ದೂರದೃಷ್ಟಿಗೂ ಉದಾಹರಣೆಯಾಗಿದೆ. ಮಕ್ಕಳು ಓದುವ ಅಭ್ಯಾಸವನ್ನು ರೂಢಿಸಿಕೊಳ್ಳಬೇಕೆಂಬ ಹಂಬಲದಿಂದ ಕೆಲವಾರು ಮಂದಿ ಸುಶಿಕ್ಷಿತ ಸದಸ್ಯರು ಅವರೊಂದಿಗೆ ಕೈಜೋಡಿಸಿದ್ದಾರೆ. ಶಾಲೆಯಲ್ಲಿ ಮಕ್ಕಳದ್ದೇ ಆದ ಒಂದು ಸಚಿವ ಸಂಪುಟವಿದ್ದು ಮಕ್ಕಳಿಗೆ ಜವಾಬ್ದಾರಿಗಳನ್ನು ಹಂಚಲಾಗಿದೆ. ಶಾಲೆಯ ಉದ್ಯಾನದ ಮೇಲ್ವಿಚಾರಣೆ, ಎಲ್ಲ ಸೌಕರ್ಯಗಳೂ ಸುಸ್ಥಿತಿಯಲ್ಲಿರುವಂತೆ ನೋಡಿಕೊಳ್ಳುವುದು, ಬೆಳಗಿನ ಶಾಲಾ ಸಭೆಯನ್ನು ಸಂಘಟಿಸುವುದು ಇವೆಲ್ಲಾ ಆ ಜವಾಬ್ದಾರಿಗಳಲ್ಲಿ ಸೇರಿವೆ. ಮಕ್ಕಳು ಜಗಳವಾಡದಂತೆ, ಹೊಡೆದಾಟಗಳು ನಡೆಯದಂತೆ ಎಲ್ಲರೂ

ಪ್ರಜ್ಞಾಪೂರ್ವಕವಾಗಿ ಎಚ್ಚರ ವಹಿಸುತ್ತಾರೆ. 'ಮಕ್ಕಳ ನಡುವೆ ಸಂಬಂಧಗಳು ಉತ್ತಮವಾಗಿದ್ದು ಅವರು ಎಲ್ಲಾ ಭಿನ್ನಾಭಿಪ್ರಾಯಗಳನ್ನು ಮಾತುಕತೆಗಳ ಮೂಲಕವೂ ಸಂಧಾನದ ಮೂಲಕವೂ ಬಗೆಹರಿಸಿಕೊಳ್ಳಲು ಯತ್ನಿಸುತ್ತಾರೆ' ಎಂದು ಶ್ರೀಶೈಲ ಹೇಳುತ್ತಾರೆ. ತಾನು ಶಾಲೆಯನ್ನು ಸೇರಿದಾಗಿನಿಂದ ಹಾಗೂ ಆರ್‌ಟಿಇ ಜಾರಿಯಾಗುವುದಕ್ಕೆ ಸಾಕಷ್ಟು ಮುಂಚೆಯೇ ಶಾಲೆಯಲ್ಲಿ ಮಕ್ಕಳಿಗೆ ದೈಹಿಕ ಶಿಕ್ಷೆ ನೀಡಿದ ಒಂದೇ ಒಂದು ಘಟನೆಯೂ ನಡೆದಿಲ್ಲ ಎನ್ನುವ ಶ್ರೀಶೈಲರಿಗೆ ಈ ಬಗ್ಗೆ ಹೆಮ್ಮೆಯಿದೆ.

ತನ್ನ ಶಕ್ತಿ ಸಾಮರ್ಥ್ಯಗಳು ಏನು ಎಂದು ಅವರಿಗೆ ಗೊತ್ತು. ಅವರು ಅದನ್ನು ಹೀಗೆಂದು ಪಟ್ಟಿ ಮಾಡುತ್ತಾರೆ: ಕೈಗೆತ್ತಿಕೊಂಡ ಕೆಲಸವನ್ನು ದಡಮುಟ್ಟಿಸುವ ಆತ್ಮವಿಶ್ವಾಸ, ಸ್ವಂತ ಸಂಪನ್ಮೂಲಗಳನ್ನು, ಗಳಿಕೆಯನ್ನು, ಮಕ್ಕಳಿಗೆ ಉಪಯುಕ್ತವಾಗುವ ಕಾರ್ಯಗಳಿಗೆ ವಿನಿಯೋಗಿಸುವುದು; ಅಧ್ಯಯನವನ್ನು ಮುಂದುವರೆಸಿ ಕರ್ನಾಟಕ ವಿಶ್ವವಿದ್ಯಾಲಯದ ಅಂಚೆ ತೆರಪಿನ ಶಿಕ್ಷಣದ ಮೂಲಕ ಬಿ.ಎ., ಎಂ.ಎ., ಬಿ.ಎಡ್. ಪದವಿಗಳನ್ನು ಪಡೆದು ಕೊಂಡಿರುವುದು; ಸಮುದಾಯಕ್ಕೆ ಕೊಡುಗೆ ನೀಡಬೇಕೆಂಬ ಆಕಾಂಕ್ಷೆ ಮತ್ತು ಬದ್ಧತೆ. ಸ್ವಯಂ ವಿಕಾಸ ಮತ್ತು ತನ್ನ ಸಾಮರ್ಥ್ಯವನ್ನು ನಿರಂತರವಾಗಿ ಬೆಳೆಸಿಕೊಳ್ಳುವುದು ಶ್ರೀಶೈಲ ಅವರಿಗೆ ತುಂಬಾ ಮುಖ್ಯವೆನಿಸುತ್ತದೆ. ಕೆಂಭಾವಿಯ ಟಿಎಲ್‌ಸಿಯಲ್ಲಿ ನಡೆಯುವ ವಿಟಿಎಫ್‌ಗಳಿಗೆ ಅವರು ತಪ್ಪದೆ ಹಾಜರಾಗುತ್ತಾರೆ. ಟಿಎಲ್‌ಸಿಯಲ್ಲಿ ಜೊತೆಯ ಶಿಕ್ಷಕರೊಂದಿಗೆ ಬ್ಯಾಡ್ಮಿಂಟನ್ ಮತ್ತು ವಾಲಿಬಾಲ್ ಆಡುತ್ತಾರೆ. ಇದೀಗ ಕಂಪ್ಯೂಟರ್ ಉಪಯೋಗಿಸಲು ಕಲಿತಿದ್ದಾರೆ. ಹೀಗೆ ತಮ್ಮನ್ನು ತಾವು ಉತ್ತಮಪಡಿಸಿಕೊಳ್ಳಲು ಶ್ರಮಿಸುವುದು ಅವರ ವ್ಯಕ್ತಿತ್ವದ ಅಂತರ್ಗತ ಗುಣವೇ ಇರಬೇಕು. ಒಂದು ಸಣ್ಣ ಶಾಲೆಯಲ್ಲಿ ಶಿಕ್ಷಕನಾಗಿ ಸೇರಿದ ಅವರು ಮುಖ್ಯೋಪಾಧ್ಯಾಯನಾಗಿಯೂ ಕೆಲಸ ಮಾಡಬೇಕಾಗಿ ಬಂತು. 2004ರಲ್ಲಿ ಮುಖ್ಯೋಪಾಧ್ಯಾಯರಿಗಾಗಿ ನಡೆದ ಹತ್ತು ದಿನಗಳ ತರಬೇತಿಗೆ ಹಾಜರಾದ ಅವರು ಒಂದೊಂದು ಅನುಭವದ ಆಣಿಮುತ್ತನ್ನು ಸಂಗ್ರಹಿಸಿಟ್ಟುಕೊಂಡು ಅದನ್ನು ತಮ್ಮ ಶಾಲೆಯಲ್ಲಿ ಅಳವಡಿಸಿಕೊಂಡರು, ವಿವೇಚನೆಯಿಂದ, ಪ್ರಾಯೋಗಿಕವಾಗಿ ಆಚರಣೆಗೆ ತಂದರು. ವಾಸ್ತವದಲ್ಲಿ ಶ್ರೀಶೈಲ ಅವರು ಸುರಪುರದಲ್ಲಿ ಸಿಎಫ್‌ಎಸ್‌ಐ ಕಾರ್ಯಕ್ರಮವು ಆರಂಭವಾದಾಗಿನಿಂದ ಅದರ ಸಹವರ್ತಿಯಾಗಿದ್ದಾರೆ. ಎಂ.ಎನ್. ಬೇಗ್[2]ರವರ ಮುಖ್ಯೋಪಾಧ್ಯಾಯರ ತರಬೇತಿ ಕಾರ್ಯಕ್ರಮದಲ್ಲಿ ಮತ್ತು ಸನ್ನಿ ತಾರಪ್ಪನ್[3] ಅವರ

---

2 ಎಂ. ಎನ್. ಬೇಗ್, ಕರ್ನಾಟಕ ಶಿಕ್ಷಣ ಇಲಾಖೆಯ ನಿವೃತ್ತ ನಿರ್ದೇಶಕರು, 2000ದ ಇಸವಿಯಲ್ಲಿ 'ನಲಿ–ಕಲಿ' ಯೋಜನೆಯನ್ನು ಜಾರಿಗೆ ತಂದಾಗ ಅದರ ನೇತೃತ್ವ ವಹಿಸಿದ್ದರು. 2004ರಿಂದ 2007ರವರೆಗೆ ಸುರಪುರದಲ್ಲಿ ಚೈಲ್ಡ್ ಫ್ರೆಂಡ್ಲಿ ಸ್ಕೂಲ್ ಇನಿಶಿಯೇಟಿವ್ (ಸಿಎಫ್‌ಎಸ್‌ಐ)ಗೆ ನೇತೃತ್ವ ನೀಡಿದವರು.

3 ಸನ್ನಿ ತಾರಪ್ಪನ್ ಅವರು ಮಂಗಳೂರು ಮೂಲದ ಮಾನವ ಸಂಪನ್ಮೂಲ ಅಭಿವೃದ್ಧಿಯ ತರಬೇತುದಾರರು. ಅವರು ಶಾಲೆಯ ಪ್ರಿನ್ಸಿಪಾಲರುಗಳಿಗೆ ಮತ್ತು ಸಾಮಾಜಿಕ ವಲಯದ ಸಂಘಟನಾಕಾರರಿಗೆ ದೊಡ್ಡ ಮಟ್ಟದಲ್ಲಿ ನಾಯಕತ್ವ ಅಭಿವೃದ್ಧಿ ಕಾರ್ಯಕ್ರಮಗಳನ್ನು ನಡೆಸುತ್ತಾರೆ.

ಮುಖ್ಯೋಪಾಧ್ಯಾಯರ ದೊಡ್ಡ ಮಟ್ಟದ ಕಾರ್ಯಾಗಾರದಲ್ಲಿ ಶ್ರೀಶೈಲ ಭಾಗವಹಿಸಲು ಇದೇ ಸಂಸ್ಥೆಯೇ ನೆರವಾಯಿತು.

ಸಮಾಜವಿಜ್ಞಾನ ಮತ್ತು ಅದರ ಬೋಧನಾ ಕ್ರಮವನ್ನು ಕುರಿತಾದ ತಮ್ಮ ತಿಳಿವಳಿಕೆಯು ಬೇಸಿಗೆ ಕಾರ್ಯಾಗಾರದಿಂದ ತುಂಬಾ ಅಭಿವೃದ್ಧಿ ಹೊಂದಿತು ಎಂದು ಅವರು ಕೃತಜ್ಞತೆಯಿಂದ ಸ್ಮರಿಸುತ್ತಾರೆ. ಆ ಕಾರ್ಯಾಗಾರದ ಚರ್ಚೆಯ ವಿಷಯವನ್ನು ಅವರು ಬಹಳ ಚೆನ್ನಾಗಿ ನೆನಪಿನಲ್ಲಿರಿಸಿಕೊಂಡು, ಅದರ ಶೀರ್ಷಿಕೆಯನ್ನು ಸರಿಯಾಗಿ ಹೇಳಿದರು, "ನಕ್ಷೆಯನ್ನು ಓದುವುದು, ಬೇಟೆಗಾರರು ಮತ್ತು ಆಹಾರ ಸಂಗ್ರಾಹಕರನ್ನು ಆಧರಿಸಿದ ಸಮಾಜ ವಿಜ್ಞಾನದ ಕುರಿತಾದ ನೋಟ."

ಈ ಸಾಮರ್ಥ್ಯ ನಿರ್ಮಾಣದ ಕಾರ್ಯಾಗಾರಗಳು ಶಿಕ್ಷಣದ ಧ್ಯೇಯವನ್ನು ಕುರಿತಾದ ತಮ್ಮ ತಿಳಿವಳಿಕೆಯನ್ನು ವಿಶಾಲಗೊಳಿಸಿವೆ; ಬೋಧನೆ ಹಾಗೂ ವಿದ್ಯಾರ್ಥಿಗಳ ಕಲಿಕೆ ಕುರಿತಾದ ತಮ್ಮ ನಂಬಿಕೆಯನ್ನು ಬದಲಾಯಿಸಿವೆ ಎಂದು ಶ್ರೀಶೈಲ ಹೇಳುತ್ತಾರೆ. ಅವರ ಮಾತುಗಳಲ್ಲೇ ಕೇಳೋಣ: "ಮಕ್ಕಳು ಮಾಹಿತಿಗಳನ್ನು ತುಂಬಬೇಕಾದ ಖಾಲಿ ಕೊಡಗಳಲ್ಲ ಎಂದು ನಾನು ನಂಬಿದ್ದೇನೆ. ಬದಲಿಗೆ ನಾನು ಕೆಲಸದ ಪಟ್ಟಿಯನ್ನು ಉಪಯೋಗಿಸಿ ಮಕ್ಕಳೊಂದಿಗೆ ಪರಿಕಲ್ಪನೆಗಳನ್ನು ಚರ್ಚಿಸಿ ಅವರನ್ನು ಗುಂಪು ಚರ್ಚೆಗೆ ಬಿಟ್ಟು ಅವರೇ ತಮ್ಮ ತಿಳಿವಳಿಕೆಯನ್ನು ರೂಪಿಸಿಕೊಳ್ಳಲು ನೆರವಾಗುತ್ತೇನೆ. ಮಕ್ಕಳು ಭಯಮುಕ್ತ ವಾತಾವರಣದಲ್ಲಿ ಕಲಿಯುತ್ತಾರೆ ಎಂದು ನಾವು ಹೇಳುವಾಗ ಅದರ ಅರ್ಥ ಏನು ಎಂಬುದು ನನಗೆ ಅರ್ಥವಾಗಿದೆ. ತರಗತಿ ಕೊಠಡಿಯು ಕೇವಲ ಉಲ್ಲಾಸಮಯ ಕಲಿಕೆಯ ಜಾಗ ಮಾತ್ರವೇ ಅಲ್ಲ, ಅದು ಮಕ್ಕಳು ತಮ್ಮ ಪ್ರಶ್ನೆಗೆ ತಾವೇ ಉತ್ತರ ಕಂಡುಕೊಳ್ಳುವ ಜಾಗ ಸಹ; ಅಲ್ಲಿ ಅವರಿಗೆ ಪ್ರಶ್ನೆಗಳನ್ನು ಕೇಳುವ ಸ್ವಾತಂತ್ರ್ಯವಿರಬೇಕು. ಇದರಿಂದಾಗಿಯೇ ನಮ್ಮ ವಿದ್ಯಾರ್ಥಿಗಳು ಸಾಂಪ್ರದಾಯಿಕ ಪರೀಕ್ಷೆಗಳಲ್ಲೂ ಚೆನ್ನಾಗಿ ಸಾಧನೆ ಮಾಡುತ್ತಿದ್ದಾರೆ; ಮೊರಾರ್ಜಿ ಶಾಲೆಯ ಪ್ರವೇಶ ಪರೀಕ್ಷೆಯಲ್ಲೂ ಚೆನ್ನಾಗಿ ಮಾಡುತ್ತಿದ್ದಾರೆ." 'ನಲಿ-ಕಲಿ' ಕಾರ್ಯಕ್ರಮದ ಅಂತಃಸತ್ವವನ್ನು ಶ್ರೀಶೈಲ ಚೆನ್ನಾಗಿ ಗ್ರಹಿಸಿರುವುದಕ್ಕೆ ಅವರ ಈ ಮಾತುಗಳೇ ಸಾಕ್ಷಿ. ಒಬ್ಬ ಚಿಂತನಶೀಲ ಶಿಕ್ಷಕನಾಗಿ ಬೆಳೆಯುವಲ್ಲಿ ತನಗೆ ಸಿಎಫ್ಎಸ್ಐ ನೀಡಿದ ಒಳನೋಟಗಳು ಮುಖ್ಯವಾದವು ಎಂದು ಅವರು ಸ್ಮರಿಸುತ್ತಾರಾದರೂ ತಮ್ಮ ಪ್ರಗತಿಗೆ ಕಲಿಕೆಯ ಕುರಿತಾದ ಅವರ ದೃಷ್ಟಿಕೋನವೇ ಇದಕ್ಕೆ ಕಾರಣ ಎಂದು ಅವರನ್ನು ಹತ್ತಿರದಿಂದ ಬಲ್ಲವರು ಹೇಳುತ್ತಾರೆ.

ಕ್ರೀಡೆಯ ಬಗ್ಗೆ ಗಾಢವಾದ ಆಸಕ್ತಿಯನ್ನು ಶಾಲಾದಿನಗಳಲ್ಲೇ ಹೊಂದಿದ್ದ ಶ್ರೀಶೈಲ ಪೊಲೀಸ್ ಆಗಬೇಕೆಂದಿದ್ದರು. ಆದರೆ ಪದವಿಪೂರ್ವ ಪರೀಕ್ಷೆಯಲ್ಲಿ ಒಳ್ಳೆಯ ಫಲಿತಾಂಶ ಬಂದ ಮೇಲೆ ಅವರು ಶಿಕ್ಷಕ ತರಬೇತಿ ಕೋರ್ಸಿಗೆ ಸೇರಿ ಶಿಕ್ಷಕರಾಗಬೇಕೆಂದು ನಿರ್ಧರಿಸಿದರು. ಈಗ ಯಾರೇ ಕೇಳಿದರೂ ಅವರು ಹೇಳುವ ಮಾತು; "ಅದು ನನ್ನ ಬದುಕಿನ ಅತ್ಯುತ್ತಮ ನಿರ್ಧಾರ."

# ಮೂವರು ತರುಣ ಶಿಕ್ಷಕರು
# ಅವರ ಕಾಣ್ಕೆ, ಸಂಕಲ್ಪ, ಉತ್ಸಾಹ ಮತ್ತು ಪರಿಶ್ರಮ

**ಗೋವಿಂದ ಪ್ರಜಾಪತ್, ಮನ್‌ಸೌರ್‌ಬಾಯಿ ಚೌಧರಿ**
**ಕಾಲೂರಾಮ್ ಯಾದವ್**

ಸರ್ಕಾರಿ ಪ್ರಾಥಮಿಕ ಶಾಲೆ, ರಾವ್‌ತಾ
ದೇವಾಲಿ ಬ್ಲಾಕ್, ಟೋಂಕ್ ಜಿಲ್ಲೆ, ರಾಜಸ್ಥಾನ

ಟೋಂಕ್ ಜಿಲ್ಲೆಯ ನೈರುತ್ಯ ದಿಕ್ಕಿನಲ್ಲಿ ದೇವಾಲಿ ತಾಲ್ಲೂಕು ಇದೆ. ಸವಾಯ್ ಮಾಧೋಪುರ್ ಮತ್ತು ಟೋಂಕ್ ಜಿಲ್ಲೆಗಳಿಗೆ ನೀರಾವರಿ ಒದಗಿಸಲು ಹಾಗೂ ಅಜ್ಮೀರ್, ಜಯಪುರ್ ಮತ್ತು ಟೋಂಕ್ ಜಿಲ್ಲೆಗಳಿಗೆ ಕುಡಿಯುವ ನೀರು ಸರಬರಾಜು ಮಾಡಲು ಸರ್ಕಾರವು ಈ ಪ್ರದೇಶದಲ್ಲಿ ಬನಸ್ ನದಿಗೆ ಅಡ್ಡವಾಗಿ ಬಿಲಾಸ್‌ಪುರ್ ಅಣೆಕಟ್ಟನ್ನು ಕಟ್ಟಲು ನಿರ್ಧರಿಸಿದಾಗ ಈ ಯೋಜನೆಯಿಂದ ಉಂಟಾಗುವ ತೊಂದರೆಗಳ ವಿರುದ್ಧ ಹಾಗೂ ಜನರನ್ನು ಸ್ಥಳಾಂತರ ಮಾಡುವುದರ ವಿರುದ್ಧ ತಾಲ್ಲೂಕಿನ ಜನರು ಪ್ರತಿಭಟಿಸಿದರು. ಈ ಸಂಘರ್ಷ ತಾರಕಕ್ಕೇರಿದಾಗ ಅಲ್ಲಿಗೆ ಮೇಧಾ ಪಾಟ್ಕರ್ ಸಹ ಬಂದಿದ್ದರು ಎಂದು ಕೇಳಿದ್ದೇನೆ. ನಾವು ರಾವ್‌ತಾ ಎಂಬ ಹಳ್ಳಿಯ ಕಡೆಗೆ ವಾಹನವೊಂದರಲ್ಲಿ ಪ್ರಯಾಣಿಸಿದಾಗ ಅದೆಲ್ಲಾ ಹಳೆಯ ಕತೆ ಎನಿಸಿತು. ಸರ್ಕಾರವು ಸ್ಥಳಾಂತರಗೊಂಡವರಿಗೆಂದು ನಿರ್ಮಿಸಿದ ವಸತಿಯ ಮನೆಗಳು ರಸ್ತೆಯ ಇಕ್ಕೆಲದಲ್ಲೂ ಕಾಣುತ್ತಿದ್ದವು. ರಾವ್‌ತಾ ಹಳ್ಳಿಯು ಅಣೆಕಟ್ಟೆಗೆ ಸನಿಹದಲ್ಲಿದೆ. ನಾವು ಅಲ್ಲಿನ ಜನರನ್ನು ಭೇಟಿಯಾದಾಗ ಅವರು ಅಣೆಕಟ್ಟನ್ನು ನೋಡಿ ಬನ್ನಿ ಎಂದರು. ಅದೀಗ ಪ್ರವಾಸಿಗರ ಆಕರ್ಷಣೆಯ ತಾಣವಾಗಿದೆ.

ನಮ್ಮ ಭೇಟಿಗೆ ರಾವ್‌ತಾದ ಪ್ರಾಥಮಿಕ ಶಾಲೆಯನ್ನು ಶಿಫಾರಸು ಮಾಡಲು ನಮ್ಮ ಸಹೋದ್ಯೋಗಿಗಳು ಹಿಂಜರಿದಿದ್ದರು. ಶಾಲೆಯ ಮೂಲಸೌಕರ್ಯಗಳ ಕೊರತೆಯೂ ಆಕರ್ಷಕವಲ್ಲದ ಆ ಕಟ್ಟಡದ ಸ್ವರೂಪವೂ ನಮ್ಮ ಉತ್ಸಾಹಕ್ಕೆ ತಣ್ಣೀರು ಎರಚಬಹುದು ಎಂದು ಅವರು ಭಾವಿಸಿದ್ದರು. ಆದರೆ ನಾನು ಈ ಕಥನದಲ್ಲಿ ಇನ್ನೊಂದು ಕಡೆ ಹೇಳಿದ್ದೇನೆ: ಬಾಹ್ಯ ಸ್ವರೂಪ ಚೆಲುವಾಗಿಲ್ಲದ ಕಡೆ ಎಷ್ಟೋ ಬಾರಿ ಅತ್ಯುತ್ತಮ ಗುಣಗಳು ಅಡಗಿರಬಹುದು. ಆದರೆ ವಾಸ್ತವವಾಗಿ ಅಲ್ಲಿನ ಮೂಲಸೌಕರ್ಯವೇನೂ ಕೆಟ್ಟದಾಗಿರಲಿಲ್ಲ. ಐದು ತರಗತಿಗಳಲ್ಲಿ ಇದ್ದ ಒಟ್ಟು 72 ವಿದ್ಯಾರ್ಥಿಗಳಿಗೆ ಮೂರು ಕೊಠಡಿಗಳೂ ಮೂವರು ಶಿಕ್ಷಕರೂ ಇದ್ದರು. ಶಾಲೆಯಲ್ಲಿ ಉತ್ತಮ ಸ್ಥಿತಿಯಲ್ಲಿದ್ದ ಶೌಚಾಲಯವಿತ್ತು, ಆದರೆ ಸದಾ ನೀರು ಬರುವಂಥ ಕೊಳಾಯಿ ವ್ಯವಸ್ಥೆ ಮಾತ್ರ ಇರಲಿಲ್ಲ. ಶಾಲೆಯ ಒಂದು ಕಡೆ ಇದ್ದ ನಲ್ಲಿಯಿಂದ ಬಕೆಟ್‌ನಲ್ಲಿ ನೀರನ್ನು ಎತ್ತಿಕೊಂಡು ಹೋಗಿ ಉಪಯೋಗಿಸಬೇಕಿತ್ತು.

ನಾವು ಶಾಲೆಯನ್ನು ತಲಪಿದಾಗ ಮೂವರು ಶಿಕ್ಷಕರೂ ತಮ್ಮ ಪಾಠಗಳಲ್ಲಿ

ಮುಳುಗಿದ್ದರು. ನಮಗೆ ಅಲ್ಲಿ ಸಾಕಷ್ಟು ಕಾಲ ಕಳೆಯಲು ಸಾಧ್ಯವಾಯಿತು. ಶಿಕ್ಷಕರ ಬೋಧನೆಯನ್ನು ನೋಡಲು, ಮಕ್ಕಳೊಡನೆ ಮಾತನಾಡಲು, ಮಧ್ಯಾಹ್ನದ ಊಟದ ಕಾರ್ಯಕ್ರಮವನ್ನು ಗಮನಿಸಲು, ಶಿಕ್ಷಕರೊಡನೆ ಹರಟೆ ಹೊಡೆಯಲು ಅವಕಾಶ ದೊರೆಯಿತು. ನಾವು ಅಲ್ಲಿದ್ದಷ್ಟು ಕಾಲವೂ ಶಾಲೆ ಉತ್ಸಾಹದಿಂದ ಗುಂಯ್‌ಗುಡುತ್ತಿತ್ತು ಎಂದು ಭಾಸವಾಯಿತು. ಅದಕ್ಕೆ ಈ ಮೂವರು ಯುವ ಶಿಕ್ಷಕರೇ ಕಾರಣರಾಗಿದ್ದರು. ನಾಲ್ಕು ಹಾಗೂ ಐದನೆಯ ತರಗತಿಗಳನ್ನು ಒಂದು ಕೊಠಡಿಯಲ್ಲೂ, ಮೂರನೆಯ ತರಗತಿಯನ್ನು ಇನ್ನೊಂದು ಕೊಠಡಿಯಲ್ಲೂ ನಡೆಸಲಾಗುತ್ತಿತ್ತು. ಕಾಲೂರಾಮ್ ಯಾದವ್ ಅವರು ಇಂಗ್ಲಿಷನ್ನು, ಮನ್‌ಸೌರ್‌ಬಾಯಿ ಚೌಧರಿ ಹಿಂದಿಯನ್ನು ಮತ್ತು ಗೋವಿಂದ ಪ್ರಜಾಪತ್ ಅವರು ಗಣಿತವನ್ನು ಕಲಿಸುತ್ತಿದ್ದರು.

ನಾವು ಮೊದಲು ಹೋದದ್ದು ಗೋವಿಂದ್ ಅವರು ಗಣಿತ ಕಲಿಸುತ್ತಿದ್ದ ಒಂದು ಮತ್ತು ಎರಡನೆಯ ತರಗತಿಗೆ. ಮೇಷ್ಟ್ರು ಮತ್ತು ಹುಡುಗರು ವೃತ್ತಾಕಾರದಲ್ಲಿ ಕುಳಿತಿದ್ದರು, ಮೇಷ್ಟ್ರು ಸಂಖ್ಯೆಗಳ ಬಗ್ಗೆ ಹೇಳುತ್ತಿದ್ದರು. ಈತ ತುಂಬಾ ಬುದ್ಧಿವಂತ ಶಿಕ್ಷಕರಾಗಿದ್ದು, ಬೋಧನೆಯಲ್ಲಿ ಸೃಜನಶೀಲತೆಯನ್ನು ಅಳವಡಿಸಿಕೊಂಡಿದ್ದಾರೆ ಎಂದು ನಮಗೆ ಕೆಲವೇ ನಿಮಿಷಗಳಲ್ಲೇ ಮನವರಿಕೆ ಆಯಿತು. ಸಾಮಾನ್ಯವಾಗಿ ಶಿಕ್ಷಕರು ಈ ಪಾಠವನ್ನು ಹೇಳಲು ಗುಂಡಗಿನ ಪುಟ್ಟ ಕಲ್ಲುಗಳನ್ನೋ ಬಣ್ಣದ ಮಣಿಗಳನ್ನೋ ಉಪಯೋಗಿಸುತ್ತಾರೆ. ಆದರೆ ಗೋವಿಂದ್, ಮಕ್ಕಳಿಗೆ ಘನಾಕೃತಿಯ ಮರದ ತುಂಡುಗಳನ್ನು ಕೊಟ್ಟಿದ್ದರು. ಅದರ ಒಂದೊಂದು ಮುಖವೂ ಒಂದೋ ಎರಡೋ ಅಂಗುಲದ ಚೌಕವಾಗಿತ್ತು. ಮಕ್ಕಳು ಗುರುಗಳ ನಿರ್ದೇಶನವನ್ನು ಅನುಸರಿಸಿ ಇವುಗಳನ್ನು ಉಪಯೋಗಿಸಿಕೊಂಡು ಎಣಿಸುವುದು, ಕೂಡುವುದು, ಕಳೆಯುವುದು ಮುಂತಾದವನ್ನು ಮಾಡುತ್ತಿದ್ದುದನ್ನು ನೋಡಲು ನಮಗೆ ಆನಂದವಾಯಿತು. ಈ ಮರದ ತುಂಡುಗಳನ್ನು ಉಪಯೋಗಿಸಿದ್ದು ಏಕೆ ಎಂದು ಅನಂತರ ನಾವು ಗೋವಿಂದ್‌ರವರನ್ನು ಕೇಳಿದೆವು. "ದುಂಡಗಿನ ಕಲ್ಲುಗಳನ್ನು, ಎಣಿಸುವುದಕ್ಕೆ ಮಾತ್ರ ಉಪಯೋಗಿಸಬಹುದು, ಅವುಗಳಿಂದ ಸಣ್ಣಪುಟ್ಟ ಗಾಯಗಳೂ ಆಗಬಹುದು ಎನ್ನಿಸಿತು. ನಮ್ಮ ಹಳ್ಳಿಯಲ್ಲಿ ಮರಗೆಲಸ ಮಾಡುವವರ ಬಳಿ ಅವರಿಗೆ ಉಪಯೋಗವಿಲ್ಲದೆ ಬಿದ್ದಿದ್ದ ಅನೇಕ ತೇಗದ ತುಂಡುಗಳನ್ನು ನೋಡಿದೆ. ಆತನಿಗೆ ಅವುಗಳಲ್ಲಿ ಘನಾಕೃತಿಗಳನ್ನು ಕತ್ತರಿಸಿ ಕೊಡಲು ಕೇಳಿಕೊಂಡೆ. ಸಂಖ್ಯೆಗಳನ್ನು, ಗುಣಾಕಾರ ಮೊದಲಾದವನ್ನು ಕಲಿಸಲು, ಆಕಾರ ವಿನ್ಯಾಸಗಳನ್ನು ಪರಿಚಯಿಸಲು ಮತ್ತು ಕುಸಿಯದ ನಿರ್ಮಾಣಗಳನ್ನು ರಚಿಸಲು ಇವುಗಳನ್ನು ಉಪಯೋಗಿಸುತ್ತೇನೆ." ನಾವು ಹೀಗೆ ಮಾತನಾಡುತ್ತಿದ್ದಾಗಲೇ ಇಬ್ಬರು ಮಕ್ಕಳು ಈ ಘನಾಕೃತಿಗಳಿಂದ ಎರಡು ಗೋಪುರದಂಥ ಆಕಾರಗಳನ್ನು ಕಟ್ಟುತ್ತಿದ್ದರು. ಗೋವಿಂದ್ ಮರದ ತುಂಡುಗಳಿಂದ ಗುಣಾಕಾರದ ಮಗ್ಗಿಗಳನ್ನು ರಚಿಸುವುದನ್ನು ತೋರಿಸಿದರು. ಇವರು ವಯಸ್ಸಿನಲ್ಲಿ ತುಂಬಾ ಚಿಕ್ಕವರು. ಇಪ್ಪತ್ತಾರು ವಯಸ್ಸಷ್ಟೇ. ಅವರು 2017ರಲ್ಲಿ ರೀಟ್ (ಆರ್‌ಇಇಟಿ– ರಾಜಸ್ಥಾನ್ ಎಲಿಜಿಬಿಲಿಟಿ ಎಕ್ಸಾಮಿನೇಶನ್ ಫಾರ್ ಟೀಚರ್ಸ್) ಪರೀಕ್ಷೆಯಲ್ಲಿ

ತೇರ್ಗಡೆಯಾಗಿ ಶಿಕ್ಷಣ ಇಲಾಖೆಯನ್ನು ಸೇರಿದರು. ತಮ್ಮ ಶಾಲಾ ಶಿಕ್ಷಣವನ್ನು ಮುಗಿಸಿದ ನಂತರ ಅವರು ಬಿಎಸ್‌ಟಿಸಿ (ಬೇಸಿಕ್ ಸ್ಕೂಲ್ ಟ್ರೇನಿಂಗ್ ಸರ್ಟಿಫಿಕೇಟ್) ಎಂಬ ಶಿಕ್ಷಣ ಡಿಪ್ಲೋಮಾ ಅನ್ನು ಮುಗಿಸಿದ್ದು, ಈಗ ಅಂಚೆ ತೆರಪಿನ ಶಿಕ್ಷಣದ ಮೂಲಕ ಬಿ.ಎ. ಪದವಿಯನ್ನು ಮುಗಿಸಬೇಕೆಂದಿದ್ದಾರೆ. ಅವರ ತಂದೆ ಹಳ್ಳಿಯಲ್ಲಿ ದರ್ಜಿಯಾಗಿದ್ದರೂ ಅನೇಕ ಹತ್ತಿರದ ಸಂಬಂಧಿಗಳು ಶಿಕ್ಷಕರೇ ಆಗಿದ್ದುದರಿಂದ, ತಾನೂ ಶಿಕ್ಷಕನಾಗಬೇಕೆಂಬ ಪ್ರೇರಣೆ ಸಿಕ್ಕಿತು ಎನ್ನುತ್ತಾರೆ.

"ನನಗೆ ರೀಟ್ ಪರೀಕ್ಷೆಯಲ್ಲಿ ರಾಜ್ಯಮಟ್ಟದಲ್ಲಿ 168ನೆಯ ರ್‍ಯಾಂಕ್ ಬಂತು; ಟೋಂಕ್ ಜಿಲ್ಲೆಯಲ್ಲಿ ಐದನೆಯ ಸ್ಥಾನ ಸಿಕ್ಕಿತು" ಎಂದು ಗೋವಿಂದ್ ಹೆಮ್ಮೆಯಿಂದಲೇ ಹೇಳುತ್ತಾರೆ. ಅವರು ಶಿಕ್ಷಕನಾಗಿ ಬದುಕಿನ ಪ್ರತಿಯೊಂದು ಕ್ಷಣವನ್ನೂ ಆನಂದದಿಂದ ಅನುಭವಿಸುತ್ತಿದ್ದಾರೆ; ಅಲ್ಲದೆ ಈ ಶಾಲೆಯಲ್ಲಿನ ತನ್ನ ಹಿಂದಿನ ಶಿಕ್ಷಕರ ಕೆಲಸವು ಬಹಳ ಉಪಯುಕ್ತವಾಗಿತ್ತು ಎಂದು ಕೃತಜ್ಞತೆಯಿಂದ ಸ್ಮರಿಸುತ್ತಾರೆ. "ಘನಶ್ಯಾಮ್ ಸರ್ ಅವರು ಮಕ್ಕಳಿಗೆ ಬಲು ಚೆನ್ನಾಗಿ ಕಲಿಸಿದ್ದಾರೆ. ಅವರ ಪರಿಕಲ್ಪನೆಗಳು ತುಂಬಾ ಸ್ಪಷ್ಟವಾಗಿವೆ. ಅವರು ಬಡ್ತಿ ಪಡೆದು ಹೋಗಿದ್ದಾರೆ. ಅವರು ಸಾಧಿಸಿರುವ ಉನ್ನತ ಮಟ್ಟವನ್ನು ಉಳಿಸಿಕೊಳ್ಳಬೇಕಾದದ್ದು ನನ್ನ ಕರ್ತವ್ಯ" ಎನ್ನುತ್ತಾರೆ. ಶಿಕ್ಷಕನಾಗಿರುವುದರಿಂದ ಅವರು ಎದುರಿಸುವ ಸವಾಲುಗಳು ಮತ್ತು ಅವುಗಳನ್ನು ಮೀರಲು ಕೈಗೊಂಡಿರುವ ಪ್ರಯತ್ನಗಳ ಬಗ್ಗೆ ನಾವು ಕೇಳಿದೆವು. ಗೋವಿಂದ್ ಹಿಂದೆ ಮುಂದೆ ನೋಡದೆ, "ನನಗೆ ಭಿನ್ನರಾಶಿಗಳನ್ನು ಕಲಿಸಲು ಕಷ್ಟವಾಗುತ್ತಿತ್ತು; ಇದರಿಂದ ಅದು ಮಕ್ಕಳಿಗೂ ಸರಿಯಾಗಿ ಅರ್ಥವಾಗುತ್ತಿರಲಿಲ್ಲ. ಇದರ ಜವಾಬ್ದಾರಿ ನನ್ನದೇ ಅಲ್ಲವೇ? ನಾನು ಫೌಂಡೇಶನ್‌ನ ಹನುಮಾನ್ ಅವರು ನಡೆಸಿದ ಕಾರ್ಯಾಗಾರಕ್ಕೆ ಹೋಗಿ ಬಂದ ಮೇಲೆ, ಪಜ಼ಲ್ ಬ್ಲಾಕ್‌ಗಳು, ಕಾರ್ಡ್‌ಗಳು ಮತ್ತು ಫ್ರಾಕ್ಷನ್ ವಾಲ್ ಇವುಗಳನ್ನು ಉಪಯೋಗಿಸಿಕೊಂಡರೆ ಮಕ್ಕಳಿಗೆ ಪರಿಕಲ್ಪನೆಗಳನ್ನು ಹೇಗೆ ಅರ್ಥಮಾಡಿಸಬಹುದು ಎಂಬುದು ಸ್ಪಷ್ಟವಾಯಿತು. ಅದು ನನ್ನ ಕಲಿಕೆಯಲ್ಲಿ ಒಂದು ಮುಖ್ಯ ಬದಲಾವಣೆಯ ಘಟ್ಟ" ಎಂದು ಹೇಳಿದರು.

ಜಾಣರೂ ಅನ್ವೇಷಕರೂ ಆದ ಗೋವಿಂದ್ ತಮ್ಮ ಸ್ಮಾರ್ಟ್‌ಫೋನಿನಲ್ಲಿ ಅನೇಕ ವಿಷಯಗಳನ್ನು ಅಂತರ್ಜಾಲದಿಂದ ಇಳಿಸಿಕೊಳ್ಳುತ್ತಾರೆ. ಅವರು ನಮಗೆ ಹೇಳುತ್ತಿದ್ದ ಪ್ರತಿಯೊಂದು ವಿಷಯದ ಕುರಿತಾಗಿಯೂ ತಾವು ಉಪಯೋಗಿಸುವ ಸಾಮಗ್ರಿಯನ್ನು ಹಾಗೂ ಅದನ್ನು ಅಳವಡಿಸಿಕೊಂಡ ರೀತಿಯನ್ನು ವಿವರಿಸುತ್ತಿದ್ದರು. ಉದಾಹರಣೆಗೆ ಎರಡು ಅಂಕಿಗಳಿರುವ ಸಂಖ್ಯೆಯನ್ನು ಕೂಡುವುದನ್ನು, ಹಾಗೂ ಒಂದು ಸಾಲಿನಿಂದ ಇನ್ನೊಂದು ಸಾಲಿಗೆ ದಾಟಿಸುವುದನ್ನು ತಾವು ಯುಟ್ಯೂಬ್‌ನಿಂದ ಇಳಿಸಿಕೊಂಡಿದ್ದ ಕಾರ್ಯಕ್ರಮದ ಮೂಲಕ ತೋರಿಸಿದರು. ತಮ್ಮ ಇಂಗ್ಲಿಷ್ ಜ್ಞಾನವನ್ನು ಅಭಿವೃದ್ಧಿ ಪಡಿಸಿಕೊಳ್ಳುತ್ತಿರುವುದಾಗಿ ಅವರು ನಗುತ್ತಾ ಹೇಳುತ್ತಾರೆ. "ಇತ್ತೀಚೆಗೆ ಟಿ.ವಿ. ವಾರ್ತೆಗಳಲ್ಲಿ ಅನೇಕ ಹೊಸ ಪದಗಳನ್ನು ಉಪಯೋಗಿಸುತ್ತಾರೆ. ಇಂಪೀಚ್‌ಮೆಂಟ್, ಆ್ಯಕ್ಸಿಲೆರಿ, ಅಮೆಂಡ್‌ಮೆಂಟ್... ಹೀಗೆ ಅನೇಕ ಹೊಸ ಪದಗಳನ್ನು ಚೆನ್ನಾಗಿ ಕಲಿತು ಅರ್ಥ ಮಾಡಿಕೊಳ್ಳಬೇಕು ಎನಿಸುತ್ತದೆ. ನಾನು ನನ್ನದೇ ಶಬ್ದಕೋಶವನ್ನು

ರಚಿಸಿಕೊಳ್ಳುತ್ತಿದ್ದೇನೆ." ಗೋವಿಂದ್ ಸಪೂರವಾಗಿ ಆರೋಗ್ಯವಂತರಾಗಿ ಕಾಣುತ್ತಾರೆ. ಅವರ ನಡೆ ಚುರುಕಾದದ್ದು. ಅವರು ಎಷ್ಟು ವೇಗವಾಗಿ ಎದ್ದು ನಿಲ್ಲಬಲ್ಲರು, ಕಾಲು ಮಡಿಸಿ ಕೂರಬಲ್ಲರು, ಒಂದು ಕಾಲಿನ ಮೇಲೆ ನಿಲ್ಲಬಲ್ಲರು ಎಂಬುದನ್ನು ಪ್ರದರ್ಶಿಸಿದರು. ಸರಳವಾದ ಸಂಗತಿಗಳಲ್ಲಿ ಕಂಡುಕೊಳ್ಳುವ ಶಿಶುಸಹಜವಾದ ಆನಂದವೇ ಗೋವಿಂದ್‌ರವರ ಕೊನೆಯಿಲ್ಲದ ಚೈತನ್ಯ ಹಾಗೂ ಇನ್ನೂ ಕಲಿಯಲಿಕ್ಕಿದೆ ಎಂಬ ಮನೋಭಾವದ ಹಿಂದಿರುವ ಗುಟ್ಟು.

ಜೇಡಿಮಣ್ಣಿನಲ್ಲಿ ಏನೇನೆಲ್ಲ ಮಾಡಬಹುದು ಎಂಬುದನ್ನು ಪಕ್ಕದ ಕೊಠಡಿಯಲ್ಲಿ ಮನ್‌ಸೌರ್‌ಬಾಯಿ ಅವರು ಮಕ್ಕಳಿಗೆ ಕಲಿಸುತ್ತಿದ್ದರು. ಹಿಂದಿನ ತರಗತಿಯಲ್ಲಿ ಮಾಡಿದ್ದ ಪಾಠವನ್ನು ಅವರು ಮುಂದುವರಿಸುತ್ತಿದ್ದರು. ಮಕ್ಕಳು ಜೇಡಿಮಣ್ಣಿನಿಂದಲೂ ಮಣ್ಣು ಸೇರಿಸಿದ ಇತರ ಮಿಶ್ರಣಗಳಿಂದಲೂ ರಚಿಸಿದ ವಸ್ತುಗಳನ್ನು ಮೇಜಿನ ಮೇಲೆ ಜೋಡಿಸಲು ಅವರಿಗೆ ಸಹಾಯ ಮಾಡುತ್ತಿದ್ದರು. ಇವುಗಳನ್ನು ಜೋಡಿಸುತ್ತಿರುವಾಗಲೇ ಮನ್‌ಸೌರ್‌ಬಾಯಿಯವರು ಮಕ್ಕಳೊಂದಿಗೆ ಕೆಲವೊಂದು ಉಪಯುಕ್ತ, ಅಮೂಲ್ಯ ಮಾಹಿತಿಗಳನ್ನು ಚರ್ಚಿಸುತ್ತಿದ್ದರು. ಉದಾ: ನೀರು ಸ್ಟೀಲ್ ಪಾತ್ರೆಗಿಂತ ಮಡಿಕೆಯಲ್ಲಿ ಹೆಚ್ಚು ತಣ್ಣಗಿರುವುದು ಯಾಕೆ? ಜೇಡಿಮಣ್ಣಿನ ವಸ್ತುಗಳನ್ನು ಸುಡುವುದು ಯಾಕೆ? ಕುಂಬಾರರು ನೀರು ಸೇರಿಸುವ ಮೊದಲು ಮಣ್ಣನ್ನು ಜರಡಿ ಹಿಡಿಯುವುದು ಯಾಕೆ? ಇತ್ಯಾದಿ. ಅಲ್ಲಿ ಮಕ್ಕಳು ತಾವೇ ಜೇಡಿಮಣ್ಣಿನಲ್ಲಿ ಕೆಲಸ ಮಾಡಲು ಕೊಠಡಿಯಿಂದ ಹೊರಟು ಅಂಗಳಕ್ಕೆ ಇಳಿದದ್ದೇ ನಮ್ಮ ಪಾಲಿಗೆ ಸುಂದರ ಕ್ಷಣವಾಯಿತು. ಮನ್‌ಸೌರ್‌ಬಾಯಿಯೂ ಮಕ್ಕಳೂ ಸೇರಿ ದೊಡ್ಡ ಬೇಸಿನ್‌ನಲ್ಲಿದ್ದ ಮಣ್ಣನ್ನು ಜರಡಿ ಆಡಿಸಿ, ನೀರು ಸೇರಿಸಿ ಮಕ್ಕಳ ಪುಟ್ಟ ಗುಂಪುಗಳಿಗೆ ಹಂಚಿದರು. ಈ ಚಟುವಟಿಕೆಯನ್ನು ಮಕ್ಕಳು ಹಿಂದೆಯೂ ಮಾಡಿದ್ದರಿಂದ; ಅವರು ಹಿಂದಿನ ತರಗತಿಯಲ್ಲಿ ತಾವು ಮಾಡಿಟ್ಟಿದ್ದ ವಸ್ತುಗಳನ್ನು ತಂದರು. ಒಂದು ದೀಪ, ಪಾತ್ರೆ, ಒಂದು ಮುಚ್ಚಳ ಇರುವ ಕುಡಿಕೆ ಹಾಗೂ ಪೀಠದಲ್ಲಿ ಕೂರಿಸಿದ್ದ ಒಂದು ಪುಟ್ಟ ಶಿವಲಿಂಗ ತಂದು ಜೋಡಿಸಿದರು. ಆ ಶಿವಲಿಂಗದ ರಚನೆ ತುಂಬಾ ನಾಜೂಕಿನದ್ದೂ ಕಲಾಪೂರ್ಣವೂ ಆಗಿತ್ತು, ಪೀಠದಲ್ಲಿ ಲಿಂಗದ ಪಕ್ಕ ಪಾರ್ವತಿಯ ಚಿಕ್ಕ ವಿಗ್ರಹವನ್ನೂ ಕೂರಿಸಿದ್ದರು. ಈ ರಚನೆಗಳನ್ನು ಮಕ್ಕಳು ಒಲೆಯಲ್ಲಿಟ್ಟು ಬೇಯಿಸಿದ್ದರು ಕೂಡಾ. ಹೀಗೆ ಒಂದು ಮಾಮೂಲಿ ತರಗತಿಯು ಆಹ್ಲಾದಕರವಾದ ಸಾಹಸವಾಗಿ ಪರಿವರ್ತಿತವಾಗಿತ್ತು. ಇಂತಹ 'ಪ್ರಾಜೆಕ್ಟ್' ಕೆಲಸಗಳನ್ನು ಮಾಡಿಸುವುದರಿಂದ ಪಠ್ಯಕ್ರಮವನ್ನು ನಿಗದಿತ ಅವಧಿಯಲ್ಲಿ ಮುಗಿಸಲು ಕಷ್ಟವಾಗುವುದಿಲ್ಲವೇ ಎಂದು ನಾವು ಮನ್‌ಸೌರ್‌ಬಾಯಿಯವರನ್ನು ಕೇಳಿದೆವು. "ಖಂಡಿತಾ ಇಲ್ಲ" ಎಂದರು ಮನ್‌ಸೌರ್‌ಬಾಯಿ. "ನಾವು ಇಂಥ ಕೆಲಸಗಳಿಗೆ ವಸ್ತು, ವಿಷಯಗಳನ್ನು ಸುಯೋಜಿತವಾಗಿ ಆಯ್ಕೆ ಮಾಡಿದರೆ, ಮಕ್ಕಳು ಬದುಕಿನುದ್ದಕ್ಕೂ ತಮ್ಮೊಂದಿಗೆ ಉಳಿಯುವಂಥ ಪರಿಕಲ್ಪನೆಗಳನ್ನು ಕಟ್ಟಿಕೊಳ್ಳುತ್ತಾರೆ; ಜೊತೆಗೆ ತಾವಾಗಿಯೇ ಹೊಸ ಹೊಸತನ್ನು ನಿರ್ಮಿಸುವ ಶಕ್ತಿಯನ್ನು ಬೆಳೆಸಿಕೊಳ್ಳುತ್ತಾರೆ. ಪಠ್ಯಕ್ರಮವನ್ನು ಮುಗಿಸುವುದಕ್ಕೆ ಯಾವ ಸಮಸ್ಯೆಯೂ ಆಗುವುದಿಲ್ಲ" ಎಂದು ಆಕೆ ಆತ್ಮವಿಶ್ವಾಸದಿಂದಲೇ

ಉತ್ತರಿಸಿದರು. ಮೂವತ್ತು ವಯಸ್ಸಿನ ಇವರು ಆ ಮೂವರು ಶಿಕ್ಷಕರಲ್ಲಿ ಹಿರಿಯರು. ಇವರು ರಾವ್‌ತಾದಿಂದ ಐದು ಕಿ.ಮೀ. ದೂರದಲ್ಲಿ ವಾಸಿಸುತ್ತಾರೆ. ಮನೆಯಲ್ಲಿ ಮೂರು ವರ್ಷದ ಮಗುವಿದೆ. ಇವರು ಶಾಲೆಯಲ್ಲಿದ್ದಾಗ, ಮಗುವನ್ನು ಗಂಡ ನೋಡಿಕೊಳ್ಳುತ್ತಾರೆ. ಸ್ಕೂಟಿಯ ಮೇಲೆ ಓಡಾಡುವ ಈಕೆಯಲ್ಲಿರುವ ಆತ್ಮವಿಶ್ವಾಸವು ಮೆಚ್ಚುವಂತಹದ್ದು. ಇವರು 2015ರಲ್ಲಿ ದೇವಾಲಿ ತಾಲೂಕಿನಲ್ಲಿ ಶಿಕ್ಷಣ ಇಲಾಖೆಯನ್ನು ಸೇರಿ, 2017ರಲ್ಲಿ ರಾವ್‌ತಾಗೆ ಬರುವ ಮುನ್ನ ಇನ್ನೊಂದು ಶಾಲೆಯಲ್ಲಿ ಗಣಿತವನ್ನು ಕಲಿಸುತ್ತಿದ್ದರು. ಬಿ.ಎ. ಮತ್ತು ಬಿ.ಎಡ್. ಮುಗಿಸಿರುವ ಮನ್‌ಸೌರ್ ಬಾಯಿಯವರು '2'ನೇ ಶ್ರೇಣಿಯ ಶಿಕ್ಷಕಿ, ಎಂದರೆ ಅವರಿಗೆ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಕಲಿಸಲು ಅರ್ಹತೆ ಇದೆ. ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಅವಕಾಶ ಸಿಕ್ಕರೆ ಆಕೆ ಅಲ್ಲಿಗೆ ಹೋಗಲು ಇಚ್ಛಿಸಬಹುದು ಅನಿಸುತ್ತದೆ. ಆದರೆ ಅವರು ರಾವ್‌ತಾದಲ್ಲಿನ ಪ್ರಾಥಮಿಕ ಶಾಲೆಯಲ್ಲಿ ಆನಂದದಿಂದ ಕೆಲಸ ಮಾಡುತ್ತಿದ್ದಾರೆ. ಮನ್‌ಸೌರ್ ಟೀಚರ್ ಒಂದು ವೇಳೆ ಬೇರೊಂದು ಶಾಲೆಗೆ ಹೋದರೆ ರಾವ್‌ತಾದ ಮಕ್ಕಳು ಖಂಡಿತಾ ಬೇಸರ ಪಟ್ಟುಕೊಳ್ಳುತ್ತಾರೆ.

ಇನ್ನೊಂದು ಕಡೆ ಕಾಲೂರಾಮ್ ಯಾದವ್ ಅವರು ವ್ಯಾಕರಣ ಕಲಿಸುತ್ತಿದ್ದರು. ಅವರು ಇಂಗ್ಲಿಷ್ ಭಾಷೆಯಲ್ಲಿ ಇರುವ 'ಎ', 'ಆ್ಯನ್' 'ದ' ಮುಂತಾದ ಉಪಪದಗಳನ್ನು ಪರಿಚಯಿಸುತ್ತಿದ್ದರು. ಶಿಕ್ಷಕರಾಗಿ ಅವರದ್ದು ತುಂಬ ವ್ಯವಸ್ಥಿತ ವ್ಯಕ್ತಿತ್ವ ಎಂದು ನಮಗನ್ನಿಸಿತು. ಸ್ಪಷ್ಟವಾದ ಉದಾಹರಣೆಗಳು, ಮಕ್ಕಳಿಗೆ ನೀಡಬೇಕಾದ ಕೆಲಸ, ಪ್ರತಿಯೊಂದು ಮಗುವನ್ನು ತೊಡಗಿಸಿಕೊಳ್ಳುವ ಕ್ರಮ, ಮುಂದಿನ ಪಾಠಕ್ಕೆ ಹೋಗುವ ಮುನ್ನ ಹಿಂದಿನ ಪಾಠವು ಮಕ್ಕಳಿಗೆ ಅರ್ಥವಾಯಿತೇ ಎಂದು ತಿಳಿದುಕೊಳ್ಳುವ ವಿಧಾನ, ಹೀಗೆ ತಾವು ಮಾಡುವ ಪಾಠಕ್ಕೆ ಅಗತ್ಯವಾದ ಸೂಕ್ಷ್ಮವಾದ ಯೋಜನೆಯನ್ನು ಅವರು ರೂಪಿಸಿಕೊಂಡಿದ್ದಾರೆ ಎಂಬುದು ವೇದ್ಯವಾಗುತ್ತಿತ್ತು., 'ಉಪಪದ'ಗಳನ್ನು ಹೇಗೆ ಉಪಯೋಗಿಸಬಹುದು ಎಂಬುದನ್ನು ಮಕ್ಕಳು ಗ್ರಹಿಸಿದ್ದಾರೆ ಎಂಬ ವಿಶ್ವಾಸ ಪಾಠವನ್ನು ಮುಗಿಸುವ ವೇಳೆಗೆ ಅವರಲ್ಲಿ ಮೂಡಿತ್ತು. "ಅವರ್", "ಆನೆಸ್ಟ್" ಮೊದಲಾದ ಪದಗಳ ಮುಂಚೆ 'ಆ್ಯನ್' ಎಂಬ ಉಪಪದವನ್ನು ಏಕೆ ಉಪಯೋಗಿಸಬೇಕು ಎಂಬುದನ್ನು ಅವರು ವಿವರಿಸಿದ ರೀತಿಯಂತೂ ನಮಗೆ ತುಂಬಾ ಇಷ್ಟವಾಯಿತು. ಕಾಲೂರಾಮ್ ಅವರು ಎಲ್ಲ ಪದಗಳನ್ನೂ, ಸ್ವರಗಳನ್ನೂ ದೇವನಾಗರಿ ಲಿಪಿಯಲ್ಲಿ ಬರೆದು ತೋರಿಸುತ್ತಿದ್ದರು. ಇದರಿಂದಾಗಿ ಕೆಲವೊಂದು ಇಂಗ್ಲಿಷ್ ಪದಗಳಲ್ಲಿ ಮೊದಲಲ್ಲಿ ಬರುವ ವ್ಯಂಜನಾಕ್ಷರಗಳನ್ನು ಉಚ್ಚರಿಸದೇ ಬಿಡಬೇಕು (ಸೈಲೆಂಟ್) ಎಂಬುದು ಮಕ್ಕಳಿಗೆ ಕೂಡಲೇ ಅರ್ಥವಾಗುತ್ತಿತ್ತು. ಹೀಗಾಗಿ ಉಚ್ಚಾರಣೆಯಲ್ಲಿ ವ್ಯಂಜನದ ನಂತರ ಬರುವ ಸ್ವರದಿಂದಲೇ ಪದವು ಆರಂಭವಾಗುತ್ತದೆ ಎಂಬುದು ಅರ್ಥವಾಯಿತು. ಅವರು ಚಾಕ್‌ಪೀಸ್ ಕೆಳಗಿಟ್ಟು ಪಾಠ ನಿಲ್ಲಿಸುವ ವೇಳೆಗೆ ಮಧ್ಯಾಹ್ನದ ಊಟದ ಹೊತ್ತಾಗಿತ್ತು.

ಮಧ್ಯಾಹ್ನದ ಊಟದ ಅನಂತರ ಮಕ್ಕಳು ಆಟದ ಮೈದಾನವಾಗಿರುವ ಹೊರಗಿನ ಅಂಗಳದಲ್ಲಿ ಸ್ವಲ್ಪ ಹೊತ್ತು ಆಟವಾಡಿ ತರಗತಿಗೆ ಹೋದರು. ಅವರು ಸ್ವತಂತ್ರವಾಗಿ ಗುಂಪುಗಳನ್ನು ರಚಿಸಿಕೊಂಡು ಕೆಲಸಗಳಲ್ಲಿ ತೊಡಗಿಕೊಂಡರು. ಹರಟೆ, ಗಜಿಬಿಜಿ ಸದ್ದು

ಮಾಡುತ್ತಾ ಮಕ್ಕಳು ಕೆಲಸವನ್ನು ಶುರು ಮಾಡಿದರು. ಆದರೆ ರಾವ್‌ತಾದ ಶಿಕ್ಷಕರು ಸದ್ದುಮಾಡಬೇಡಿ, ಶಿಸ್ತಿನಿಂದಿರಬೇಕು ಎಂದೇನೂ ಮಕ್ಕಳನ್ನು ದಬಾಯಿಸಲಿಲ್ಲ.

ಕಾಲೂರಾಮ್‌ಗೆ ಈಗ ಇಪ್ಪತ್ತೆಂಟು ವರ್ಷ. 2012ರಲ್ಲಿ ಶಿಕ್ಷಣ ಇಲಾಖೆ ಸೇರಿದ ಅವರು ಮೊದಲು ಕೆಲಸ ಮಾಡಿದ್ದು ಬಾರ್‌ಮೆರ್ ಜಿಲ್ಲೆಯಲ್ಲಿ. ಅಲ್ಲಿ ಅವರು 2015ರವರೆಗೂ ಏಕೋಪಾಧ್ಯಾಯ ಶಾಲೆಯಲ್ಲಿ ಕೆಲಸ ಮಾಡಿದರು. ಆದರೆ ಸ್ವಂತ ಜಿಲ್ಲೆಯಾದ ಟೋಂಕ್‌ಗೆ ವಾಪಸು ಹೋಗಲು ಬಯಸಿದ್ದರು. . ಹೀಗಾಗಿ ಕೆಲಸಕ್ಕೆ ರಾಜೀನಾಮೆ ನೀಡಿ ಮತ್ತೆ ಶಿಕ್ಷಕರ ಆಯ್ಕೆಯ ಪರೀಕ್ಷೆಯಲ್ಲಿ ಉತ್ತಮ ರ್‍ಯಾಂಕ್‌ಗೆ ಪ್ರಯತ್ನಿಸಿ ಯಶಸ್ಸು ಪಡೆದು ಟೋಂಕ್ ಜಿಲ್ಲೆಗೆ ಬಂದರು. ಅವರು 2015ರಲ್ಲಿ ರಾವ್ತಾ ಗ್ರಾಮದ ಶಾಲೆಗೆ ಬಂದು ಸೇರಿದ್ದು ಹೀಗೆ. ಇಲ್ಲಿ ಕೆಲಸಕ್ಕೆ ಸೇರಿದಾಗ ಕೇವಲ ಶಾಲಾ ಪರೀಕ್ಷೆ ಮುಗಿಸಿ ಜೊತೆಗೆ ಶಿಕ್ಷಣದಲ್ಲಿ ಒಂದು ಡಿಪ್ಲೊಮಾ ಪಡೆದಿದ್ದರಷ್ಟೇ. ಅನಂತರದ ದಿನಗಳಲ್ಲಿ ಅಂಚೆ ತೆರಪಿನ ಶಿಕ್ಷಣದ ಮೂಲಕ ಬಿ.ಎ. ಪದವಿಯನ್ನು ಪಡೆದರು.

ಮೂವರು ಶಿಕ್ಷಕರೂ ತರುಣರು, ಚೈತನ್ಯಶಾಲಿಗಳು ಮತ್ತು ಜಾಣರು. ಟೋಂಕ್ ಜಿಲ್ಲೆಯ ಅತ್ಯುತ್ತಮ ಶಿಕ್ಷಕರ ತಂಡ ಇದೇ ಇರಬೇಕು. ಅವರು ತಮ್ಮ ಶಾಲೆಯನ್ನು ಕುರಿತಾಗಿ ಮುಂದಿನ ಕೆಲವರ್ಷಗಳಲ್ಲಿ ಸಾಧಿಸಬಹುದಾದ ಸ್ಪಷ್ಟವಾದ ಗುರಿಗಳನ್ನು ರೂಪಿಸಿ ಕೊಂಡಿದ್ದಾರೆ. 5ನೆಯ ತರಗತಿಯ ಕೆಲವು ವಿದ್ಯಾರ್ಥಿಗಳಾದರೂ ನವೋದಯ ಶಾಲೆಯ ಪ್ರವೇಶ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು ಎಂಬುದು ಅದರಲ್ಲಿ ಮೊದಲನೆಯದು. 'ಅದು ಕಷ್ಟ ನಿಜ, ಆದರೆ ನಾಲ್ಕೈದು ಹುಡುಗರಿಗಾದರೂ ಅಂತಹ ಅಂತಃಶಕ್ತಿಯಿದೆ. ಕಳೆದ ವರ್ಷ ರಾಜಸ್ಥಾನ ಮಂಡಳಿಯ 5ನೆಯ ತರಗತಿಯ ಪರೀಕ್ಷೆಯಲ್ಲಿ, ನಮ್ಮ ಹದಿನೇಳು ವಿದ್ಯಾರ್ಥಿಗಳಲ್ಲಿ ಹದಿಮೂರು ಜನ ಎ+ ಶ್ರೇಣಿಯನ್ನು ಗಳಿಸಿದ್ದಾರೆ. ಶೇಕಡಾ 91ಕ್ಕಿಂತ ಹೆಚ್ಚು ಅಂಕ ಪಡೆದವರಿಗೆ ಮಾತ್ರ ಕೊಡಲಾಗುವಂಥ ಶ್ರೇಣಿ ಅದು.'

ಸಮುದಾಯವು ಶಾಲೆಯ ಬಗ್ಗೆ, ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಹೆಚ್ಚಿನ ಆಸಕ್ತಿ ತೋರಿಸಬೇಕು ಎಂದು ಈ ಶಿಕ್ಷಕರು ಬಯಸುತ್ತಾರೆ. ಆದರೆ ಪೋಷಕರಿಗೆ ಸಮಯವೇ ಇರುವುದಿಲ್ಲ. ಈ ಊರಿನಲ್ಲಿ ಸಾಮಾನ್ಯವಾಗಿ ಇಬ್ಬರು ಪೋಷಕರೂ ದಿನಗೂಲಿಗಳಾಗಿದ್ದು ಬೆಳಿಗ್ಗೆ ಬೇಗ ಹೊರಟು ರಾತ್ರಿ ತಡವಾಗಿ ಮನೆ ಸೇರುತ್ತಾರೆ. ಅವರಿಗೆ ತಮ್ಮ ಮಕ್ಕಳು ಏನು ಕಲಿಯುತ್ತಿದ್ದಾರೆ ಎಂದು ಕೂಡಾ ನೋಡಲು ವ್ಯವಧಾನ ಇರುವುದಿಲ್ಲ. ಅವರಲ್ಲಿ ಅನೇಕರು ಕಹಾರ್ (ಹಿಂದುಳಿದವರು–ಓಬಿಸಿ) ಸಮುದಾಯಕ್ಕೆ ಸೇರಿದವರು. ಕೆಲವರು ತರಕಾರಿ ಬೆಳೆಯುವ, ಮಾರುವ ಮಾಲಿ ಸಮುದಾಯಕ್ಕೆ ಸೇರಿದವರು, ಈ ಹಳ್ಳಿಯ ಮತ್ತು ಸುತ್ತಮುತ್ತಲಿನ ಗ್ರಾಮಗಳ ಬಹುತೇಕ ಜನ ಬಿಲಾಸ್‌ಪುರ್ ಅಣೆಕಟ್ಟು ಕಟ್ಟಿದಾಗ ತಮ್ಮ ಜಮೀನನ್ನು ಕಳೆದುಕೊಂಡವರು. ನಾವು ಹೊರಟಾಗ ಕಾಲೂರಾಮ್ ಹೇಳಿದ ಮಾತು ಅವರ ಸ್ಥಿತಿ–ಗತಿಗಳನ್ನು ಪಡಿಮೂಡಿಸಿತು, "ಕಳೆದುಕೊಂಡ ಜಮೀನಿಗೆ ಅವರು ಪರಿಹಾರವನ್ನೇನೋ ಪಡೆದುಕೊಂಡರು; ಆದರೆ ಅವರೀಗ ರೈತರಲ್ಲ, ಕೂಲಿಕಾರರು."

## 'ಬಿಡಿ, ಹತ್ತು, ನೂರು, ಸಾವಿರ' – ಕರಣಗಣದಿ ರಿಂಗಣ

**ಕಮಲ್‌ಚಂದ್ ಮಾಲಿ**

ಸರ್ಕಾರಿ ಪ್ರಾಥಮಿಕ ಶಾಲೆ, ದಾಮೋದರ್‌ಪುರ, ಡಿಗ್ಗಿ ಪಂಚಾಯತ್
ಮಾಲ್‌ಪುರ ತಾಲ್ಲೂಕು, ಟೋಂಕ್ ಜಿಲ್ಲೆ

ಸಾಮಾನ್ಯವಾಗಿ ಒಂದು ಶಾಲೆಗೆ ಭೇಟಿ ನೀಡಬೇಕೆಂದಿದ್ದರೆ ಬೆಳಗಿನ ಪ್ರಾರ್ಥನಾ ಸಭೆಯ ವೇಳೆಗೆ ಹೋಗಿ ತಲಪುವುದು ಒಳ್ಳೆಯದು. ಚಳಿಗಾಲದ ಆರಂಭದ ಆ ದಿನ ನಾವು ಬೆಳಿಗ್ಗೆ 9–15ಕ್ಕೆ ಎಂದರೆ ಶಾಲೆ ಶುರುವಾಗುವುದಕ್ಕೆ ಇಪ್ಪತ್ತೈದು ನಿಮಿಷಗಳ ಮುನ್ನವೇ ದಾಮೋದರ್‌ಪುರದ ಶಾಲೆಯನ್ನು ತಲಪಿದೆವು. ಶಾಲೆ ಆರಂಭವಾಗುವವರೆಗೂ ಹೇಗೆ ಸಮಯ ಕಳೆಯುವುದು ಎಂಬ ಹಿಂಜರಿಕೆಯಿಂದ ಹೋಗುತ್ತಿರುವಾಗಲೇ 3 ರಿಂದ 11 ವಯಸ್ಸಿನ ಮಕ್ಕಳ ತಂಡವೊಂದು ನಮಗೆ ಶುಭಕೋರುತ್ತಾ ಎದುರಾಯಿತು. ಶಾಲೆಯ ಕಟ್ಟಡವು ಉದ್ದವಾಗಿದ್ದು ಅದರಲ್ಲಿ ಮೂರು ಕೊಠಡಿಗಳೂ, ಒಂದು ಜಗಲಿಯೂ ಇದ್ದವು. ಜಗಲಿಗೆ ಹೋಗುವ ಮೆಟ್ಟಿಲುಗಳ ಇಕ್ಕೆಲಗಳಲ್ಲಿಯೂ ಪುಟ್ಟದಾದ 34 ಜೋಡಿ ಚಪ್ಪಲಿಗಳನ್ನು ವ್ಯವಸ್ಥಿತವಾಗಿ ಜೋಡಿಸಿದ್ದುದು ಕಂಡುಬಂತು.

ಒಂದು ಹಾಗೂ ಎರಡನೆಯ ತರಗತಿಯ ಮಕ್ಕಳು ಆಗಲೇ ತಮ್ಮ ಪುಸ್ತಕದ ಚೀಲಗಳನ್ನು ತರಗತಿಯಲ್ಲಿ ಇರಿಸಿ ಅಂಗಳದಲ್ಲಿ ಜೋರಾಗಿ ಮಾತನಾಡುತ್ತಾ ಗುಂಪುಗೂಡಿದ್ದರು. ಅವರಿಗಿಂತ ಹಿರಿಯರಾದ 3, 4 ಮತ್ತು ಐದನೆಯ ತರಗತಿಗಳ ಮಕ್ಕಳು ಹೆಚ್ಚು ಸದ್ದುಮಾಡದೆ ತಮ್ಮ ತರಗತಿಗಳಲ್ಲೇ ಇನ್ನೂ ಇದ್ದರು. ಮಧ್ಯದ ಕೊಠಡಿ ಅಂಗನವಾಡಿಗೆ ಸೇರಿದ್ದು. ಅಲ್ಲಿನ 15 ಪುಟಾಣಿಗಳಲ್ಲಿ ಒಂಭತ್ತು ಆಗಲೇ ಬಂದು ಬಿಟ್ಟಿದ್ದವು. ದೊಡ್ಡ ಮಕ್ಕಳೊಂದಿಗೆ ಅವು ಚೆನ್ನಾಗಿ ಹೊಂದಿಕೊಂಡಂತೆ ಕಾಣುತ್ತಿತ್ತು. ದೊಡ್ಡವರಲ್ಲಿ ಕೆಲವರು ಈ ಮಕ್ಕಳ ಸೋದರರೂ ಇರಬಹುದು. ಶಾಲೆಯಲ್ಲಿ ದಾಖಲಾತಿಯಾದ ಮಕ್ಕಳ ಸಂಖ್ಯೆ 48 ಮತ್ತು ಅದರಲ್ಲಿ 34 ಆಗಲೇ ಹಾಜರಾಗಿದ್ದವು.

ದಾಮೋದರ್‌ಪುರ ಶಾಲೆಯ ಇಬ್ಬರು ಶಿಕ್ಷಕರಲ್ಲಿ ಒಬ್ಬರಾದ ಕಮಲ್‌ಚಂದ್ ಮಾಲಿ ಆಗಲೇ ಬಂದು ಕೆಲವು ಹಿರಿಯ ಮಕ್ಕಳೊಂದಿಗೆ ಮಾತುಕತೆಯಲ್ಲಿ ತಲ್ಲೀನರಾಗಿದ್ದರು. ಆ ಏಳು ಜನ ದೊಡ್ಡ ಮಕ್ಕಳೂ ದಾಮೋದರ್‌ಪುರ ಪ್ರಾಥಮಿಕ ಶಾಲೆಯ ಹಳೆಯ ವಿದ್ಯಾರ್ಥಿಗಳು, ಅವರು ಈಗ ಎರಡು ಕಿಲೋಮೀಟರ್ ದೂರದ ಡಿಗ್ಗಿಯ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದಾರೆ. ಈ ಮಕ್ಕಳು ಬಹುತೇಕ ದಿನವೂ ಎಂಬಂತೆ ತಮ್ಮ ಹಳೆಯ ಶಾಲೆಗೆ ಭೇಟಿ ಕೊಟ್ಟು ಆಮೇಲೆ ತಮ್ಮ ಶಾಲೆಗೆ ಹೋಗುತ್ತಾರೆ; ಹಳೆಯ ಶಾಲೆಯ ಜೊತೆಗಿನ ಅವರ ಬಾಂಧವ್ಯ ಅಷ್ಟು ಗಾಢವಾದದ್ದು.

ಸುಮಾರು 9.25ರ ಹೊತ್ತಿಗೆ ಉಳಿದ ಹದಿನಾಲ್ಕು ಮಕ್ಕಳು ಮತ್ತು ಇನ್ನೊಬ್ಬ ಶಿಕ್ಷಕರಾದ ರಾಧೇಶ್ಯಾಮ್ ಚೌಧರಿಯವರು ಬಂದು ತಲುಪಿದರು. ನಿಗದಿತ ಸಮಯಕ್ಕಿಂತ ಹದಿನೈದು ನಿಮಿಷಗಳ ಮೊದಲೇ ಶಾಲೆಯು ತನ್ನ ಬೆಳಗಿನ ಪ್ರಾರ್ಥನಾ

ಸಭೆಗೆ ಸಿದ್ಧವಾಗಿತ್ತು. ನವೆಂಬರ್ ಮಧ್ಯದ ಮುಂಜಾವಾಗಿದ್ದರಿಂದ ಆಗಲೇ ಒಂದಿಷ್ಟು ಚಳಿಗಾಳಿ ಬೀಸಲು ತೊಡಗಿದ್ದರಿಂದ, ಹೊರಗೆ ನಡೆಸುವ ಬದಲು ಪ್ರಾರ್ಥನಾ ಸಭೆಯನ್ನು ಕೋಣೆಯೊಂದಕ್ಕೆ ಸ್ಥಳಾಂತರಿಸಲಾಗಿತ್ತು. ಮಕ್ಕಳೊಂದಿಗೆ ಕಾಲು ಮಡಿಸಿಕೊಂಡು ಕೊನೆಯ ಸಾಲಿನಲ್ಲಿ ಕುಳಿತು ನಾವು ನಮ್ಮ ಹಳ್ಳಿಗಾಡಿನ ಶಾಲೆಗಳ ಪ್ರಾರ್ಥನಾ ಸಭೆಗಳ ಬಗ್ಗೆಯೇ ಯೋಚಿಸುತ್ತಿದ್ದೆವು. ಕಣ್ಣುಮುಚ್ಚಿಕೊಂಡು ಒಮ್ಮೊಮ್ಮೆ ಶ್ರುತಿಬದ್ಧವಾಗಿ, ಒಮ್ಮೊಮ್ಮೆ ಅಪಸ್ವರದಲ್ಲಿ ಸಂಸ್ಕೃತ ಶ್ಲೋಕ, ಸರಸ್ವತಿ ವಂದನೆ, ರಾಷ್ಟ್ರಪ್ರತಿಜ್ಞೆ ಮತ್ತು 'ಪ್ರೇಮ್‌ಕಾ ಸಾಗರ್', 'ಪ್ರೇಮ್‌ಕಿ ಗಂಗಾ' ಮುಂತಾದ ಪದಗುಚ್ಛಗಳಿಂದ ಕೂಡಿದ ಹಿಂದಿ ಪದ್ಯಗಳು, ದ್ವಿಪದಿಗಳು ಇವನ್ನೆಲ್ಲಾ ಹಾಡುತ್ತಾ ಹೋಗುವ ನಮ್ಮ ಮಕ್ಕಳು ನಿಜಕ್ಕೂ ಇದನ್ನೆಲ್ಲಾ ಜೀರ್ಣಿಸಿಕೊಂಡಿದ್ದಾರೆಯೇ? ಅಥವಾ ಇದೊಂದು ಪೊಳ್ಳು ಆಚರಣೆಯೇ? ಆದರೆ ಈ ಎಳೆಯ ಪ್ರಾಮಾಣಿಕ ಮುಖಗಳನ್ನು ಕಂಡಾಗ ಪ್ರಾಯಶಃ ಇದೆಲ್ಲಾ ಅವರಲ್ಲಿ ಒಂದಿಷ್ಟು ಮೃದುತ್ವವನ್ನು, ಬೇರೆಯವರೊಂದಿಗೆ ಹಂಚಿಕೊಳ್ಳುವ, ಅವರಿಗಾಗಿ ಅನುಕಂಪ ಪಡುವ ಗುಣಗಳನ್ನು ಬೆಳೆಸುತ್ತದೇನೋ ಎಂದು ನಂಬಲು ಇಷ್ಟವಾಗುತ್ತದೆ. ಪ್ರಾಯಶಃ ಈ ಸಭೆ ಶಾಲೆಯಲ್ಲಿನ ಇಡೀ ದಿನದ ಕೆಲಸಕ್ಕೆ ಅವರನ್ನು ಸಿದ್ಧಗೊಳಿಸುತ್ತದೆ. ನಾವು ಹೀಗೆಲ್ಲಾ ಅಂದುಕೊಳ್ಳುತ್ತಿರುವಾಗಲೇ ಸಭೆ ತನ್ನ ಮುಂದಿನ ಕಾರ್ಯಸೂಚಿಗೆ ಹೊರಳಿತು. ನಾಲ್ಕನೆಯ ತರಗತಿಯ ಹುಡುಗನೊಬ್ಬ ಸ್ನೇಹದ ಕುರಿತಾದ ಕಥೆಯೊಂದನ್ನು ಹಿಂದಿಯಲ್ಲಿ ಹೇಳತೊಡಗಿದ. ಅದರಲ್ಲಿ 'ಡಕ್ಸ್', 'ಪಾಂಡ್', 'ಫ್ರೆಂಡ್ಸ್', 'ರ್‍ಯಾಬಿಟ್' ಮುಂತಾದ ಎಲ್ಲ ಮಕ್ಕಳಿಗೂ ಅರ್ಥವಾಗುವ ಇಂಗ್ಲಿಷ್ ಪದಗಳೂ ಇದ್ದವು. ಮೂರನೆಯ ತರಗತಿಯ ಮೂವರು ಹುಡುಗಿಯರು ಒಂದು ಪದ್ಯವನ್ನು ಹೇಳುತ್ತಿದ್ದರೆ, ಉಳಿದ ಮಕ್ಕಳು ಅವರೊಂದಿಗೆ ಮೇಳವಾಗಿ ಸೇರಿಕೊಂಡರು. ಆ ಪದ್ಯವು ಮಳೆಯ ಬಗ್ಗೆ, ನೀರು ಎಷ್ಟು ಅಮೂಲ್ಯ ಎಂಬುದರ ಬಗ್ಗೆ ಇತ್ತು. ನಂತರ ಇನ್ನೊಂದು ಪದ್ಯ ಹೇಳಿದ್ದಾಯಿತು. ಸಾಮಾನ್ಯ ಜ್ಞಾನ, ಜಾಗೃತಿಯನ್ನು ಹೆಚ್ಚಿಸುವಂಥ ಪ್ರಶ್ನೆಗಳನ್ನು ಕೇಳಲಾಯಿತು. ಎಲ್ಲ ಪ್ರಶ್ನೆಗಳಿಗೂ ನಾವು ಉತ್ತರ ಹೇಳುತ್ತೇವೆ ಎಂದು ಅನೇಕರು ಕೈ ಎತ್ತುತ್ತಿದ್ದರು. ನಂತರ ಕಮಲ್‌ಚಂದ್‌ರು ಗಣಿತ ಮತ್ತು ಭಾಷೆಗಳ ಕುರಿತು ಕೆಲವೊಂದು ಪ್ರಶ್ನೆಗಳನ್ನು ಕೇಳಿದರು. ಬಹುತೇಕ ಮಕ್ಕಳು ಉತ್ತರಿಸಲು ಯತ್ನಿಸಿದರು. ತಪ್ಪು ಉತ್ತರಗಳನ್ನೂ ಸಮಾಧಾನ ಚಿತ್ತದಿಂದಲೇ ಸ್ವೀಕರಿಸಲಾಯಿತು. ಕಮಲ್‌ಚಂದ್‌ರು 5555 ಎಂದು ಕಪ್ಪು ಹಲಗೆಯ ಮೇಲೆ ಬರೆದು, ಅದರಲ್ಲಿರುವ ಪ್ರತಿಯೊಂದು '5'ಕ್ಕೂ ಒಂದೇ ಮೌಲ್ಯವಿದೆಯೇ ಎಂದು ಕೇಳಿದರು. ಆ ಮಕ್ಕಳಿಗೆ ಮೌಲ್ಯವು ಸ್ಥಾನವನ್ನು ಆಧರಿಸಿರುತ್ತದೆ ಎಂಬ ತಿಳಿವಳಿಕೆ ಇದ್ದುದರಿಂದ ಅದರಲ್ಲೊಬ್ಬನು ಚೆನ್ನಾಗಿ ಉತ್ತರಿಸಿದ; 'ಸರ್, ಸಬ್ ಪಾಂಚ್ ಭಿ ಅಲಗ್ ಸೀಟ್ ಪರ್ ಬೈಠಾ ಹೈ, ಇಸಿಲಿಯೆ ಉಸ್ ಕಿ ವ್ಯಾಲ್ಯೂ ಭಿ ಅಲಗ್ ಹೈ' (ಸರ್ ಪ್ರತಿಯೊಂದು 'ಐದು' ಬೇರೆ ಬೇರೆ ಸ್ಥಾನಗಳಲ್ಲಿ ಕುಳಿತಿವೆಯಾದ್ದರಿಂದ ಅವುಗಳ ಮೌಲ್ಯವೂ ಬೇರೆ ಬೇರೆಯಾಗಿವೆ). ಆ ನಂತರ ಮಕ್ಕಳು ಆ ಅಂಕಿಗಳ ಸ್ಥಾನವನ್ನು ಗಟ್ಟಿಯಾಗಿ 'ಏಕಾಯ್, ದಹಾಯ್, ಸೈಕಡಾ, ಹಜ಼ಾರ್' (ಬಿಡಿ, ಹತ್ತು, ನೂರು, ಸಾವಿರ) ಎಂದು ಕೂಗಿದ್ದು ಇಡೀ ಕೊಠಡಿಯಲ್ಲಿ

ಮೊಳಗಲಾರಂಭಿಸಿತು. ಪ್ರತಿದಿನ ಪ್ರಾರ್ಥನಾಸಭೆ ಹದಿನೈದು ನಿಮಿಷ ಮುಂಚಿತವಾಗಿ ಆರಂಭವಾಗಿ ಇಂಥ ಚಟುವಟಿಕೆಗಳಿಗೆ ಸಮಯವನ್ನು ಒದಗಿಸುತ್ತದೆ.

ರಾಧೇಶ್ಯಾಮ್ ಒಂದು ಮತ್ತು ಎರಡನೆಯ ತರಗತಿಯ ಮಕ್ಕಳೊಂದಿಗೆ ತರಗತಿ ಕೊಠಡಿಗೆ ತೆರಳಿದರೆ, ಕಮಲ್‌ಚಂದ್ 3, 4 ಮತ್ತು ಐದನೆಯ ತರಗತಿಯ ಮಕ್ಕಳೊಡನೆ ಅಲ್ಲಿಯೇ ಉಳಿದು ಗಣಿತದ ಪಾಠವನ್ನು ಆರಂಭಿಸಿದರು. ಕಮಲ್‌ಚಂದ್ 4 ಮತ್ತು ಐದನೆಯ ತರಗತಿಗಳಿಗೆ ನೀಡಿದ ಕೆಲಸ ಆಸಕ್ತಿದಾಯಕವಾಗಿತ್ತು. ಅವರನ್ನು ಸಣ್ಣ ಸಣ್ಣ ಗುಂಪುಗಳಾಗಿ ವಿಂಗಡಿಸಲಾಯಿತು. ಪ್ರತಿಯೊಂದು ಗುಂಪಿಗೂ ಪೊಲ್ಕಾ ಡಾಟ್‌ಗಳಂತೆ (ಒಂದು ವಿನ್ಯಾಸದಲ್ಲಿ ಇರುವ ಬಿಂದುಗಳ ಸಮೂಹ) ಬಣ್ಣದ ವರ್ತುಲಗಳಿರುವ ಚಾರ್ಟ್ ಅನ್ನು ನೀಡಲಾಗಿತ್ತು. ಅವುಗಳಿಗೆ ಬಿಡಿ, ಹತ್ತು, ನೂರು, ಸಾವಿರ ಎಂಬ ಮೌಲ್ಯಗಳನ್ನು ನೀಡಲಾಗಿತ್ತು. ಪ್ರತಿಯೊಂದು ತಂಡಕ್ಕೂ ಒಂದು ಬಳೆಯನ್ನು ಕೊಟ್ಟು ಅದನ್ನು ಚಾರ್ಟ್‌ನ ಮೇಲೆ ಬುಗುರಿಯಂತೆ ತಿರುಗಿಸಲು ಹೇಳಲಾಗಿತ್ತು. ಬಳೆಯು ಸುತ್ತಿ ಸುತ್ತಿ ಬಂದು ಗುಂಪು ಬಿಂದುಗಳ ಮೇಲೆ ನಿಂತಾಗ ಮಕ್ಕಳು ಬಳೆಯೊಳಗೆ ಎಷ್ಟು ಬಿಂದುಗಳಿವೆ ಎಂದು ಎಣಿಸಿ, ಅವುಗಳಿಗೆ ನೀಡಿರುವ ತಲಾವಾರು ಮೌಲ್ಯದಿಂದ ಗುಣಿಸಿ ಒಟ್ಟು ಮೊತ್ತವನ್ನು ಹೇಳಬೇಕಿತ್ತು. 3ನೆಯ ತರಗತಿಯ ಮಕ್ಕಳಿಗೆ ಹೊರಗೆ ಹೋಗಿ ಆವರಣದಲ್ಲಿದ್ದ ಮರಗಳನ್ನೂ, ಪೊದೆಗಳನ್ನೂ ಎಣಿಸಿ ಪಟ್ಟಿಮಾಡಲು ಹೇಳಲಾಗಿತ್ತು. ಅವರು ಅದಕ್ಕೆ ಒಂದು ಕೋಷ್ಟಕ ತಯಾರಿಸಿ ಒಂದು ಪಂಕ್ತಿಯಲ್ಲಿ ಗಿಡದ ಹೆಸರು, ಇನ್ನೊಂದು ಪಂಕ್ತಿಯಲ್ಲಿ ಅವುಗಳ ಸಂಖ್ಯೆ ಎಷ್ಟು ಎಂಬುದನ್ನು ನಮೂದಿಸಬೇಕಿತ್ತು. ಹೆಚ್ಚು ಸಂಖ್ಯೆಯಲ್ಲಿ ಇರುವಂಥವನ್ನು ಮೇಲೆ ಬರೆದು, ಅವರೋಹಣ ಕ್ರಮದಲ್ಲಿ ಉಳಿದವನ್ನು ನಮೂದಿಸಬೇಕಿತ್ತು.

ಮಕ್ಕಳು ತಮ್ಮ ಕೆಲಸಗಳಲ್ಲಿ ಮುಳುಗಿದ್ದಾಗ ಕಮಲ್ ಚಂದ್‌ರವರು ಅವರ ಮೇಲೆ ಒಂದು ಕಣ್ಣಿರಿಸಿರುತ್ತಲೇ, ನಮ್ಮೊಂದಿಗೆ ಮಾತನಾಡುವುದು ಸಾಧ್ಯವಾಯಿತು. ಮೂಲತಃ ಡಿಗ್ಗಿಯ ನಿವಾಸಿಯಾದ 48 ವರ್ಷದ ಕಮಲ್‌ಚಂದ್ 1996ರಲ್ಲಿ ತಮ್ಮ ಬಿ.ಎ. ಅನ್ನು ಮುಗಿಸಿದರು. ಖಾಸಗಿ ಶಾಲೆಯೊಂದರಲ್ಲಿ ಎರಡು ವರ್ಷ ಶಿಕ್ಷಕರಾಗಿದ್ದು ನಂತರ ಮನೆಗೆ ಹತ್ತಿರವಿದ್ದ ಮಾಲಿದಾನಿ ಎಂಬಲ್ಲಿನ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಗುತ್ತಿಗೆ ಶಿಕ್ಷಕರಾದರು. 2008ರವರೆಗೂ ಗುತ್ತಿಗೆ ಶಿಕ್ಷಕರಾಗಿದ್ದ ಅವರು ಕೊನೆಗೆ ಶಿಕ್ಷಣ ಇಲಾಖೆಯಲ್ಲಿ ಶಿಕ್ಷಕ ಹುದ್ದೆಗೆ ನೇಮಕಗೊಂಡು ಮನೆಯಿಂದ 5 ಕಿ.ಮೀ. ದೂರದಲ್ಲಿರುವ ದಾಮೋದರ್‌ಪುರ ಶಾಲೆಯನ್ನು ಸೇರಿದರು. ಇವರಿಗೆ ಎಂಟು ವರ್ಷದ ಮಗಳಿದ್ದು ಅವಳು ಮನೆಯ ಹತ್ತಿರದ ಖಾಸಗಿ ಶಾಲೆಯೊಂದರಲ್ಲಿ ಓದುತ್ತಿದ್ದಾಳೆ. "ನಿಮ್ಮ ಶಾಲೆಗೆ ಯಾಕೆ ಸೇರಿಸಿಕೊಳ್ಳಲಿಲ್ಲ" ಎಂದು ನಾವು ಕೇಳಿದೆವು. ಅವರು ನೀಡಿದ ವಿವರಣೆ ನಮ್ಮ ಮನಸ್ಸನ್ನು ತಟ್ಟಿತು. ಅವರು ಶಾಲೆಗೆ ಒಂದೋ ಕಾಲುನಡಿಗೆಯಲ್ಲಿ ಇಲ್ಲವೇ ಸಿಕ್ಕ ವಾಹನದ ಸವಾರರನ್ನು ಕೇಳಿಕೊಂಡು ಹಿಂಬದಿಯ ಸೀಟಿನಲ್ಲಿ ಕುಳಿತು ಬರುತ್ತಿದ್ದರು. "2008ರ ವರೆಗೆ ನನ್ನ ಸಂಬಳ ಕೇವಲ 1,200 ರೂಪಾಯಿಗಳು. ಈಗ ನಾನು ಮೋಟಾರ್ ಸೈಕಲ್ ಕೊಳ್ಳುವಷ್ಟು ಹಣ ಸೇರಿಸಿದ್ದೇನೆ.. ಮುಂದಿನ ವರ್ಷದಿಂದ

ಅವಳು ನನ್ನ ಮೋಟರ್ ಸೈಕಲ್‌ನಲ್ಲಿ ಮೂರನೇ ತರಗತಿಗೆ ಬರುತ್ತಾಳೆ." ಕಮಲ್ ಚಂದ್‌ರದ್ದು ಕೂಡು ಕುಟುಂಬ. ಅವರ ಇಬ್ಬರು ಸೋದರರು 9 ಬೀಘಾ (ರಾಜಸ್ಥಾನದಲ್ಲಿ ಇದು 5 ಎಕರೆಗೆ ಸಮ) ಜಮೀನಿನಲ್ಲಿ ಸಾಗುವಳಿ ಮಾಡಿಕೊಂಡಿದ್ದಾರೆ. ಮೂರನೆಯವರು ತರಕಾರಿ ಅಂಗಡಿ ನಡೆಸುತ್ತಿದ್ದಾರೆ. ಇವರು ತರಕಾರಿ ಮತ್ತು ಹಣ್ಣುಗಳನ್ನು ಬೆಳೆಯುವಲ್ಲಿ ನಿಷ್ಣಾತರೆಂದು ಹೆಸರುವಾಸಿಯಾದ ಮಾಲಿ ಸಮುದಾಯಕ್ಕೆ ಸೇರಿದ ಜನ. ಈ ಪ್ರದೇಶದಲ್ಲಿ ಕೂಡು ಕುಟುಂಬಗಳು ಈಗಲೂ ಚೆನ್ನಾಗಿಯೇ ನಡೆಯುತ್ತಿವೆ. ಕಮಲ್‌ಚಂದರು, "ಸಬ್ ಕಾ ಕಿಚನ್ ಅಲಗ್‌ಹೈ" (ಎಲ್ಲ ಕುಟುಂಬಗಳೂ ತಮ್ಮದೇ ಅಡುಗೆಮನೆ ಮಾಡಿಕೊಂಡಿವೆ) ಎಂದರೆ ಒಟ್ಟಿಗಿದ್ದೂ ಒಂದಷ್ಟು ಖಾಸಗಿತನವನ್ನು ಉಳಿಸಿಕೊಂಡು ಪ್ರತ್ಯೇಕವಾಗಿ ಇರುವುದನ್ನು ವಿವರಿಸುತ್ತಾ, ಅದರಿಂದಲೇ ಕೂಡು ಕುಟುಂಬ ಉಳಿದಿದೆ ಎಂಬ ಸೂಚ್ಯಾರ್ಥವನ್ನು ಹೊಮ್ಮಿಸಿದರು. ಕೌಟುಂಬಿಕ ಸಮಾರಂಭಗಳು ಬಂದಾಗ ಎಲ್ಲ ಸೋದರರೂ ತಮ್ಮ ತಮ್ಮ ಕೊಡುಗೆ ನೀಡುತ್ತಾರೆ. ಆದರೆ ಇನ್ನೊಬ್ಬರು ಎಷ್ಟು ಕೊಟ್ಟರು ಎಂಬುದರ ಬಗ್ಗೆ ಯಾರೂ ತಲೆಕೆಡಿಸಿಕೊಳ್ಳುವುದಿಲ್ಲ.

ಮತ್ತೆ ಕಮಲ್‌ಚಂದ್‌ರ ಶಿಕ್ಷಕ ವೃತ್ತಿಗೆ ಬರೋಣ. ಅವರು ಉಪಯೋಗಿಸಿದ ಸಂಖ್ಯೆಗಳ ಕುರಿತಾದ ಆರೋಹಣ–ಅವರೋಹಣದ ಪರಿಕಲ್ಪನೆ, ಅವರು ಗ್ರಾಫ್ ಮತ್ತು ಕೋಷ್ಟಕಗಳನ್ನು ಬಳಸಿಕೊಂಡ ರೀತಿ, ಅಂಕೆಗಳ ಸ್ಥಾನಿಕ ಮೌಲ್ಯವನ್ನು ವಿವರಿಸಲು ಅಳವಡಿಸಿಕೊಂಡಿರುವ ಸೃಜನಶೀಲ ಶೈಲಿ ಇವುಗಳನ್ನು ನಾವು ಮೆಚ್ಚಿಕೊಂಡೆವು. ಇದರ ಬಗ್ಗೆ ಸ್ವಲ್ಪ ಆಲೋಚಿಸಿ ಕಮಲ್‌ಚಂದ್ ಹೇಳಿದರು. "ಇವತ್ತು ನೀವು ನನ್ನ ತರಗತಿಯಲ್ಲಿ ಕಂಡಿದ್ದು ಹತ್ತು ವರ್ಷದ ಹಿಂದೆ ಸುತರಾಂ ಇರಲಿಲ್ಲ. ನಾನು ಬರೀ "ಮಾತಾಡು, ಗೀಚಾಡು" ಮಾದರಿಯಲ್ಲಿ ಕಲಿಸುತ್ತಿದ್ದೆ. ನಿಜ, ನಾನು ಪ್ರಾಮಾಣಿಕನೂ, ಪರಿಶ್ರಮಿಯೂ ಆಗಿದ್ದಿರಬಹುದು, ಆದರೆ ಅದು ಮಾತ್ರವೇ ಸಾಲದು. 2009ರಲ್ಲಿ ನಾನು ವಿಟಿಎಫ್ ಆರಂಭವಾದಾಗ ಅಲ್ಲಿ ಹೋಗತೊಡಗಿದೆ. ಒಬ್ಬ ಶಿಕ್ಷಕನಾಗಿ ಬೆಳೆಯಲು ನಾನು ಆ ಕಾರ್ಯಾಗಾರಗಳಲ್ಲಿ ಕಲಿತದ್ದೇ ಕಾರಣ. ಒಂದು ಪಾಠವನ್ನು, ತರಗತಿಯನ್ನು, ಬೋಧನಾ ವಿಧಾನವನ್ನು ಸಂಘಟಿಸುವ ಹೊಸ ದೃಷ್ಟಿಕೋನವನ್ನೇ ನಾನು ಸಂಪಾದಿಸಿಕೊಂಡೆ."

ವಿಟಿಎಫ್‌ನ ಕಾರ್ಯಕ್ರಮಗಳಲ್ಲಿ ಮೌಲ್ಯಯುತವಾದದ್ದು ಇದೆ. ಅಲ್ಲಿನ ಒಂದೇ ಒಂದು ಸಭೆಯನ್ನೂ ತಾನು ತಪ್ಪಿಸಿಕೊಂಡಿಲ್ಲ ಎಂದು ಉತ್ಪ್ರೇಕ್ಷೆಯ ಲವಲೇಶವೂ ಇಲ್ಲದೆ ಕಮಲ್‌ಚಂದ್ ಹೇಳುತ್ತಾರೆ. "ಶಿಕ್ಷಕನಾಗಿ ನಾನು ನನ್ನ ಕೌಶಲ್ಯಗಳನ್ನು ಬೆಳೆಸಿಕೊಂಡಿರುವುದಕ್ಕೂ ವಿಟಿಎಫ್‌ನ ತರಬೇತಿಗೂ ನೇರ ಸಂಬಂಧವಿದೆ. 2010ರಲ್ಲಿ ಮಾಲ್‌ಪುರ ಎಂಬಲ್ಲಿ ನಡೆದ ಭಿನ್ನರಾಶಿಗಳ ಕುರಿತಾದ ಕಾರ್ಯಾಗಾರವನ್ನು ನಾನು ಮರೆಯಲಾರೆ. ಅಲ್ಲಿಯವರೆಗೂ ನನಗೆ ಭಿನ್ನರಾಶಿಗಳನ್ನು ಕಲಿಸುವ ಆತ್ಮವಿಶ್ವಾಸ ಇರಲಿಲ್ಲ. ನನಗೆ ಅಗತ್ಯವಿದ್ದ ತಿಳಿವಳಿಕೆ ಸಿಕ್ಕಿದ್ದು ಅಲ್ಲಿಯೇ." ಅವರು ನೆನಪಿಸಿಕೊಂಡು ಹೇಳುತ್ತಾ ಹೋದರು: ಲರ್ನಿಂಗ್ ರಿಸೋರ್ಸ್ ಸೆಂಟರ್‌ನಲ್ಲಿ ಇರುವ ಅಪಾರ ಪುಸ್ತಕಗಳ, ಇತರ ಸಾಮಗ್ರಿಗಳ ಸಂಗ್ರಹ ತಮಗೂ, ಉಳಿದ ಶಿಕ್ಷಕರಿಗೂ ಬಹಳ ನೆರವಾಗಿದೆ.

ಸಂಖ್ಯೆಯ ಸ್ಥಾನವನ್ನು ಸೂಚಿಸಲು ಸ್ವತಃ ನಿರ್ಮಿಸಿಕೊಂಡ ವಸ್ತುಗಳಂತೆಯೇ, ಕಮಲ್‌ಚಂದ್‌ರು ಇತರ ಅನೇಕ ಸಂಪನ್ಮೂಲ ಸಾಮಗ್ರಿಗಳನ್ನು ನಿರ್ಮಿಸಿಕೊಂಡಿದ್ದು, ಅವುಗಳು ಮಕ್ಕಳು ಪರಿಕಲ್ಪನೆಗಳನ್ನು ಗ್ರಹಿಸಲು ಬಹಳ ಸಹಾಯಕವಾಗಿವೆ. ಕಮಲ್‌ಚಂದ್ ತಮ್ಮ ಕೆಲಸಕ್ಕೆ ಸಂಬಂಧಿಸಿದಂತೆ ತುಂಬಾ ಗಂಭೀರ ಸ್ವಭಾವದವರು. "ನನ್ನ ಗಮನವೆಲ್ಲ ನನ್ನ ವೃತ್ತಿಯ ಮೇಲೆಯೇ. ಈ ದಿನ ಶಾಲೆಯಲ್ಲಿ ನಾನು ಏನು ಮಾಡಬೇಕಿದೆ, ಮಕ್ಕಳು ಏನು ಕಲಿಯಬೇಕಿದೆ. ಪ್ರತಿಯೊಂದು ಮಗುವನ್ನು ತೊಡಗಿಸಿಕೊಳ್ಳಲು ನಾನು ಯಾವ ಕೆಲಸ ಕೊಡಬೇಕು – ಇದನ್ನೇ ನಾನು ಯೋಚಿಸುತ್ತಿರುತ್ತೇನೆ. ಈಚೆಗೆ ಬಹುತೇಕ ಪೋಷಕರು ಆಸಕ್ತಿ ವಹಿಸುತ್ತಾರೆ; ಮಗುವಿಗೆ ಮನೆಗೆಲಸ ಕೊಟ್ಟಿದ್ದೇವೋ ಇಲ್ಲವೋ ಎಂಬುದು ಅವರಿಗೆ ಗೊತ್ತಿರುತ್ತದೆ. ಮನೆಯಲ್ಲಿ ದೊಡ್ಡ ಮಕ್ಕಳು ಈಗಾಗಲೇ ಶಿಕ್ಷಿತರಾಗಿದ್ದು, ಸಂಸಾರದಲ್ಲಿ ಸಹ ಶೈಕ್ಷಣಿಕ ವಾತಾವರಣ ಇರುತ್ತದೆ."

ಮಕ್ಕಳು ಎಷ್ಟು ಚೆನ್ನಾಗಿ ಕಲಿಯುತ್ತಿದ್ದಾರೆ ಎಂಬುದನ್ನು ಕಮಲ್‌ಚಂದ್ ಆಸಕ್ತಿ ಹುಟ್ಟುವಂತೆ ವಿವರಿಸುತ್ತಾರೆ. "ಮಕ್ಕಳು ಮೊದಲನೆಯ ತರಗತಿಗೆ ಸೇರಿ ನಾವು ಕಲಿಸಲು ಆರಂಭಿಸಿದಾಗ ಹತ್ತರಲ್ಲಿ ಆರು ಜನ ಪದವೀಧರರಾಗಬಹುದು ಎಂದು ನನಗೆ ಅನಿಸುತ್ತದೆ. ಆದರೆ ಅವರು ಐದನೆಯ ತರಗತಿಗೆ ತಲಪುವ ವೇಳೆಗೆ ಹತ್ತಕ್ಕೆ ಹತ್ತೂ ಜನ ಪದವೀಧರರಾಗುತ್ತಾರೆ ಎನಿಸುತ್ತದೆ" ಎಂದು. ನಾವು ಶಾಲೆಗಳಿಗೆ ನೀಡಿದ ಅನೇಕ ಭೇಟಿಗಳಲ್ಲಿ ಇಂಥ ಒಂದು ವಿಶ್ಲೇಷಣೆಯನ್ನು ಕೇಳಿದ್ದು ಇದೇ ಮೊದಲು. ಕಮಲ್‌ಚಂದ್ ಅವರ ಆತ್ಮವಿಶ್ವಾಸ ಸರಿಯಾದುದು ಎಂಬುದಕ್ಕೆ ಸಮರ್ಥನೆ ಎನ್ನುವಂತೆ 5ನೆಯ ತರಗತಿಯ ಬೋರ್ಡ್ (ಮಂಡಳಿ) ಪರೀಕ್ಷೆಯಲ್ಲಿ, ಅವರ ಏಳು ವಿದ್ಯಾರ್ಥಿಗಳಲ್ಲಿ ಆರು ಜನ ಎ+ ಶ್ರೇಣಿಯನ್ನು ಪಡೆದುಕೊಂಡಿದ್ದಾರೆ. ದಾಮೋದರ್‌ಪುರದ ಪ್ರಾಥಮಿಕ ಶಾಲೆಯು ಇಡಿಯ ತಾಲೂಕಿನಲ್ಲಿಯೇ ಅತ್ಯುತ್ತಮ ಶಾಲೆಗಳಲ್ಲೊಂದು ಎಂದು ಸುತ್ತಮುತ್ತಲಿನ ಗ್ರಾಮಗಳು, ಶೈಕ್ಷಣಿಕ ಇಲಾಖೆಯ ಅಧಿಕಾರಿಗಳು ಗುರುತಿಸುತ್ತಾರೆ. ಇದನ್ನು ತಿಳಿದು ಜಿಲ್ಲಾಧಿಕಾರಿಗಳೂ ಶಾಲೆಗೆ ಭೇಟಿ ನೀಡಿದ್ದಾರೆ.

ಇದೇ ರಸ್ತೆಯಲ್ಲಿ ಒಂದು ಕಿ.ಮೀ. ದೂರದಲ್ಲಿರುವ ದೇವಾಲಯವೊಂದರಲ್ಲಿ ಹಿಂದೆ ಶಾಲೆ ಆರಂಭವಾಯಿತು. ಆಗಿನಿಂದಲೂ ಮುಖ್ಯೋಪಾಧ್ಯಾಯ ರಾಧೇಶ್ಯಾಮ್ ಇದೇ ಶಾಲೆಯಲ್ಲೇ ಇದ್ದಾರೆ. 2006ರಲ್ಲಿ ಇಲ್ಲಿದ್ದದ್ದು ಅವರೊಬ್ಬರೇ ಶಿಕ್ಷಕರು. ಅವರು ಮತ್ತು ಕಮಲ್‌ಚಂದ್ ಐಕ್ಯಭಾವದಿಂದ ಕೆಲಸಮಾಡುತ್ತಾರೆ. ರಾಧೇಶ್ಯಾಮ್ ಮುಕ್ತ ಮನಸ್ಸಿನ, ಆಕರ್ಷಕ ವ್ಯಕ್ತಿತ್ವದ ಉತ್ಸಾಹಿ ಮಾತುಗಾರ. ಸುಮಾರು ಐದುನೂರು ಜನಸಂಖ್ಯೆ ಇರುವ ಡಿಗ್ಗಿ ಪಂಚಾಯಿತಿ ತಮ್ಮ ಶಾಲೆಗೆ ಹುಡುಗರು ಬರಬೇಕಾದ ಪ್ರದೇಶ ಎಂದು ಅವರು ವಿವರಿಸುತ್ತಾರೆ. ಖಾಸಗಿ ಶಾಲೆಗೆ ಇಲ್ಲಿನ ಇಬ್ಬರು ಮಕ್ಕಳು ಮಾತ್ರ ಹೋಗುತ್ತಾರೆ. ಉಳಿದ ಎಲ್ಲ ಮಕ್ಕಳೂ ಇದೇ ದಾಮೋದರ್‌ಪುರದ ಶಾಲೆಗೆ ಬರುತ್ತಾರೆ. ಅಲ್ಲಿನ ಸಮುದಾಯದಲ್ಲಿ ಜಾಟ್, ಭಿಲ್ (ಪರಿಶಿಷ್ಟ ಬುಡಕಟ್ಟು), ಗುಜ್ಜರ್ ಮತ್ತು ಭೋಪ ಜನರಿದ್ದಾರೆ. ಜಾಟ್ ಮತ್ತು ಗುಜ್ಜರ್‌ಗಳು ರೈತರು, ಭಿಲ್ಲರು ಕಾರ್ಮಿಕರು ಮತ್ತು

ಭೋಪರು ಪ್ರಾಣಿ ಸಾಕಣೆ ಮತ್ತು ಮಾರಾಟ ಮಾಡುತ್ತಾರೆ. "ನಾವು ದಿನವೂ ಶಾಲೆಬಿಟ್ಟ ಮೇಲೆ ಪೋಷಕರೊಂದಿಗೆ ಸಾಮಾಜಿಕ ಸಂಪರ್ಕವನ್ನು ಇಟ್ಟುಕೊಳ್ಳುತ್ತೇವೆ. ಕಮಲ್ ಮತ್ತು ನಾನು ನಮ್ಮ ಪಾಠಗಳನ್ನು, ವೇಳಾಪಟ್ಟಿಯನ್ನು ಯೋಜಿಸುವುದರಲ್ಲಿ ಸಂಪೂರ್ಣ ಸ್ವಾಯತ್ತತೆಯನ್ನು ಹೊಂದಿದ್ದೇವೆ. ಬೆಳಗಿನ ಪ್ರಾರ್ಥನಾ ಸಭೆಗೆ ಒಂದು ಘಂಟೆಯಷ್ಟು ಸಮಯ ಮೀಸಲಿಟ್ಟಿರುವುದನ್ನು ಇಂದು ಬೆಳಿಗ್ಗೆ ತಾವೇ ನೋಡಿದ್ದೀರಿ. ಇದಲ್ಲದೆ ಮಧ್ಯಾಹ್ನದ ಊಟಕ್ಕೂ ಒಂದು ತಾಸು ಬಿಡುತ್ತೇವೆ; ವಿಶ್ರಾಂತಿಯನ್ನೂ ಕೊಡುತ್ತೇವೆ" ಎಂದು ರಾಧೇಶ್ಯಾಮ್ ಹೇಳಿದರು.

ನಾವು ಹೊರಟುನಿಂತಾಗ ಅವರು ಜೊತೆಗೇ ಬಂದು ಮೊತ್ತಮೊದಲಿಗೆ ಶಾಲೆ ಆರಂಭವಾದ ದೇವಸ್ಥಾನವನ್ನು ತೋರಿಸಿದರು. ಅಲ್ಲಿ ಶುರುವಾದ ಸಣ್ಣ ಊರಿನ ಈ ಶಾಲೆ ಇಂದು ಈ ಮಟ್ಟಕ್ಕೆ ಬೆಳೆದಿರುವುದರ ಶ್ರೇಯಸ್ಸು ಶ್ರದ್ಧಾವಂತರಾದ ಇವರಿಬ್ಬರು ಶಿಕ್ಷಕರಿಗಲ್ಲದೆ ಇನ್ಯಾರಿಗೆ ಸೇರಬೇಕು? ಅದು ಇವರಿಬ್ಬರ ಜೀವಿತಕಾಲದ ಸಾಧನೆಯೇ ಸರಿ.

# 3

# ಸಮತೆ ಮತ್ತು ಗುಣಮಟ್ಟ: ತರಗತಿಯಲ್ಲಿ ಪ್ರಾರಂಭವಾಗುತ್ತವೆ

ಗ್ರಾಮೀಣ ಶಾಲೆಗಳಲ್ಲಿ ಸಮತೆ ಮತ್ತು ಗುಣಮಟ್ಟ ಎಂಬುದು ಅಮೂರ್ತವಾದ ಆಶೋತ್ತರಗಳು. ಇದನ್ನು ವಾಸ್ತವದಲ್ಲಿ ಆಚರಣೆಗೆ ತರುವುದು ಹೇಗೆ ಎಂಬುದನ್ನು ನಾನು ಅನೇಕ ವರ್ಷಗಳ ಹಿಂದೆ ಕರ್ನಾಟಕದ ಬಳ್ಳಾರಿ ಜಿಲ್ಲೆಯ ಅಲ್ಲೂರು ವಡ್ಡರಹಟ್ಟಿ ಎಂಬ ಹಾಡಿಯಂಥ ಕುಗ್ರಾಮದಲ್ಲಿ ಪ್ರಾಥಮಿಕ ಶಾಲೆಗೆ ಭೇಟಿ ನೀಡಿದಾಗ ಅರ್ಥಮಾಡಿಕೊಂಡೆ. ಹೆಚ್ಚು ಕಮ್ಮಿ ಅಲ್ಲೂರಿನ ಪೂರ್ತಿ ಜನಸಂಖ್ಯೆಯೇ ಪರಿಶಿಷ್ಟ ಬುಡಕಟ್ಟಿಗೆ (ಎಸ್.ಟಿ.) ಸೇರಿದ್ದಾಗಿತ್ತು. ಬಹುತೇಕ ವಯಸ್ಕರು ಅನಕ್ಷರಸ್ಥರಾಗಿದ್ದು ಕೃಷಿ ಕಾರ್ಮಿಕರಾಗಿ ಹೇಗೋ ಬದುಕು ನಡೆಸುವವರು. ಇಂಥ ಪರಿಸ್ಥಿತಿಯಲ್ಲಿ ಅಲ್ಲಿನ ಮುಖ್ಯೋಪಾಧ್ಯಾಯರು ಮತ್ತು ಅವರ ಸಹೋದ್ಯೋಗಿ ಒಂದು ಸರಳವಾದ ಸಮಾನತೆ ಹಾಗೂ ಗುಣಮಟ್ಟದ ಗುರಿಯೊಂದಿಗೆ ಶಾಲೆಯನ್ನು ನಡೆಸಿಕೊಂಡು ಬಂದರು. ಈ ಶಾಲೆಯ ಪ್ರತಿಯೊಂದು ಮಗುವೂ ಶಾಲೆ ಬಿಡುವಾಗ ತಾನು ಪಿಯುಸಿಯನ್ನು ಮುಗಿಸುತ್ತೇನೆ ಎಂಬ ಆತ್ಮವಿಶ್ವಾಸವನ್ನು ದೃಢ ಸಂಕಲ್ಪವನ್ನು ಹೊಂದಿರುತ್ತದೆ; ಮಾತ್ರವಲ್ಲ ಆ ಮಗುವಿಗೆ ಅಂತಹ ಸಾಮರ್ಥ್ಯವೂ ಇರುತ್ತದೆ. ಇದು ಈ ಶಿಕ್ಷಕರಿಬ್ಬರು ಮೇಲು-ಕೀಳು ಎನ್ನದೆ ಮಾಡಿದ ವಿದ್ಯಾದಾನದ ಗುಣಮಟ್ಟಕ್ಕೆ ಸಾಕ್ಷಿಯಾಗಿದೆ. ಹೊರಜಗತ್ತಿನವರಿಗೆ ಪಿಯುಸಿ ಅಷ್ಟು ದೊಡ್ಡ ಗುರಿಯಲ್ಲವಲ್ಲ ಎನಿಸಬಹುದು. ಆದರೆ ಅತ್ಯಂತ ಪ್ರತಿಕೂಲ ಪರಿಸ್ಥಿತಿಯ ಹಿನ್ನೆಲೆಯಿಂದ ಬರುವ ಮಕ್ಕಳಿಗೆ ಪ್ರೌಢಶಾಲೆಯನ್ನು ಮುಗಿಸುವುದೇ ಒಂದು ಹೊಸ ಪ್ರಪಂಚವನ್ನೇ ತೆರೆಯುವ ಮಹಾನ್ ಜಿಗಿತವೇ ಸರಿ.

ಆದ್ದರಿಂದಲೇ ಒಳ್ಳೆಯ ಶಾಲೆಗಳನ್ನು ಕುರಿತಾದ ನನ್ನ ಈ ಅಧ್ಯಯನದಲ್ಲಿ ನಾನು ಪ್ರಜ್ಞಾಪೂರ್ವಕವಾಗಿ ತರಗತಿಗಳಲ್ಲಿ ಅಂತಹ ಕುರುಹುಗಳಿಗಾಗಿ ಹುಡುಕುತ್ತಿದ್ದೆ. ಕಟ್ಟಕಡೆಯ ಮಗುವನ್ನು ಒಳಗೊಳ್ಳಲಾಗಿದೆಯೇ? ಕಟ್ಟ ಕಡೆಯ ಮಗುವಿನ ಮೇಲೆ ಹೂಡುವ ಶ್ರಮವು ಬೇರೆಯವರ ಮೇಲೆ ಹೂಡುವುದಕ್ಕೆ ಸಮನಾದುದೇ? ಇದಕ್ಕೆ ನನಗೆ ಹೌದು ಎನ್ನುವ ಉತ್ತರ ಬೇಕಾಗಿತ್ತು. ನಾನು ಭೇಟಿ ನೀಡಿದ ಬಹುತೇಕ ಶಾಲೆಗಳಲ್ಲಿ ಶಿಕ್ಷಕರು ಮಕ್ಕಳೊಂದಿಗೆ ಸಂಪೂರ್ಣವಾಗಿ ತೊಡಗಿಕೊಂಡಿದ್ದನ್ನು ಕಂಡೆ.

ಅವರು ಪ್ರತಿಯೊಂದು ಮಗುವಿಗೂ ಗಮನ ಕೊಡುತ್ತಿದ್ದರು, ಜಾಣರಿಗೆ ಹೊಸ ಸವಾಲುಗಳನ್ನು ಒಡ್ಡುತ್ತಿದ್ದರು; ಹಿಂದೆ ಬಿದ್ದವರಿಗೆ ಸಹಾಯ ಮಾಡುತ್ತಿದ್ದರು. ಈ ಶಾಲೆಗಳ ಮಕ್ಕಳು ಬೇರೆ ಶಾಲೆಯ ಮಕ್ಕಳಿಗಿಂತ ಹೆಚ್ಚು ಚೆನ್ನಾಗಿ ಕಲಿಯುತ್ತಿದ್ದಾರೆ ಎಂಬುದು ಅನೇಕ ವಿಧಗಳಲ್ಲಿ ವ್ಯಕ್ತವಾಗುತ್ತಿತ್ತು. ತರಗತಿಯಲ್ಲಿ ಅವರು ಬೋಧನೆಗೆ ಗಮನವನ್ನು ಹರಿಸುತ್ತಿದ್ದ ರೀತಿಯೂ ಸ್ಪಂದಿಸುತ್ತಿದ್ದ ಬಗೆಯೂ ಪ್ರಶ್ನೆಗಳನ್ನು ಕೇಳುತ್ತಿದ್ದ ವಿಧಾನವೂ ಅದನ್ನು ಪ್ರಕಟಪಡಿಸುತ್ತಿತ್ತು. ಈ ಮಕ್ಕಳು ಪಾಠದ ಕುರಿತು ಪರಸ್ಪರ ತಮ್ಮೊಳಗೆ ಮಾತನಾಡಿಕೊಳ್ಳುತ್ತಾರೆ. ಪಾಠವನ್ನು ಸ್ವತಂತ್ರವಾಗಿ ಓದಿ, ಬರೆದು ಅರ್ಥಮಾಡಿಕೊಳ್ಳಲು ಶಕ್ತರಾಗಿದ್ದಾರೆ. ಗಣಿತದ ಸಮಸ್ಯೆಗಳನ್ನು ಬಿಡಿಸುತ್ತಾರೆ, ವಿಜ್ಞಾನದ ರಹಸ್ಯಗಳನ್ನು ಬಿಡಿಸಿ ಹೇಳುವ ಪ್ರಯತ್ನಶೀಲತೆಯೂ ಅವರಲ್ಲಿದೆ.

ಈ ಶಾಲೆಗಳ ಮಕ್ಕಳು ಏಕೆ ಬೇರೆ ಶಾಲೆಯ ಮಕ್ಕಳಿಗಿಂತ ಉತ್ತಮರಾಗಿದ್ದಾರೆ? ಶಿಕ್ಷಕರ ಯಾವ ಆದರ್ಶ ಹಾಗೂ ನಂಬಿಕೆಗಳು ಅವರ ತರಗತಿಯ ಕೆಲಸದಲ್ಲಿ ಪ್ರತಿಫಲನಗೊಳ್ಳುತ್ತಿವೆ?

"ಪ್ರತಿಯೊಂದು ಮಗುವೂ ಕಲಿಯಲಿಕ್ಕೆ ಸಮರ್ಥ, ಅದರ ಜವಾಬ್ದಾರಿ ನಮ್ಮದು" ಎಂಬುದೇ ಈ ಶಿಕ್ಷಕರು ತಮ್ಮ ತರಗತಿಗಳಲ್ಲಿ ಆಚರಿಸುವ ನಂಬಿಕೆಯ ತಿರುಳು. ಅವರ ಬೋಧನಾ ವಿಧಾನ ಆ ನಂಬಿಕೆಗೆ ಇಂಬು ಕೊಡುತ್ತದೆ. ಪ್ರತಿಯೊಂದು ಮಗುವಿಗೂ ಕಲಿಕೆ ಎಂಬುದು ರೋಚಕ ಅನುಭವವಾಗಬೇಕೆಂದು ಈ ಶಿಕ್ಷಕರು ಪ್ರಯತ್ನಿಸುತ್ತಾರೆ. ಮಕ್ಕಳು ತರಗತಿಗೆ ತರುವ ಅವರದ್ದೇ ಆದ ತಿಳಿವಳಿಕೆಗೆ ಈ ಶಿಕ್ಷಕರು ಮನ್ನಣೆ ನೀಡುತ್ತಾರೆ. ಆ ತಳಹದಿಯ ಮೇಲೆಯೇ ಮಗುವಿನಲ್ಲಿ ಹೊಸ ಜ್ಞಾನವನ್ನು ಸೃಷ್ಟಿಸಲು ಪ್ರಯತ್ನಿಸುತ್ತಾರೆ. ಪ್ರಶ್ನೆ ಕೇಳುವಂತೆ ಮಕ್ಕಳನ್ನು ಪ್ರೋತ್ಸಾಹಿಸಿದಾಗ, ಅವರು ಕುತೂಹಲಿಗಳಾಗಿದ್ದಾಗ, ಭಯವಿಲ್ಲದೆ ಅಭಿವ್ಯಕ್ತಿಸಲು ಕಲಿತಾಗ ಅವರು ಜ್ಞಾನವನ್ನು ಗಳಿಸುತ್ತಾರೆ ಎಂದು ಈ ಶಿಕ್ಷಕರು ನಂಬುತ್ತಾರೆ. ಪಠ್ಯಪುಸ್ತಕ, ಪಠ್ಯಕ್ರಮ ಮತ್ತು ವೇಳಾಪಟ್ಟಿಯ ಮೇಲೆ ನಾವು ನಿಯಂತ್ರಣ ಹೊಂದಿರಬೇಕೇ ಹೊರತು, ಅವು ನಮ್ಮನ್ನು ನಿಯಂತ್ರಿಸಬಾರದು ಎಂದು ಮಾತನಾಡಿಸಿದ ಪ್ರತಿಯೊಬ್ಬ ಶಿಕ್ಷಕರೂ ನಮಗೆ ಹೇಳಿದರು. ಮಕ್ಕಳು ಹೊರ ಜಗತ್ತಿನೊಂದಿಗೆ, ಪರಿಕಲ್ಪನೆಗಳನ್ನು ಹೊಂದಿಸಿ ಅರ್ಥೈಸಿಕೊಳ್ಳಲು ಈ ಶಿಕ್ಷಕರು ನೆರವಾಗುತ್ತಾರೆ. ಭಾಷೆ, ಗಣಿತ ಮತ್ತು ವಿಜ್ಞಾನಗಳು ಒಂದಕ್ಕೊಂದು ಬೆಸೆದುಕೊಳ್ಳಬೇಕು. ಅವುಗಳ ನಡುವಿನ ಗಡಿರೇಖೆಗಳು ಅನೇಕ ಬಾರಿ ಅಳಿಸಿಹೋಗಬೇಕು, ಭಾಷೆಯ ಉತ್ತಮವಾದ ಗ್ರಹಿಕೆಯು ಗಣಿತದ ಪರಿಕಲ್ಪನೆಗಳನ್ನು, ವೈಜ್ಞಾನಿಕ ಸಂಗತಿಗಳನ್ನು ಅರ್ಥಮಾಡಿಕೊಳ್ಳುವುದಕ್ಕೆ ಸೂಕ್ತ ಬೆಂಬಲ ಒದಗಿಸುತ್ತದೆ ಎಂಬುದನ್ನು ಈ ಶಿಕ್ಷಕರು ಗುರುತಿಸುತ್ತಾರೆ.

ಈ ಶಿಕ್ಷಕರು ವಿಷಯಜ್ಞಾನದ ನ್ಯೂನತೆಗಳನ್ನು ಸರಿಪಡಿಸಿಕೊಳ್ಳಲು ಪರಿಶ್ರಮ ವಹಿಸುತ್ತಾರೆ. ಮಕ್ಕಳ ಕಲಿಕಾ ಸ್ಪಂದನೆಗಳಿಗೆ ಅನುಗುಣವಾಗಿ ಪಾಠದ ಯೋಜನೆಗಳನ್ನು, ಕೆಲಸದ ಪಟ್ಟಿಗಳನ್ನು ಶ್ರಮವಹಿಸಿ ತಯಾರು ಮಾಡಿಕೊಳ್ಳುತ್ತಾರೆ, ಚಟುವಟಿಕೆಗಳನ್ನು ಸೃಷ್ಟಿಸುತ್ತಾರೆ, ಕಲಿಕೆಗೆ ಸಹಾಯವಾಗುವಂಥ ಪ್ರಯೋಗಗಳನ್ನು, ಸಾಮಗ್ರಿಗಳನ್ನು

ರಚಿಸಿಕೊಳ್ಳುತ್ತಾರೆ ಎಂಬುದನ್ನು ಗಮನಿಸಬೇಕು. ಸಿ.ಸಿ.ಇ.ಯನ್ನು ಸೂಕ್ತ ರೀತಿಯಲ್ಲಿ ಜಾರಿಗೆ ತರಲು ಪ್ರಯತ್ನಿಸುವುದು ಅವರ ಬೋಧನಾ ವಿಧಾನದ ಅಖಂಡವಾದ ವಿಶಿಷ್ಟ ಭಾಗವಾಗಿರುತ್ತದೆ. ಅನೇಕರು ನಿಗದಿತ ಮಾದರಿಗಳನ್ನು ಮೀರಿ ತಮ್ಮ ಉಪಯುಕ್ತ ಅಭಿಪ್ರಾಯಗಳನ್ನು ಮಕ್ಕಳ ದಾಖಲೆ ಪುಸ್ತಕಗಳಲ್ಲಿ ನಮೂದಿಸುತ್ತಾರೆ. ಇವುಗಳನ್ನು ಪೋಷಕ–ಶಿಕ್ಷಕರ ಸಭೆಗಳಲ್ಲಿ ಹಂಚಿಕೊಳ್ಳಲಾಗುತ್ತದೆ; ಸಮಸ್ಯೆ ಇರುವ ಮಕ್ಕಳಿಗೆ ಯೋಜಿತ ಬೆಂಬಲ, ಹಾಗೂ ಸಹಾಯ ನೀಡಲು ಸಹ ಇದು ಆಧಾರವಾಗುತ್ತದೆ. ಬೆಂಬಲ ಎಂದರೆ ತರಗತಿಗಳಲ್ಲಿ ವಿಶೇಷ ಗಮನ, ಅಂಥವರಿಗೆ ಪ್ರತ್ಯೇಕ ತರಗತಿಗಳು ಮತ್ತು ಕಾರ್ಯಹಾಳೆಗಳು (ವರ್ಕ್‌ಶೀಟ್ಸ್) ಇರುತ್ತವೆ.

ತರಗತಿಯಲ್ಲಿ ಬೋಧನೆ ಮತ್ತು ಕಲಿಕೆಯ ಬಗ್ಗೆ ನಾವು ಶಿಕ್ಷಕರೊಂದಿಗೆ ಮಾತನಾಡಿದಾಗ, ಅವರು ಮಕ್ಕಳ ಕಲಿಕೆಯ ಸಾಧನೆಗಳ ಬಗ್ಗೆ, ವಿಷಯದ ಕುರಿತು ಅವರು ಗಳಿಸಿರುವ ಪಾಂಡಿತ್ಯದ ಬಗ್ಗೆ ಮಾತನಾಡಬಹುದು. ಇದರಿಂದ ನಮಗೆ ಈ ಶಿಕ್ಷಕರಿಗೆ ಶಿಕ್ಷಣದ ವಿಶಾಲ ಧ್ಯೇಯದ ಬಗ್ಗೆ ಅರಿವಿಲ್ಲ ಎನ್ನಿಸಿಬಿಡಬಹುದು. ಆದರೆ ಇದು ನಿಜವಲ್ಲ. ಅವರು ಅನುಸರಿಸುವ ಪ್ರಕ್ರಿಯೆಗಳನ್ನು ಹಾಗೂ ವಿಧಾನಗಳನ್ನು ಗಮನಿಸಿದಾಗ ಮಕ್ಕಳ ಸರ್ವತೋಮುಖ ಅಭಿವೃದ್ಧಿಯ ಬಗ್ಗೆ ಅವರಲ್ಲಿ ಗಾಢವಾದ ಕಾಳಜಿ ಇದೆ ಎನ್ನಿಸಿತು. ಪ್ರತಿಯೊಂದು ಮಗುವಿನಲ್ಲೂ ಒಂದು ಪ್ರತಿಭೆ ಇರುತ್ತದೆ, ಅದನ್ನು ಅಭಿವ್ಯಕ್ತಿಸಲು, ಅಭಿವೃದ್ಧಿಪಡಿಸಿಕೊಳ್ಳಲು ಅವಕಾಶಗಳನ್ನು ಸೃಷ್ಟಿಸಬೇಕಾದದ್ದು ತಮ್ಮ ಕರ್ತವ್ಯ ಎಂದು ಈ ಶಿಕ್ಷಕರು ಭಾವಿಸುತ್ತಾರೆ. ಉತ್ತಮವಾದ ವಿದ್ಯೆ ಎಂದರೆ ಕೇವಲ ಶೈಕ್ಷಣಿಕ ಸಾಧನೆಯಲ್ಲ. ಅದು ಮಕ್ಕಳಿಗೆ ಸಾಮಾಜಿಕ ಜವಾಬ್ದಾರಿಯನ್ನು ಬೆಳೆಸಿಕೊಳ್ಳಲು, ಬೇರೆಯವರ ಬಗ್ಗೆ ಕರುಣೆಯನ್ನು ಹೊಂದಲು, ಸ್ನೇಹಹಸ್ತ ಚಾಚಲು ಕಲಿಸಬೇಕು ಎಂಬ ಅರಿವು ಇವರಲ್ಲಿ ಇದೆ.

ಅನೇಕ ಶಿಕ್ಷಕರು ತಮ್ಮ ಶಾಲೆಗಳಲ್ಲಿ ಉಪಯೋಗದಲ್ಲಿರುವ, ಉತ್ತಮವಾದ ಗ್ರಂಥಾಲಯಗಳನ್ನು ಹೊಂದಿದ್ದಾರೆ; 'ರೂಮ್ ಟು ರೀಡ್'ನಂಥ ಸಂಘಟನೆಗಳು (ಪಾರಿಭಾಷಿಕ ಪದಗಳ ಪಟ್ಟಿಯನ್ನು ನೋಡಿ) ಒದಗಿಸುವ ತಾಂತ್ರಿಕ ನೈಪುಣ್ಯವನ್ನು, ಪುಸ್ತಕಗಳನ್ನು ಇಷ್ಟಪಟ್ಟು ಉಪಯೋಗಿಸಿಕೊಳ್ಳುತ್ತಾರೆ. ಶಿಕ್ಷಕರು ಮಕ್ಕಳಿಗೆ ಪುಸ್ತಕವನ್ನು ಓದುವುದಕ್ಕೆ, ಮನೆಗೆ ತೆಗೆದುಕೊಂಡು ಹೋಗುವುದಕ್ಕೆ ಉತ್ತೇಜಿಸುವುದು ಮಾತ್ರವಲ್ಲ, ತಾವು ಓದಿದ್ದನ್ನು ಬೆಳಗಿನ ಪ್ರಾರ್ಥನಾ ಸಭೆಯಲ್ಲಿ ಎಲ್ಲರೊಂದಿಗೆ ತಮ್ಮದೇ ಮಾತುಗಳಲ್ಲಿ ಹಂಚಿಕೊಳ್ಳಲು ಸಹ ಪ್ರೋತ್ಸಾಹಿಸುತ್ತಾರೆ. ಇದರಿಂದಾಗಿ ಮಕ್ಕಳ ಅಭಿವ್ಯಕ್ತಿ ಸಾಮರ್ಥ್ಯವೂ ಹೆಚ್ಚುವುದಲ್ಲದೆ, ಅವರ ಜಾಗತಿಕ ದೃಷ್ಟಿಕೋನ ವಿಶಾಲವಾಗುತ್ತದೆ ಎಂಬುದು ಶಿಕ್ಷಕರ ವಿಶ್ವಾಸ. ಅನೇಕ ಶಾಲೆಗಳಲ್ಲಿ ಗ್ರಂಥಾಲಯಕ್ಕಾಗಿ ಪ್ರತ್ಯೇಕ ಕೋಣೆ ಇರುವುದಿಲ್ಲ. ಆಗ ಅದನ್ನು ಯಾವುದಾದರೂ ಒಂದು ತರಗತಿ ಕೊಠಡಿಯಲ್ಲಿ ಇರಿಸಲು ವ್ಯವಸ್ಥೆ ಮಾಡಲಾಗುತ್ತದೆ. ಗ್ರಂಥಾಲಯಗಳಂತೆಯೇ ಬೆಳಗಿನ ಪ್ರಾರ್ಥನಾ ಸಭೆಗಳನ್ನೂ ಸಹ ಮಕ್ಕಳ ಬೆಳವಣಿಗೆಗೆ ಸಹಾಯವಾಗುವಂತೆ ಯೋಜಿಸಲಾಗುತ್ತದೆ. ಸಾರ್ವಜನಿಕವಾಗಿ ಮಕ್ಕಳು ತಮ್ಮನ್ನು ಅಭಿವ್ಯಕ್ತಿಸಿಕೊಳ್ಳುವ ಆತ್ಮವಿಶ್ವಾಸವನ್ನು ಸೃಷ್ಟಿಸುವ

ವೇದಿಕೆ ಅದು. ತಂತಮ್ಮ ಪ್ರತಿಭೆಗಳನ್ನು ವ್ಯಕ್ತಪಡಿಸುವ ಜಾಗವೂ ಅದೇ ಆಗಿದೆ. ಲವಲವಿಕೆಯುಳ್ಳ ಪ್ರಾರ್ಥನಾ ಸಭೆಯಲ್ಲಿ ಕಥೆ ಹೇಳುವುದು, ಮಗ್ಗಿ ಹೇಳುವುದು, ಹೊಸ ಇಂಗ್ಲಿಷ್ ಪದಗಳನ್ನು ಪರಿಚಯಿಸುವುದು, ಸಾಮಾನ್ಯ ಜ್ಞಾನದ ತಿಳಿವಳಿಕೆ ನೀಡುವುದು, ದೇಶದ ಆಗುಹೋಗುಗಳ ಬಗ್ಗೆ ಮಾತನಾಡುವುದು, ಸಂಗೀತ ಎಲ್ಲವೂ ಇರಬಹುದು.

ಬಹುತೇಕ ಪ್ರತಿಯೊಂದು ಶಾಲೆಯಲ್ಲಿ ಶಿಕ್ಷಕರು ಲೇಖನ ಸಾಮಗ್ರಿಗೆ, ಪುಸ್ತಕಗಳಿಗೆ, ವರ್ಕ್‌ಶೀಟ್‌ಗಳಿಗೆ, ಬೋಧನಾ ಸಾಮಗ್ರಿಗೆ, ಕೆಲವೊಮ್ಮೆ ಮಕ್ಕಳ ಸಮವಸ್ತ್ರ ಮತ್ತು ಶಾಲಾ ಸಾಮಗ್ರಿಗಳಿಗೆ ತಮ್ಮ ಸ್ವಂತ ಹಣವನ್ನೇ ಖರ್ಚು ಮಾಡುವುದುಂಟು. ನಾವಿದರ ಬಗ್ಗೆ ಹೆಚ್ಚಿಗೆ ವಿಚಾರಿಸಲು ಯತ್ನಿಸಿದರೆ ಅವರು ಸಂಕೋಚದಿಂದ ಅದೊಂದು ದೊಡ್ಡ ವಿಷಯವೇ ಅಲ್ಲ ಎಂಬಂತೆ ಮಾತನಾಡುತ್ತಾರೆ. ಅನೇಕ ಶಾಲೆಗಳೂ ಶಿಕ್ಷಕರೂ ತಮ್ಮ ಹಳೆಯ ವಿದ್ಯಾರ್ಥಿಗಳ ಬಗ್ಗೆ ಗಮನ ಹರಿಸುತ್ತಾರೆ. ಕೆಲವರು ತಮ್ಮ ವಿದ್ಯಾರ್ಥಿಗಳು ಬೋರ್ಡ್ ಪರೀಕ್ಷೆಗಳಲ್ಲಿ ಯಾವ ಸಾಧನೆ ಮಾಡಿದ್ದಾರೆ ಎಂಬ ದಾಖಲೆಗಳನ್ನೂ ಇಟ್ಟುಕೊಳ್ಳುತ್ತಾರೆ. ಹಳೆಯ ವಿದ್ಯಾರ್ಥಿಗಳು ಯಾವ ರೀತಿಯಲ್ಲಿ ಶಾಲಾ ವಾರ್ಷಿಕೋತ್ಸವದಲ್ಲಿ, ಸ್ವಾತಂತ್ರ್ಯ ದಿನಾಚರಣೆ ಮುಂತಾದ ಸಮಾರಂಭಗಳಲ್ಲಿ ಬಂದು ಭಾಗವಹಿಸುತ್ತಿದ್ದಾರೆ ಎಂಬುದು ವಿದ್ಯಾರ್ಥಿ–ಶಿಕ್ಷಕರ ಸಂಬಂಧ ಎಷ್ಟು ಗಾಢವಾಗಿದೆ ಎಂಬುದನ್ನು ತಿಳಿಯಲು ಒಂದು ಸಮರ್ಪಕವಾದ ಅಳತೆಗೋಲು.

ಮಕ್ಕಳ ಕಲಿಕೆಯ ಮೇಲೆ ಇಂಥ ಬೋಧನಾ ವಿಧಾನ ಮತ್ತು ತರಗತಿ ಪ್ರಕ್ರಿಯೆಗಳ ಪರಿಣಾಮ ಹೇಗಿರುತ್ತದೆ ಎಂಬುದಕ್ಕೆ ಒಂದು ನಿದರ್ಶನವನ್ನು ನೀಡಿ ನನ್ನ ಈ ಪೀಠಿಕೆಯನ್ನು ಮುಗಿಸುತ್ತೇನೆ. ಹಿಂದುಳಿದ ಹಿನ್ನೆಲೆಗಳಿಂದ ಬಂದ ಮಕ್ಕಳಿಗೆ ನವೋದಯ, ಮೊರಾರ್ಜಿ, ಆದರ್ಶ ಅಥವಾ ಕಿತ್ತೂರು ಚೆನ್ನಮ್ಮ ಶಾಲೆಗಳಿಗೆ ಪ್ರವೇಶ ಸಿಗುವುದು ಬದುಕನ್ನೇ ಬದಲಾಯಿಸುವಂಥ ಅವಕಾಶ. ನಾವು ಶಾಲೆಗಳಿಗೆ ಭೇಟಿ ನೀಡಿದಾಗ, ಮಕ್ಕಳ ಕಲಿಕೆ ಹೇಗಿದೆ ಎಂಬ ಬಗ್ಗೆ ಚರ್ಚೆ ಬಂದಾಗಲೆಲ್ಲಾ ಶಿಕ್ಷಕರು ಇಂಥ ಶಾಲೆಗಳ ಪ್ರವೇಶ ಪರೀಕ್ಷೆಯ ಸಿದ್ಧತೆಯ ಬಗ್ಗೆ ಮಾತನಾಡುತ್ತಿದ್ದರು. ಒಂದು ತಾಲೂಕಿನಲ್ಲಿ ಸುಮಾರು ಎರಡು ನೂರು ಸೀಟುಗಳು ಮಾತ್ರ ಇರುತ್ತವೆ. ಹೀಗಾಗಿ ಇದಕ್ಕಾಗಿ ಪ್ರಯತ್ನಿಸುವ ವಿದ್ಯಾರ್ಥಿಗಳಲ್ಲಿ ಒಂದು ಸಣ್ಣ ಭಾಗಕ್ಕೆ ಮಾತ್ರ ಪ್ರವೇಶ ಸಿಗುತ್ತದೆ. ಆದರೆ ಇಂಥ ಸಿದ್ಧತೆಯಿಂದಾಗಿ ಬಹುತೇಕ ಎಲ್ಲ ವಿದ್ಯಾರ್ಥಿಗಳು ಮುಂದಿನ ಉನ್ನತ ತರಗತಿಗಳಿಗೆ ಸೇರಲು ಅತ್ಯುತ್ತಮ ಸ್ಥಿತಿಯಲ್ಲಿರುತ್ತಾರೆ. ಸುರಪುರ ಪ್ರದೇಶದಲ್ಲಿ ನಾವು ಭೇಟಿ ನೀಡಿದ ಮೂವತ್ತು ಶಾಲೆಗಳಲ್ಲಿ ಇನ್ನೂರಾ ಮೂವತ್ತೈದು ಮಕ್ಕಳು ಇಂಥ ಶಾಲೆಗಳಲ್ಲಿ ಪ್ರವೇಶವನ್ನು ಪಡೆದುಕೊಂಡಿದ್ದರು (ನಕ್ಷೆ 3ನ್ನು ನೋಡಿ). ಇದು ಶಿಕ್ಷಕರ ಪ್ರಯತ್ನಕ್ಕೆ ಒಂದು ಅಪೂರ್ವ ಪುರಾವೆಯೂ ಮಕ್ಕಳ ಕಲಿಕೆಯನ್ನು ಅಲ್ಲಗಳೆಯಲಾಗದ ಸಾಕ್ಷಿಯೂ ಆಗಿದೆ.

ಸುರಪುರ ಬ್ಲಾಕ್‌ನಲ್ಲಿ ಲೇಖಕರು ಭೇಟಿ ನೀಡಿ ಸಂಗ್ರಹಿಸಿದ ಅಂಕಿ ಅಂಶಗಳನ್ನು ಆಧರಿಸಿ ನವೋದಯ, ಮೊರಾರ್ಜಿ, ಕಿತ್ತೂರು ರಾಣಿ ಚೆನ್ನಮ್ಮ, ಆದರ್ಶ ವಿದ್ಯಾಲಯ ಪ್ರವೇಶ ಪರೀಕ್ಷೆಯಲ್ಲಿ ಉತ್ತೀರ್ಣರಾದವರ ಗಮನಾರ್ಹ ಅಂಕಿ–ಸಂಖ್ಯೆ.




***ನಕ್ಷೆ 3: ಸಮತೆ ಮತ್ತು ಗುಣಮಟ್ಟಕ್ಕೆ ಒಂದು ಚೇತೋಹಾರಿ ನಿದರ್ಶನ***

# ಓರ್ವ ಅದ್ಭುತ ವಿಜ್ಞಾನ ಶಿಕ್ಷಕರ ವ್ಯಾಪಿಸುವ ಉತ್ಸಾಹ

**ಶೂರವೀರ್ ಸಿಂಗ್ ಖರೋಲ**

ಮಾದರಿ ಹಿರಿಯ ಪ್ರಾಥಮಿಕ ಶಾಲೆ, ಲಾಟ
ಬಟವಾಡಿ ತಾಲ್ಲೂಕು, ಉತ್ತರ ಕಾಶಿ ಜಿಲ್ಲೆ, ಉತ್ತರಾಖಂಡ್

ಬಟವಾಡಿ ತಾಲ್ಲೂಕಿನ ಪ್ರಶಾಂತ ಬೆಟ್ಟಗಳಲ್ಲಿ ಹುದುಗಿರುವ ಲಾಟ ಹಳ್ಳಿಯ ಮಾದರಿ ಹಿರಿಯ ಪ್ರಾಥಮಿಕ ಶಾಲೆಯು ವಿಶೇಷವಾದದ್ದೇ ಸರಿ. ಇಲ್ಲಿ ಐದು, ಆರು ಮತ್ತು ಏಳನೆಯ ತರಗತಿಗಳಲ್ಲಿ ಒಟ್ಟು ಮೂವತ್ತೊಂಬತ್ತು ವಿದ್ಯಾರ್ಥಿಗಳಿದ್ದಾರೆ. ಇವರಲ್ಲಿ ಇಪ್ಪತ್ತಮೂರು ಮಂದಿ ಹುಡುಗಿಯರು ಮತ್ತು ಹದಿನಾರು ಹುಡುಗರು. ಇದಕ್ಕೆ ಮಾದರಿ ಶಾಲೆಯ ಸ್ಥಾನ ದೊರಕಿರುವುದರಿಂದ ಸಾಕಷ್ಟು ಸಂಪನ್ಮೂಲಗಳು ಲಭ್ಯವಾಗಿವೆ; ಸಾಕಷ್ಟು ಸಂಖ್ಯೆಯಲ್ಲಿ ಕೋಣೆಗಳು, ತಕ್ಕಮಟ್ಟಿಗೆ ಉತ್ತಮವಾದ ಮೂಲ ಸೌಕರ್ಯಗಳು, ಬೆಟ್ಟಗುಡ್ಡದಲ್ಲಿ ಅಪರೂಪವೆನಿಸಿದ ವಿಶಾಲವಾದ ಆಟದ ಮೈದಾನ ಮತ್ತು ಐವರು ಶಿಕ್ಷಕರು ಇಲ್ಲಿ ಇದ್ದಾರೆ. ನಿವೃತ್ತಿಗೆ ಎರಡು ವರ್ಷ ಮಾತ್ರ ಉಳಿದಿರುವ ಮುಖ್ಯೋಪಾಧ್ಯಾಯರಾದ ಚಂದ್ರಮೋಹನ್ ಸಿಂಗ್, ಐವತ್ತರ ವಯಸ್ಸಿನ ಇಂಗ್ಲಿಷ್ ಶಿಕ್ಷಕರಾದ ನರೇಂದ್ರ ಸಿಂಗ್ ಚೌಹಾಣ್, ಹಿಂದಿ ಮತ್ತು ಸಂಸ್ಕೃತ ಕಲಿಸುವ ಇನ್ನೊಬ್ಬ ಹಿರಿಯರಾದ ಕುಶಲಪ್ರಸಾದ ಭಟ್, ಸಮಾಜ ವಿಜ್ಞಾನವನ್ನು ಕಲಿಸುವ ಬಲವಂತ ಸಿಂಗ್ ಬಿಷ್ಟ್ ಮತ್ತು ವಿಜ್ಞಾನ ಹಾಗೂ ಗಣಿತವನ್ನು ಕಲಿಸುವ ಶೂರವೀರ್ ಸಿಂಗ್ ಖರೋಲ ಇವರೆಲ್ಲಾ ಇರುವ ಇದು ಒಂದು ಸಮರ್ಥ ಶಿಕ್ಷಕ ತಂಡವಾಗಿದೆ

ಉತ್ತರಕಾಶಿಯ ಶೈಕ್ಷಣಿಕ ವಲಯದಲ್ಲಿ ಖರೋಲರ ಬಗ್ಗೆ ಕೇಳದಿರುವವರು ಯಾರೂ ಇಲ್ಲ. ಇಡಿಯ ಜಿಲ್ಲೆಯಲ್ಲಿಯೇ ಖರೋಲ ಅತ್ಯುತ್ತಮ ಗಣಿತ ಮತ್ತು ವಿಜ್ಞಾನದ ಶಿಕ್ಷಕರಲ್ಲೊಬ್ಬರು ಎಂಬುದನ್ನು ಅರಿತಿರುವ ಇಲ್ಲಿನ ಮುಖ್ಯೋಪಾಧ್ಯಾಯರೂ ಇತರೆ ಶಿಕ್ಷಕರೂ ಇವರನ್ನು ಕೇಂದ್ರವಾಗಿಟ್ಟುಕೊಂಡು ಒಂದು ಐಕಮತ್ಯದ ತಂಡವನ್ನು ರಚಿಸುವ ವಿವೇಕವನ್ನು ಪ್ರದರ್ಶಿಸಿದ್ದಾರೆ. ಖರೋಲ ಅರವತ್ತು ವರ್ಷದ ಸನಿಹದಲ್ಲಿದ್ದಾರೆ, ಆದರೆ 2004ರಲ್ಲಿ, ಶಿಕ್ಷಣ ಕ್ಷೇತ್ರದಲ್ಲಿ ಸಲ್ಲಿಸಿದ ಉತ್ಕೃಷ್ಟ ಸೇವೆಗಾಗಿ 'ರಾಜ್ಯ ಶಿಕ್ಷಕ ಪುರಸ್ಕಾರ' ದೊರೆತಿರುವುದರಿಂದ ಅವರ ಸೇವೆಯನ್ನು ಎರಡು ವರ್ಷ ವಿಸ್ತರಿಸಲಾಗಿದೆ.

ಶೂರ್‌ವೀರ್ ಸಿಂಗ್‌ರದ್ದು ಕುಳ್ಳನೆಯ, ಅಗಲವಾದ ಶರೀರ. ಮೃದು ಭಾಷಿಯಾದ ಇವರಿಗೆ ಇಷ್ಟೊಂದು ವಯಸ್ಸಾಗಿದೆ ಅನ್ನಿಸದು. ವೈಜ್ಞಾನಿಕ ವಿದ್ಯಮಾನಗಳನ್ನು ಕುರಿತಾದ ಅವರ ಉತ್ಸಾಹ, ಸುತ್ತಲಿನ ಜಗತ್ತಿನ ಬಗ್ಗೆ ಅವರಿಗಿರುವ ವಿಸ್ಮಯ ಮತ್ತು ಕುತೂಹಲಗಳನ್ನು 'ಗಂಭೀರವಾದ ವ್ಯಾಪಿಸುವ' ಎಂದೇ ಕರೆಯಬೇಕು. ಅವರಿಗಿರುವ ಸೃಜನಶೀಲ ಆವಿಷ್ಕಾರದ ಶಕ್ತಿ, ತನ್ನ ಸುತ್ತಲಿನ ಯಾವುದೇ ವಸ್ತುವನ್ನು– ರಟ್ಟು ಇರಬಹುದು, ಕ್ಯಾಲೆಂಡರ್ ಇರಬಹುದು, ಆಹ್ವಾನಪತ್ರಿಕೆ ಇರಬಹುದು – ವೈಜ್ಞಾನಿಕ

ಪರಿಕಲ್ಪನೆಗಳನ್ನೋ, ಗಣಿತದ ತತ್ವಗಳನ್ನೋ ವಿವರಿಸಲು ಉಪಯೋಗಿಸುವ ಸಾಮರ್ಥ್ಯ ಮತ್ತು ರೀತಿ – ಇವೆಲ್ಲವೂ ಅವರ ವಿದ್ಯಾರ್ಥಿಗಳನ್ನು ಅಜ್ಞಾತ ಪ್ರಪಂಚದೊಳಗಿನ ಸಾಹಸಯಾತ್ರೆಗೆ ಕರೆದೊಯ್ಯುತ್ತವೆ. ಖರೋಲ ಅವರ ಜೊತೆಗೆ ಇಡಿಯ ದಿನ ಕಳೆದರೂ ಅವರನ್ನು ಬಿಟ್ಟು ಹೊರಡಲು ಮನಸ್ಸೇ ಆಗುವುದಿಲ್ಲ, ಏಕೆಂದರೆ ತೋರಿಸುವುದಕ್ಕೆ, ಹಂಚಿಕೊಳ್ಳುವುದಕ್ಕೆ ಅವರಲ್ಲಿ ಸಂಗತಿಗಳಿಗೆ ಯಾವ ಕೊರತೆಯೂ ಇಲ್ಲ. ಅವರು ವಾಸ್ತವದಲ್ಲಿ ತಮ್ಮ ಮೂರು ತರಗತಿಗಳಿಗೆ ಕಲಿಸುವುದು ಗಣಿತ ಮತ್ತು ವಿಜ್ಞಾನ ಇರಬಹುದು, ಆದರೆ ಮಕ್ಕಳ ಮೇಲೆ, ಶಿಕ್ಷಕರ ಮೇಲೆ ಅವರು ಉಂಟು ಮಾಡುವ ಪರಿಣಾಮ ಹಾಗೂ ಪ್ರಭಾವ ಅಷ್ಟಕ್ಕೇ ಸೀಮಿತವಲ್ಲ. ಹೀಗಾಗಿ ಮಕ್ಕಳಿಗೆ ಈ ಶಾಲೆಯಲ್ಲಿ ಕಳೆಯುವ ಮೂರು ವರ್ಷಗಳು ವಿಶೇಷವಾದ ಕಲಿಕೆಯ ಅನುಭವವನ್ನು ತಂದುಕೊಡುತ್ತವೆ. ಖಾಸಗಿ ಶಾಲೆಯನ್ನು ಆಯ್ಕೆಮಾಡಿಕೊಂಡ ಈ ಊರಿನ ಮಕ್ಕಳಿಗೆ ಅದು ನಿಜಕ್ಕೂ ಒಂದು ನಷ್ಟವೇ ಸರಿ.

ಶಾಲೆಗೆ ಭೇಟಿ ನೀಡಿದವರೊಂದಿಗೆ ಗಣಿತ ಮತ್ತು ವಿಜ್ಞಾನದ ಬಗ್ಗೆ ಮಾತನಾಡುವಾಗ ಖರೋಲ, ಬಂದವರನ್ನು ಶಾಲೆಯಲ್ಲಿ ಸುತ್ತಾಡಿಸುತ್ತಾ ಗಣಿತ ಮತ್ತು ವಿಜ್ಞಾನಕ್ಕೆ ಸಂಬಂಧಿಸಿದ ವಿಷಯಗಳನ್ನು ತೋರಿಸಿ ವಿವರಿಸುತ್ತಾರೆ. ಅಣಬೆಗಳು, ಕಪ್ಪೆಗಳು, ಪಾಚಿ, ಕಲ್ಲುಹೂ, ಹಣ್ಣು, ತರಕಾರಿ, ಹಕ್ಕಿಗಳು – ಪರಿಸರದಲ್ಲಿ ಕಾಣಸಿಗುವ ಇವೆಲ್ಲವನ್ನೂ ತೋರಿಸುತ್ತಲೇ ಅವರು ತಮ್ಮ ಮಕ್ಕಳನ್ನು ಪಠ್ಯಕ್ರಮದ ಯಾತ್ರೆಯಲ್ಲಿ ಕೊಂಡೊಯ್ಯುತ್ತಾರೆ. ಜಿಯೊ ಬೋರ್ಡ್ (ಜ್ಯಾಮಿತಿಯನ್ನು ಕಲಿಸುವ ಪರಿಕರ), ಫ್ರಾಕ್ಷನ್ ವಾಲ್ (ಭಿನ್ನರಾಶಿಯನ್ನು ಕಲಿಸುವ ಪರಿಕರ), ಅವಿಭಾಜ್ಯ ಸಂಖ್ಯಾ ಆಟ ಆಡುವ ಬೋರ್ಡ್ ಇಂಥ ಅನೇಕ ಬೋಧನಾ ಸಂಪನ್ಮೂಲಗಳನ್ನು ಸಂಗ್ರಹಿಸಿರುವ ಕೊಠಡಿಯಲ್ಲಂತೂ ಅವರು ಆಟಿಕೆಗಳ ಅಂಗಡಿಯಲ್ಲಿನ ಮಗುವಿನಂತೆ ಆನಂದಪಡುತ್ತಾರೆ. ಇವರ ತರಗತಿಯಲ್ಲಿ ಮಕ್ಕಳಿಗೆ ಭಿನ್ನರಾಶಿ, ಮಹತ್ತಮ ಸಾಮಾನ್ಯ ಅಪವರ್ತನ, ಲಘುತಮ ಸಾಮಾನ್ಯ ಅಪವರ್ತ್ಯ, ಅವಿಭಾಜ್ಯ ಸಂಖ್ಯೆಗಳು ಇವೆಲ್ಲವೂ ಜೀವಂತ ಕಲಿಕೆಯ ವಿಷಯಗಳಾಗುವುದು ಹೇಗೆ ಎಂಬುದು ಸುಲಭವಾಗಿ ನಮಗೆ ಅರ್ಥವಾಗುತ್ತದೆ. ಈ ಶಾಲೆಯ ಮಕ್ಕಳ ಜೊತೆ ಗಣಿತ ಮತ್ತು ವಿಜ್ಞಾನ ಯಾವ ಅಡ್ಡಗೋಡೆಯೂ ಇಲ್ಲದೆ ಚೆನ್ನಾಗಿ ಬೆಸೆದುಕೊಳ್ಳುತ್ತದೆ. ಒಂದು ಬೆಂಚಿನ ಮೇಲೆ ಇಟ್ಟಿರುವ ಮರದ ದಿಮ್ಮಿಯ ಅಡ್ಡಚ್ಛೇದವನ್ನು ತೋರಿಸಿ ಖರೋಲ ಅವರು ಕೊಂಚ ತುಂಟತನದಿಂದಲೇ 'ಈ ಮರದ ವಯಸ್ಸೆಷ್ಟು ಹೇಳಬಲ್ಲಿರಾ' ಎಂದು ಕೇಳುತ್ತಾರೆ. ನಾವು ಉತ್ತರಿಸಲು ತಡವರಿಸಿದಾಗ ಅವರು ಅಡ್ಡಚ್ಛೇದದಲ್ಲಿ ಒಂದರ ಒಳಗೆ ಇನ್ನೊಂದರಂತಿರುವ ಏಕಕೇಂದ್ರಕ ವೃತ್ತಗಳನ್ನು ಲೆಕ್ಕಹಾಕುವ ಮೂಲಕ ಅದರ ವಯಸ್ಸನ್ನು ತಿಳಿಯುವ ವಿಧಾನವನ್ನು ತೋರಿಸಿಕೊಟ್ಟು ಈಗ ಹೇಳಿ ಎಂದು ಇನ್ನೊಂದು ಅವಕಾಶ ಕೊಡುತ್ತಾರೆ. ಅನಂತರ ನಮ್ಮ ಮುಜುಗರವನ್ನು ಕಡಿಮೆ ಮಾಡಲೋ ಎಂಬಂತೆ, "ನೋಡಿ ಈ ಗಿಡವನ್ನು ಇಲ್ಲಿ ನೆಡಿಸಿದ್ದೂ ನಾನೇ, ಇದನ್ನು ಕತ್ತರಿಸಿದಾಗಲೂ ನಾನೇ ಇದ್ದೆ. ಹಾಗಾಗಿ ಇದರ ವಯಸ್ಸು ನನಗಲ್ಲದೆ ಇನ್ಯಾರಿಗೆ ಗೊತ್ತು ಹೇಳಿ" ಎಂದು ಹಾಸ್ಯ ಚಟಾಕಿ ಹಾರಿಸುತ್ತಾರೆ.

ಅವರ ಮೇಜಿನ ಮೇಲೆ ಒಂದು ಹಕ್ಕಿಯ ಗೂಡಿದೆ. ಶಾಲೆಯ ಆವರಣದೊಳಗೆ ಹಕ್ಕಿಯೊಂದು ಗೂಡುಕಟ್ಟಲು ಆರಂಭಿಸಿದಾಗ ಖರೋಲ, ಹಕ್ಕಿಯು ಮೊಟ್ಟೆಯಿಂದ ಹೊರಬಂದು ಹಾರುವ ಹಂತ ತಲುಪುವವರೆಗೂ ಅದನ್ನು ಅಧ್ಯಯನ ಮಾಡುವ ಯೋಜನೆಯೊಂದರಲ್ಲಿ ವಿದ್ಯಾರ್ಥಿಗಳನ್ನು ತೊಡಗಿಸಿದರು. ಅದನ್ನು ಮುಟ್ಟಬಾರದು, ತೊಂದರೆ ಕೊಡಬಾರದು, ಕೇವಲ ಅಲ್ಲಿ ಏನು ನಡೆಯುವುದೋ ಅದನ್ನು ಗಮನಿಸಿ ಟಿಪ್ಪಣಿ ಮಾಡಿಕೊಳ್ಳಬೇಕು ಎಂಬ ಸಂಶೋಧನೆಯ ನೈತಿಕತೆಯನ್ನು–ವಿಧಾನವನ್ನು ಮಕ್ಕಳಿಗೆ ವಿವರಿಸಿದರು. ಹದಿನಾಲ್ಕು ದಿನಗಳ ಈ ಯೋಜನೆಯಲ್ಲಿ ಮಕ್ಕಳು ಗಮನಿಸಿದ ಒಂದು ಆಸಕ್ತಿದಾಯಕ ವಿಷಯವೆಂದರೆ ತಾಯಿ ಹಕ್ಕಿಯು ಮಗುವಿನ ಹಿಕ್ಕೆಗಳನ್ನು ಕೊಕ್ಕಿನಿಂದ ಎತ್ತಿ ಎತ್ತಿ ತಪ್ಪದೇ ಹೊರಕ್ಕೆ ಹಾಕುತ್ತಿದ್ದದ್ದು. ಒಂದು ನೀರಿನ ಪೈಪಿನಿಂದ ಸೂರ್ಯನ ಬಿಸಿಲಿಗೆ ಎದುರಾಗಿ ನೀರನ್ನು ಚಿಮ್ಮಿಸಿ, ಶುಭ್ರವಾದ ಬೇಸಿಗೆಯ ಹಗಲಲ್ಲಿ ಕಾಮನ ಬಿಲ್ಲು ಸೃಷ್ಟಿಸುತ್ತಾ ಖರೋಲ, ತಮಗೆ ಬೆಳಕಿನ ಕುರಿತಾದ ಪರಿಕಲ್ಪನೆಯನ್ನು ಹೇಗೆ ವಿವರಿಸಿದರು ಎಂಬುದನ್ನು ವಿದ್ಯಾರ್ಥಿಗಳು ನೆನಪಿಸಿಕೊಳ್ಳುತ್ತಾರೆ. ಇತ್ತೀಚೆಗೆ ಶಾಲೆಯಿಂದ ಕಂಪ್ಯೂಟರ್ ಕಳುವಾದಾಗ ಖರೋಲ ತುಂಬಾ ಬೇಸರಗೊಂಡರು. ಆದರೆ ಆ ಬೇಸರ ಸ್ವಲ್ಪ ಕಾಲ ಮಾತ್ರ ಅಷ್ಟೇ. ಒಮ್ಮೆ ಡೆಹ್ರಾಡೂನ್‌ಗೆ ಹೋಗಿದ್ದಾಗ ಅಲ್ಲೊಬ್ಬ ವ್ಯಾಪಾರಿಯು ಗುಲಾಬಿ ಬಣ್ಣದ ಚೌಕಟ್ಟಿನ ಆಯತಾಕಾರದ ಮಸೂರವೊಂದನ್ನು ಮಾರುತ್ತಿದ್ದುದನ್ನು ಕಂಡಾಗ ಅವರಿಗೆ ತಕ್ಷಣ ಒಂದು ಯೋಚನೆ ಹೊಳೆಯಿತು, 150 ರೂಪಾಯಿ ಕೊಟ್ಟು ಅದನ್ನು ಕೂಡಲೇ ಕೊಂಡುಬಿಟ್ಟರು. ಈಗ ಮಕ್ಕಳಿಗೆ ಯಾವುದಾದರೂ ವಿಡಿಯೋ ತೋರಿಸಬೇಕೆನ್ನಿಸಿದರೆ ಅವರು ಈ ಮಸೂರವನ್ನು ತಮ್ಮ ಮೊಬೈಲ್‌ನ ಪರದೆಯ ಮುಂದೆ ಇರಿಸಿ ಎಲ್ಲರಿಗೂ ನೋಡಲು ಅವಕಾಶ ಮಾಡಿಕೊಡುತ್ತಾರೆ.

ಉತ್ತರಕಾಶಿಯಲ್ಲಿ ಫೌಂಡೇಶನ್‌ನ ವತಿಯಿಂದ ನಡೆಸಿದ ಗಣಿತ ಮತ್ತು ವಿಜ್ಞಾನ ಕಾರ್ಯಾಗಾರಗಳು ಶಿಕ್ಷಕರ ಸಾಮರ್ಥ್ಯವನ್ನು ಬೆಳೆಸುವ ಅತ್ಯುತ್ತಮ ಪ್ರಯತ್ನಗಳಾಗಿವೆ ಎಂದು ಖರೋಲ ಹೇಳುತ್ತಾರೆ. ಖರೋಲಾ ಅವರು ತಾವು ತಯಾರಿಸಿರುವ ಅವಿಭಾಜ್ಯ ಸಂಖ್ಯೆಗಳ ಚಾರ್ಟ್‌ಅನ್ನು ತೋರಿಸಿ ಕಾರ್ಯಾಗಾರವನ್ನು ನಡೆಸಿಕೊಟ್ಟವರ ಮಾರ್ಗದರ್ಶನದಿಂದ ತಾವು ಇನ್ನಷ್ಟು ಆಸಕ್ತಿದಾಯಕ ಅಂಶಗಳನ್ನು ಹೆಚ್ಚುವರಿಯಾಗಿ ಸೇರಿಸಲು ಹೇಗೆ ಸಾಧ್ಯವಾಯಿತು ಎಂದು ವಿವರಿಸಿದರು. ಉತ್ತರಕಾಶಿಯಲ್ಲಿ ನಡೆಯುವ ವಿಟಿಎಫ್ ಸಭೆಗಳಲ್ಲಿ ಪ್ರತಿನಿಧಿಯಾಗಿಯೂ ಕೆಲವೊಮ್ಮೆ ತಮ್ಮ ಶ್ರೀಮಂತ ಅನುಭವವನ್ನು ಹಂಚಿಕೊಳ್ಳುವ ಸಂಪನ್ಮೂಲ ವ್ಯಕ್ತಿಯಾಗಿಯೂ ಖರೋಲಾ ತಪ್ಪದೆ ಭಾಗವಹಿಸುತ್ತಾರೆ. ಈ ಜಿಲ್ಲೆಯಲ್ಲಿ ಶಿಕ್ಷಕರ ಶೈಕ್ಷಣಿಕ ಹಾಗೂ ಬೋಧನಾ ವಿಧಾನದ ಮಟ್ಟವನ್ನು ಹೆಚ್ಚಿಸಲು ನಡೆಯುತ್ತಿರುವ ಪ್ರಯತ್ನಗಳಿಗೆ ಖರೋಲ ಅವರು ಬಲುದೊಡ್ಡ ಶಕ್ತಿಯನ್ನು ನೀಡಿದ್ದಾರೆ–ವಿಜ್ಞಾನ ಮತ್ತು ಗಣಿತ ಶಿಕ್ಷಕರ ಮೇಲೆ ಖರೋಲ ಬೀರಿರುವ ಅಯಸ್ಕಾಂತದಂತಹ ಆಕರ್ಷಣೆಯೇ ಅಂತಹುದು. ತಾವು ಸದಸ್ಯರಾಗಿರುವ ತಾಲ್ಲೂಕು ಶಿಕ್ಷಕರ ಗುಂಪು, ಉತ್ತರಕಾಶಿಯ ವಿಜ್ಞಾನ ಶಿಕ್ಷಕರ ಗುಂಪು, ಉತ್ತರಕಾಶಿಯ ಗಣಿತದ

ಶಿಕ್ಷಕರ ಗುಂಪು ಹೀಗೆ ಅನೇಕ ವಾಟ್ಸಪ್ ಗುಂಪುಗಳಲ್ಲಿ ಅನೇಕ ಮಾಹಿತಿಗಳನ್ನು, ಒಳನೋಟಗಳನ್ನು, ಸಮಕಾಲೀನ ಸುದ್ದಿಯೇ ಮುಂತಾದ ಹೊಳಹುಗಳನ್ನು ಹಂಚಿಕೊಳ್ಳುತ್ತ ಬಹಳ ಉಪಯುಕ್ತ ಕೆಲಸ ಮಾಡುತ್ತಿದ್ದಾರೆ. ಒಂದೇ ವರ್ಷದಲ್ಲಿ ಗಣಿತದ ಗುಂಪಿಗೆ ನೂರು ಶಿಕ್ಷಕರು, ವಿಜ್ಞಾನದ ಗುಂಪಿಗೆ ಅರವತ್ತು ಶಿಕ್ಷಕರು ಸೇರಿದ್ದಾರೆ. ಯಾರೂ ಹೊರಗಡೆ ಕಾಲಿಡಲು ಸಹ ತಯಾರಿರದಿದ್ದ ಮಳೆ ಸುರಿಯುತ್ತಿದ್ದ ಒಂದು ಭಾನುವಾರದ ಸಂಜೆ, ವಿಜ್ಞಾನದ ತತ್ವಶಾಸ್ತ್ರದ ಕುರಿತು ಪ್ರಸಿದ್ಧ ಭಾಷಣಕಾರ ದೇವೇಂದ್ರ ಮೇವಾಡಿಯವರ ಉಪನ್ಯಾಸ ಕೇಳಲು ಉತ್ತರಕಾಶಿಯ ನೂರಾ ಇಪ್ಪತ್ತೈದು ಮಂದಿ ಶಿಕ್ಷಕರು ಬಂದು ಸೇರಿದ್ದನ್ನು ಗಮನಿಸಿದರೆ ಅವರಿಗೆ ಕಲಿಯುವಿಕೆಯ ಬಗ್ಗೆ ಇರುವ ಬದ್ಧತೆಯನ್ನು ತಿಳಿಯಬಹುದು.

ಮಕ್ಕಳಲ್ಲಿ ವೈಜ್ಞಾನಿಕ ಮನೋಭಾವವನ್ನು ಬೆಳೆಸಲು ತಮ್ಮನ್ನೇ ಅರ್ಪಿಸಿಕೊಂಡಿರುವ ಭಾರತದ ಸರ್ಕಾರಿ ಶಾಲೆಗಳ ಶಿಕ್ಷಕರ ಪ್ರತೀಕವಾಗಿರುವ ಖರೋಲ ಸ್ವತಃ ಒಬ್ಬ ವಿಜ್ಞಾನದ ಪದವೀಧರರಲ್ಲ ಎಂಬುದು ವಿಚಿತ್ರವೆನಿಸಬಹುದು. ಇಂಟರ್‌ಮೀಡಿಯಟ್ ಮಾಡಿ ಬಿ.ಟಿ.ಸಿ. ಕೋರ್ಸ್‌ಅನ್ನು ಮುಗಿಸಿ ಮೂವತ್ತಾರು ವರ್ಷಗಳ ಹಿಂದೆ ತಮ್ಮ ಶಿಕ್ಷಕ ವೃತ್ತಿಯ ಯಾತ್ರೆಯನ್ನು ಆರಂಭಿಸಿದರು. ಆಗ ಅವರ ಸಂಬಳ 440 ರೂಪಾಯಿಗಳು. ತೆಹ್ರಿ ಬಳಿ ಇರುವ ಕೋರಡಿ ಎಂಬ ದೂರದ ಹಳ್ಳಿಯ ಶಾಲೆಯೊಂದಕ್ಕೆ ಅವರನ್ನು ಮೊದಲು ನೇಮಿಸಲಾಯಿತು. ಅಲ್ಲಿ ನಲವತ್ತು ವಿದ್ಯಾರ್ಥಿಗಳಿದ್ದರು. ಅಲ್ಲಿ ಮಕ್ಕಳೊಡನೆ ಕೆಲಸ ಮಾಡುತ್ತಿದ್ದಂತೆ ಜನರು ಅವರ ಮನೆ ಬಾಗಿಲಲ್ಲಿ ತರಕಾರಿ, ಹಣ್ಣು, ಹಾಲು ತಂದು ಇಟ್ಟು ಹೋಗತೊಡಗಿದರು. ಅದು ಅಲ್ಲಿನ ಜನಸಮುದಾಯವು ಅವರಿಗೆ ತನ್ನ ಕೃತಜ್ಞತೆಯನ್ನು ಅರ್ಪಿಸಿದ ರೀತಿ. ಒಂದು ವರ್ಷದ ನಂತರ ಎಂದರೆ 1982ರ ಮಾರ್ಚ್‌ನಲ್ಲಿ ಅವರು ಹಿರಿಯ ಪ್ರಾಥಮಿಕ ಶಾಲೆಯ ಶಿಕ್ಷಕನೆಂದು ಅಧಿಕೃತವಾಗಿ ಶಿಕ್ಷಣ ಇಲಾಖೆಯ ನೌಕರರಾದರು. ಅವರನ್ನು ಉತ್ತರಕಾಶಿ ಜಿಲ್ಲೆಯ ಬಟವಾಡಿ ಬ್ಲಾಕ್‌ನ ಸಂಗ್ಲಾಯ್‌ಗೆ ಕಳಿಸಲಾಯಿತು. ಕಾಲ ಉರುಳಿದಂತೆ ಅಂಚೆತೆರಪಿನ ಶಿಕ್ಷಣದ ಮೂಲಕ ಬಿ.ಎ. ಮತ್ತು ಎಂ.ಎ. ಪದವಿಗಳನ್ನು ಹಿಂದಿ ಹಾಗೂ ಸಮಾಜಶಾಸ್ತ್ರ ವಿಷಯಗಳಲ್ಲಿ ಪಡೆದುಕೊಂಡರು. ಸಂಗ್ಲಾಯ್ ಶಾಲೆಯ ನಂತರ ಅವರು ಎಂಟು ವರ್ಷಗಳ ಕಾಲ ದಿಲ್‌ಸೌರ್‌ನಲ್ಲಿ ಕೆಲಸ ಮಾಡಿದರು. 2001ರಲ್ಲಿ ಖರೋಲ, ಲಾಟದಲ್ಲಿರುವ ಹಿರಿಯ ಪ್ರಾಥಮಿಕ ಶಾಲೆಗೆ ವರ್ಗಾವಣೆಗೊಂಡರು. ಅತ್ಯಂತ ಯಶಸ್ವಿಯೂ, ಸಾರ್ಥಕವೂ ಆದ, ಶಿಕ್ಷಕನಾಗಿ ತಮ್ಮ ಪ್ರಯಾಣದ ಕೊನೇ ಭಾಗದಲ್ಲಿರುವ ಖರೋಲ ವಿಜ್ಞಾನ ಹಾಗೂ ಗಣಿತದ ಕುರಿತಾದ ಆಸಕ್ತಿಯನ್ನು ಸ್ವಲ್ಪವೂ ಕಳೆದುಕೊಂಡಿಲ್ಲ.

ಎಲ್ಲ ಅಸಾಧಾರಣ ಶಿಕ್ಷಕರಂತೆಯೇ ಖರೋಲರೂ ಚಿಂತನಶೀಲ ಕೆಲಸಗಾರ. ಪ್ರತಿನಿತ್ಯ ಅವರು ಬರೆಯುವ ಡೈರಿಯೇ ಅದಕ್ಕೆ ಸಾಕ್ಷಿ. ಅದು ಅವರಿಗೆ ಹಳೆಯ ಅಭ್ಯಾಸ. ಅದನ್ನು ಅವರು ಯಾವ ಹಿಂಜರಿಕೆಯೂ ಇಲ್ಲದೆ ಎಲ್ಲರಿಗೂ ತೋರಿಸುತ್ತಾರೆ. ಅವರ ಡೈರಿಯ ಮೊದಲ ಸಂಪುಟದಲ್ಲಿಯೇ ಅಂದವಾಗಿ ಬರೆದು ತುಂಬಿಸಿದ ಇನ್ನೂರೈವತ್ತು ಪುಟಗಳಿವೆ. ಇದರಲ್ಲಿ ಪ್ರತಿನಿತ್ಯ ಶಾಲೆಯಲ್ಲಿ ಪಾಠ ಹೇಳುವಾಗ

ಅನುಭವಿಸಿದ ಸಂತೋಷ, ಹೋರಾಟಗಳು ದಾಖಲಾಗಿವೆ. ಸರಳವಾದ ಹಿಂದಿ ಭಾಷೆಯಲ್ಲಿ ಅನೇಕ ಸಂಗತಿಗಳನ್ನು ಹೇಳುತ್ತಾ ಹೋಗುತ್ತಾರೆ: ತಮ್ಮ ವಿದ್ಯಾರ್ಥಿಗಳು ಹಕ್ಕಿಪಕ್ಕಿಗಳ ಜೀವನ ಚಕ್ರದ ಬಗ್ಗೆ ಸ್ವಂತ ಅನುಭವದಿಂದ ಕಲಿತದ್ದು, ಮಕ್ಕಳಿಗೆ ಪಾಚಿ ಮತ್ತು ಫರ್ನ್ ಜಾತಿಯ ಸಸ್ಯಗಳ ಕುರಿತು ಸರಿಯಾಗಿ ವಿವರಿಸಲಾಗದಿದ್ದಾಗ ಉಂಟಾದ ಹತಾಶೆ, ಶಾಲೆಗೆ ಬಂದ ಹೊಸ ಮಗುವೊಂದರ ನೋವು ಮತ್ತು ಕಷ್ಟ ಇವೆಲ್ಲವನ್ನೂ ಅಲ್ಲಿ ದಾಖಲು ಮಾಡಿದ್ದಾರೆ. ಖರೋಲ ಅವರ ದಿನಚರಿಯು ತರುಣ ಶಿಕ್ಷಕರಿಗೆ ಅಮೂಲ್ಯ ಶೈಕ್ಷಣಿಕ ಸಂಪನ್ಮೂಲವಾದೀತು. ಕೆಲವೊಮ್ಮೆ ಅವರು ದಿನಚರಿಯ ತುಣುಕುಗಳನ್ನು ವಾಟ್ಸ್‌ಆ್ಯಪ್ ಗುಂಪುಗಳಲ್ಲಿಯೂ ಪ್ರಕಟಿಸುವುದುಂಟು.

ಅನೇಕ ದಶಕಗಳಿಂದಲೂ ರಾಷ್ಟ್ರೀಯ ಶಿಕ್ಷಣ ನೀತಿ ಮತ್ತು ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟುಗಳು ವಿದ್ಯಾರ್ಥಿಗಳಲ್ಲಿ ವೈಜ್ಞಾನಿಕ ಮನೋಭಾವವನ್ನು ಬೆಳೆಸಲು ಒತ್ತು ನೀಡಿವೆ. ಆದರೆ ಬಿಗಿ ಹಿಡಿತದ ಕಂಠಪಾಠ ವಿಧಾನ ಮತ್ತು ಕೇವಲ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಆಧಾರದಲ್ಲಿ ಉನ್ನತ ಶಿಕ್ಷಣ ಸಂಸ್ಥೆಗಳ ಪ್ರವೇಶ ನಿರ್ಧಾರ ಮುಂತಾದ ಕಾರಣಗಳಿಂದ ಮೇಲೆ ಹೇಳಿದ ಆಶಯವು ದಾಖಲೆಗಳಲ್ಲೇ ಉಳಿದುಬಿಟ್ಟಿದೆ. ಇದರಿಂದ ಬಿಡಿಸಿಕೊಂಡು ಪ್ರಶ್ನಿಸುವ ಮನೋಭಾವವನ್ನು ಉತ್ತೇಜಿಸುವ ತರಗತಿಯ ವಾತಾವರಣವನ್ನು ಸೃಷ್ಟಿಸುವುದು ಪ್ರಗತಿಶೀಲ ಎನಿಸಿಕೊಂಡು, ಎಲ್ಲ ಸೌಲಭ್ಯಗಳನ್ನೂ ಹೊಂದಿರುವ ನಗರಪ್ರದೇಶದ ಶಾಲೆಗಳಲ್ಲೂ ಕಷ್ಟವೇ. ಆದ್ದರಿಂದಲೇ ದೂರದ ಗ್ರಾಮೀಣ ಶಾಲೆಗಳಲ್ಲಿ ಇದನ್ನೆಲ್ಲಾ ಸಾಧಿಸುವ ಶೂರವೀರ್ ಸಿಂಗ್ ಖರೋಲರಂಥವರು ನಿಜಕ್ಕೂ ದಾರಿದೀಪವಾಗುತ್ತಾರೆ. ಅವರಿಗೆ ಔಪಚಾರಿಕ ವಿಜ್ಞಾನದ ಪದವಿಗಳು ಇರದಿರಬಹುದು, ಅತ್ಯಾಧುನಿಕ ಉಪಕರಣಗಳು ಅಲಭ್ಯವಾಗಿರಬಹುದು, ಆದರೆ ಅವರು ಅನುಸರಿಸುವ ವಿಧಾನಗಳು ಮಾತ್ರ ನಿರ್ವಿವಾದವಾಗಿಯೂ ಮಕ್ಕಳ ಮನಸ್ಸಿನಲ್ಲಿ ವೈಜ್ಞಾನಿಕ ಶೋಧನೆಯ ಕಿಡಿಗಳನ್ನು ಹೊತ್ತಿಸುತ್ತವೆ. ಸದಾ ಕಾರ್ಯತತ್ಪರರಾಗಿರುವ ಖರೋಲರನ್ನು ನೋಡುವುದು ಎಂದರೆ ಭರವಸೆಯನ್ನೇ ನೋಡಿದಂತೆ.

---

## ಜವಾಬ್ದಾರಿ, ಸಹಕಾರ, ಸಹಾಯ ಮನೋಭಾವವಿಲ್ಲದ ಓದುವ, ಬರೆಯುವ, ಎಣಿಸುವ, ಗುಣಿಸುವ ಸಾಮರ್ಥ್ಯದಿಂದ ಉಪಯೋಗವಿಲ್ಲ

**ರಾಮೇಶ್ವರಿ ಲಿಂಗ್‌ವಾಲ್**

ಪ್ರಾಥಮಿಕ ಶಾಲೆ, ಗ್ಯಾನ್‌ಸು, ಬಟವಾಡಿ ಬ್ಲಾಕ್, ಉತ್ತರಕಾಶಿ ಜಿಲ್ಲೆ, ಉತ್ತರಾಖಂಡ್

---

ಉತ್ತರಕಾಶಿ ಪಟ್ಟಣದಿಂದ ಗ್ಯಾನ್‌ಸು ಕೆಲವೇ ಕಿಲೋಮೀಟರ್ ದೂರದಲ್ಲಿದೆ. ಮುಖ್ಯರಸ್ತೆಯಿಂದ ಬರೇ ನೂರು ಮೀಟರ್‌ಗಳ ದೂರದಲ್ಲಿ ಗ್ಯಾನ್‌ಸುವಿನ ಪ್ರಾಥಮಿಕ ಶಾಲೆಯಿದೆ. 1960ರಲ್ಲಿ ಸ್ಥಾಪಿತವಾದ ಈ ಹಳೆಯ ಶಾಲೆಯು ಆ ದಿನಗಳಲ್ಲಂತೂ

ಇಡಿಯ ಗ್ಯಾನ್‌ಸು ಪ್ರಾಂತ್ಯಕ್ಕೆ ಏಕೈಕ ಶಾಲೆಯಾಗಿತ್ತು. ಅಂದಿನಿಂದಲೂ ಒಳ್ಳೆಯ ಶಾಲೆಯಾಗಿದ್ದ ಇದು, ಈಗ ಇಲ್ಲಿ ಅನೇಕ ಖಾಸಗಿ ಶಾಲೆಗಳು ಆರಂಭವಾಗಿದ್ದರೂ ತನ್ನ ಸ್ಥಾನವನ್ನು ಉಳಿಸಿಕೊಂಡಿದೆ. ಗ್ಯಾನ್‌ಸು ಶಾಲೆಯಲ್ಲಿ ನಲವತ್ತೊಂದು ಹುಡುಗರೂ ಇಪ್ಪತ್ತೊಂಬತ್ತು ಹುಡುಗಿಯರೂ ದಾಖಲಾಗಿದ್ದಾರೆ. 2015ರವರೆಗೂ ಇಲ್ಲಿ ಇಬ್ಬರು ಶಿಕ್ಷಕರು ಮಾತ್ರ ಇದ್ದರು, ಈಗ ನಾಲ್ವರಿದ್ದಾರೆ. ಇರುವ ಕಡಿಮೆ ಸ್ಥಳಾವಕಾಶದಲ್ಲೇ ನಾಲ್ಕು ತರಗತಿ ಕೊಠಡಿಗಳಿವೆ, ಒಂದು ಗ್ರಂಥಾಲಯ, ಒಂದು ಶೌಚಾಲಯ ಮತ್ತು ಪ್ರಾರ್ಥನಾ ಸಭೆಗಾಗಿ ಒಂದು ಅಂಗಳವೂ ಇವೆ. ಈ ಶಾಲೆ ಗಳಿಸಿರುವ ಒಳ್ಳೆಯ ಹೆಸರಿಗೆ ಮುಖ್ಯ ಕಾರಣರು ಮುಖ್ಯೋಪಾಧ್ಯಾಯಿನಿ ರಾಮೇಶ್ವರಿ ಲಿಂಗ್‌ವಾಲ್ ಮತ್ತು ಅವರ ಸಹೋದ್ಯೋಗಿಯಾದ ದರ್ಬೇಶ್ವರಿ ಬಹುಗುಣ.

ವ್ಯಕ್ತಿಯಾಗಿಯೂ ಶಿಕ್ಷಕಿಯಾಗಿಯೂ ರಾಮೇಶ್ವರಿಯವರ ಬದುಕು ಬಹಳ ಆಸಕ್ತಿದಾಯಕವಾದದ್ದು. 2001ರಲ್ಲಿ ಅವರು ಶಿಕ್ಷಣ ಇಲಾಖೆಗೆ ಸೇರಿದಾಗ ಅವರ ಆರಂಭದ ದಿನಗಳು ತ್ರಾಸದಾಯಕವೇ ಆಗಿದ್ದವು. ಅವರನ್ನು ಚಿನ್ಯಾಲಿ ತಾಲ್ಲೂಕಿನ ಬನೌತ್ ಎಂಬ ಹಳ್ಳಿಗೆ ಹಾಕಲಾಯಿತು. ಕೆಲಸಕ್ಕೆ ಸೇರಿದ ಮೊದಲನೆಯ ದಿನ ಅವರು ಎಂಟು ಘಂಟೆಗೆ ಮನೆ ಬಿಟ್ಟು ಹೊರಟರೂ ಶಾಲೆ ತಲಪುವುದು ಮಧ್ಯಾಹ್ನ ಒಂದು ಘಂಟೆಯಾಗಿ ಶಾಲೆಗೆ ಬೀಗ ಜಡಿದಿದ್ದನ್ನು ನೋಡಿ ವಾಪಸು ಹೋಗಬೇಕಾಯಿತು. ಕಾರಣ ಇನ್ನೊಬ್ಬ ಶಿಕ್ಷಕರು ಅಂದು ಬಂದೇ ಇರಲಿಲ್ಲ. ಮನೆಗೆ ಬರುವ ವೇಳೆಗೆ ಅವರ ಕಣ್ಣುಗಳಿಂದ ನೀರು ಸುರಿಯುತ್ತಿತ್ತು. ರಾತ್ರಿ ಹನ್ನೊಂದು ಘಂಟೆಗೆ ಯಾರೋ ಬಾಗಿಲು ತಟ್ಟಿದರು. ನೋಡಿದರೆ ಹೊರಗಡೆ ಆ ಇನ್ನೊಬ್ಬರು ಶಿಕ್ಷಕರು ನಿಂತಿದ್ದರು. ಮಾರನೆಯ ದಿನ 'ನಾನೇ ನಿಮ್ಮನ್ನು ಕರೆದುಕೊಂಡು ಹೋಗುತ್ತೇನೆ' ಎಂದು ಹೇಳಲು ಆಕೆ ಬಂದಿದ್ದರು. ಮಾರನೆಯ ದಿನ ಬೆಳಿಗ್ಗೆ ಹನ್ನೊಂದು ಘಂಟೆಗೆ ರಾಮೇಶ್ವರಿ ಶಾಲೆ ಸೇರಿದರು. ಹೀಗಾಗಿ ಆ ಶಾಲೆಯಲ್ಲಿ ಕೆಲಸ ಮಾಡಬೇಕೆಂದರೆ ಆ ಹಳ್ಳಿಯಲ್ಲೇ ಮನೆ ಮಾಡಬೇಕು ಎಂಬುದು ಅವರಿಗೆ ಸ್ಪಷ್ಟವಾಯಿತು. ಶೌಚಾಲಯವೇ ಮುಂತಾದ ಕೆಲವೊಂದು ಪ್ರಾಥಮಿಕ ಸೌಲಭ್ಯಗಳಿದ್ದ ಮನೆಯೊಂದರಲ್ಲಿ ಅವರು ಮತ್ತು ಅವರ ಎರಡು ತಿಂಗಳಿನ ಹೆಣ್ಣು ಮಗು ಆಶ್ರಯ ಪಡೆದರು. ಅಲ್ಲಿಂದಾಚೆಗೆ ಆಕೆ ತನ್ನ ಗಂಡನನ್ನು, ಕೂಡು ಕುಟುಂಬವನ್ನು ಊರಲ್ಲೇ ಬಿಟ್ಟು ಐದು ವರ್ಷಗಳ ಕಾಲ ಅಲ್ಲಿಯೇ ಉಳಿದರು. ಎರಡು ತಿಂಗಳಿಗೆ ಒಮ್ಮೆ ಗಂಡನ ಮನೆಗೆ ಹೋಗಿ ಬರುವುದು ಬಿಟ್ಟರೆ ಅವರು ಬನೌತ್‌ನ ಶಾಲೆಗೆ ತಮ್ಮನ್ನು ಪೂರ್ತಿಯಾಗಿ ಸಮರ್ಪಿಸಿಕೊಂಡರು. ಅವರು ಶಾಲೆಗೇ ಆಗಲಿ, ಬೇರೆಲ್ಲಿಗೇ ಹೋಗಲಿ ಪುಟ್ಟಮಗುವನ್ನು ಜೊತೆಯಲ್ಲಿ ಎತ್ತಿಕೊಂಡು ಹೋಗುವುದನ್ನು ಬಿಟ್ಟರೆ ಬೇರೆ ದಾರಿ ಇರಲಿಲ್ಲ. ಕೆಲವೇ ದಿನಗಳಲ್ಲಿ ರಾಮೇಶ್ವರಿ ಹಳ್ಳಿಯ ಜನರ ಮನಸ್ಸನ್ನು ಗೆದ್ದುಕೊಂಡಿದ್ದರು.

2006ರಲ್ಲಿ ರಾಮೇಶ್ವರಿ ವರ್ಗಾವಣೆಗೆ ಅರ್ಜಿ ಹಾಕಿದರು. ಅವರನ್ನು ದುಂಡಾ ಬ್ಲಾಕಿನ ಹಿಟಾನು ಎಂಬ ಹಳ್ಳಿಗೆ ವರ್ಗ ಮಾಡಿದರು. ಅವರು ಗಂಡನ ಕೂಡು ಕುಟುಂಬದೊಂದಿಗೆ ಒಂದಾಗುವುದು ಸಾಧ್ಯವಾಯಿತು. ಬನೌತ್ ಮತ್ತು ಹಿಟಾನುನಲ್ಲಿ

ಆಕೆ ಮಾಡಿದ ಮಹತ್ವದ ಸೇವೆಯನ್ನು ಶಿಕ್ಷಣ ಇಲಾಖೆಯು 2010ರಲ್ಲಿ ಗುರುತಿಸಿ, ಗ್ಯಾನ್‌ಸು ಶಾಲೆಗೆ ವರ್ಗಮಾಡಿತು. ಅವರ ಮನೆ ಗ್ಯಾನ್‌ಸು ಶಾಲೆಯ ಸಮೀಪವೇ ಇದ್ದುದರಿಂದ ಈಗ ಬದುಕು ಹೆಚ್ಚು ಸುವ್ಯವಸ್ಥಿತವಾಗಿದೆ. ಆಕೆಯ ಗಂಡ ಉತ್ತರಕಾಶಿಯಲ್ಲಿ ಅಂಗಡಿ ನಡೆಸುತ್ತಿದ್ದು ತಕ್ಕಮಟ್ಟಿಗೆ ಸುಭದ್ರವಾಗಿದೆ. ಮನೆಯಲ್ಲೂ ಅವರಿಗೆ ಜವಾಬ್ದಾರಿ ಕಡಿಮೆ ಏನಿಲ್ಲ. ತಮ್ಮ ಅತ್ತಿಗೆಯನ್ನು ಮತ್ತು ತೊಂಬತ್ತು ವಯಸ್ಸಿನ ಮಾವನವರನ್ನು ನೋಡಿಕೊಳ್ಳಬೇಕು. ಅವರ ಕೆಲಸಗಳನ್ನೂ ಮುಗಿಸಿಕೊಟ್ಟ ಮೇಲೆಯೇ ಆಕೆ ರಾತ್ರಿ ಮಲಗಲು ಸಾಧ್ಯ. ಬೆಳಿಗ್ಗೆ ಬೇಗ ಎದ್ದು ಅಡಿಗೆ ಮಾಡಿಟ್ಟು ಏಳು ಘಂಟೆಗೆಲ್ಲಾ ಶಾಲೆಗೆ ಹೊರಡಬೇಕು.

ರಾಮೇಶ್ವರಿಯವರ ಜೊತೆ ಸ್ವಲ್ಪ ಹೊತ್ತು ಮಾತನಾಡಿದರೂ ಆಕೆಯ ಉಲ್ಲಾಸ, ಆಶಾವಾದ ಮನಸ್ಸಿಗೆ ತಟ್ಟುತ್ತದೆ. ಹೀಗೆ ತನ್ನ ಆನಂದ ಮತ್ತು ಲವಲವಿಕೆಯನ್ನು ಮಕ್ಕಳಿಗೆ ಹಂಚಬಲ್ಲ ಉಪಾಧ್ಯಾಯಿನಿಯನ್ನು ಪಡೆದಿರುವುದು ಆ ಶಾಲೆಯ ವಿದ್ಯಾರ್ಥಿಗಳ ಅದೃಷ್ಟವೇ ಸರಿ. ರಾಮೇಶ್ವರಿಯವರು ಗ್ಯಾನ್‌ಸು ಪ್ರೈಮರಿ ಶಾಲೆಯೊಂದಿಗೆ ಸಾಧಿಸಿರುವ ಅವಿನಾಭಾವ ಸಂಬಂಧವು ಅನನ್ಯವಾದದ್ದು. ಅದು ಅನೇಕ ರೀತಿಗಳಲ್ಲಿ ವ್ಯಕ್ತವಾಗುತ್ತದೆ. ತಮ್ಮ ಸತತವಾದ ಕಲಿಕೆ ಹಾಗೂ ಅಭಿವೃದ್ಧಿಯಿಂದ ಇದು ಸಾಧ್ಯವಾಯಿತು ಎನ್ನುತ್ತಾರೆ ರಾಮೇಶ್ವರಿ, ರಾಜ್ಯ ಸರ್ಕಾರವು ರಿಷಿವ್ಯಾಲಿ ಎಜುಕೇಶನ್ ರಿಸರ್ಚ್ ಸೆಂಟರ್‌ನಲ್ಲಿ ಎಂಜಿಎಂಎಲ್ ಬೋಧನಾ ವಿಧಾನಗಳನ್ನು ಕಲಿಯಲು ಶಿಕ್ಷಕರನ್ನು ಕಳಿಸಿದಾಗ ಆ ಗುಂಪಿನಲ್ಲಿ ರಾಮೇಶ್ವರಿಯೂ ಇದ್ದರು. ಇಂಥ ಅವಕಾಶ ದೊರೆತ ಎಲ್ಲ ಶಿಕ್ಷಕರೂ ತಮ್ಮ ತಿಳಿವಳಿಕೆಯನ್ನು ತರಗತಿಗಳಲ್ಲಿ ಅಳವಡಿಸಿಕೊಳ್ಳುತ್ತಾರೆ ಎಂದೇನೂ ಇಲ್ಲ. ಆದರೆ ರಾಮೇಶ್ವರಿ ಅವರು ತಾವು ಕಲಿತದ್ದನ್ನೆಲ್ಲಾ ತರಗತಿಯಲ್ಲಿ ಉಪಯೋಗಿಸಿಕೊಳ್ಳಲು ಸಾಧ್ಯವಾಗುವಂತಹ ಮಾರ್ಗಗಳನ್ನು ಹುಡುಕಿಕೊಂಡರು. ಇದಲ್ಲದೆ ಇದರ ಬಗ್ಗೆ ತಮ್ಮ ಸಹೋದ್ಯೋಗಿ ದರ್ಬೇಶ್ವರಿಯವರಲ್ಲೂ ಆಸಕ್ತಿ ಹುಟ್ಟಿಸಿ ಅವರಿಗೂ ಈ ಬೋಧನಾ ಕ್ರಮವನ್ನು ಕಲಿಸಿದರು. ಹೀಗಾಗಿ ಗ್ಯಾನ್‌ಸುವಿನ ಪ್ರಾಥಮಿಕ ಶಾಲೆಯು ರಿಷಿವ್ಯಾಲಿ ಮಾದರಿಯ ಎಂಜಿಎಂಎಲ್ ಬೋಧನಾ ಕ್ರಮವನ್ನು ಜಾರಿಗೆ ತಂದಿತು.

ಉತ್ತರಕಾಶಿಯ ಫೌಂಡೇಶನ್ ತಂಡವು ಜಿಲ್ಲಾ ಸಂಸ್ಥೆಯನ್ನು ಸ್ಥಾಪಿಸಿ ಕಾರ್ಯಾಗಾರಗಳನ್ನು, ಕ್ಲಸ್ಟರ್ ಮಟ್ಟದ ಶಿಕ್ಷಕರ ಸಭೆಗಳನ್ನು ನಡೆಸುತ್ತಾ ಶಿಕ್ಷಣದ ವಿಶಾಲ ಧ್ಯೇಯದ ಬಗ್ಗೆ, ಬೋಧನಾ ಕ್ರಮದ ನಿರ್ದಿಷ್ಟ ಅಂಶಗಳ ಬಗ್ಗೆ, ವಿಷಯ ಜ್ಞಾನ ಮತ್ತು ಒಂದು ಒಳ್ಳೆಯ ಶಾಲೆ ಹೇಗೆ ಇರಬೇಕು ಎಂಬ ಬಗ್ಗೆ ಚರ್ಚಿಸಲು ಆರಂಭಿಸಿದಾಗಿನಿಂದ ರಾಮೇಶ್ವರಿ ತಮ್ಮ ಓರಗೆಯವರೊಂದಿಗೆ ಮತ್ತು ಸುಗಮಕಾರರೊಂದಿಗೆ (ಫೆಸಿಲಿಟೇಟರ್ಸ್) ನಿಕಟವಾಗಿ ಅಭಿಪ್ರಾಯ ವಿನಿಮಯ ಮಾಡಿಕೊಳ್ಳಲು ಆರಂಭಿಸಿದರು. ಇದರಿಂದಾಗಿ ತಮ್ಮ ತಿಳಿವಳಿಕೆ ಮತ್ತು ದೃಷ್ಟಿಕೋನ ಗಣನೀಯವಾಗಿ ಉತ್ತಮಗೊಂಡಿತು ಎಂದು ಅವರೇ ಹೇಳುತ್ತಾರೆ. ತಾವು ಒಳ್ಳೆಯ ಶಿಕ್ಷಕರಾಗಬೇಕೆಂಬ ಗಾಢವಾದ ಆಕಾಂಕ್ಷೆಯನ್ನು ಅವರು ಯಾವತ್ತೂ ಹೊಂದಿದ್ದರು; ಈ ಅವಕಾಶಗಳು ಅವರು ಇನ್ನಷ್ಟು ಪರಿಪೂರ್ಣ ಶಿಕ್ಷಕರಾಗಲು ಶಕ್ತಿಯನ್ನು ಒದಗಿಸಿದವು.

ರಾಮೇಶ್ವರಿಯವರು ದಿನಚರಿ ಬರೆಯುತ್ತಾರೆ. ಇದು ಶಿಕ್ಷಕರೊಬ್ಬರು ಮಾಡಬೇಕಾದ ಅತ್ಯಂತ ಮುಖ್ಯವಾದ ಕೆಲಸ ಎಂದು ತಮಗೆ ಮನವರಿಕೆಯಾಗಿದೆ ಎನ್ನುತ್ತಾರೆ ಆಕೆ. "ಒಂದು ಇಡಿಯ ದಿನದ ಕೆಲಸದಲ್ಲಿ ಏನೆಲ್ಲಾ ಚೆನ್ನಾಗಿ ನಡೆಯಿತು, ಯಾವುದು ಸರಿಯಾಗಿ ನಡೆಯಲಿಲ್ಲ ಎಂಬುದನ್ನು ಮತ್ತೆಮತ್ತೆ ಮೆಲುಕು ಹಾಕುವುದು ಶಿಕ್ಷಕರೊಬ್ಬರ ಬದುಕಿನಲ್ಲಿ ಬಹಳ ಮುಖ್ಯವಾದದ್ದು. ಏಕೆಂದರೆ ಪ್ರತಿಯೊಂದು ದಿನವೂ ಒಂದು ನೂತನ ಅನುಭವವೇ. ಮಕ್ಕಳು ಹೇಗೆ ಕಲಿಯುತ್ತಾರೆ, ಅವರಿಗೆ ಹೇಗೆ ಕಲಿಸಬೇಕು ಎಂಬುದೆಲ್ಲಾ ಸಂಕೀರ್ಣವಾದ ವಿಷಯಗಳಾಗಿದ್ದು, ನಾವು ಅವುಗಳ ಬಗ್ಗೆ ನಿರಂತರವಾಗಿ ಚಿಂತಿಸಬೇಕಾಗುತ್ತದೆ ಎನ್ನುತ್ತಾರೆ".

ಮಕ್ಕಳು ಎಷ್ಟು ಚೆನ್ನಾಗಿ ಓದುತ್ತಾರೆ, ಬರೆಯುತ್ತಾರೆ, ಲೆಕ್ಕ ಮಾಡುತ್ತಾರೆ ಎಂಬುದರ ಮೇಲೆ ಅವರ ಕಲಿಕೆಯ ಸಾಧನೆ ಅವಲಂಬಿತವಾಗಿರುತ್ತದೆ ಎನ್ನುವ ರಾಮೇಶ್ವರಿ, ಇದು ಸಾಧ್ಯವಾಗುವುದು ಅವರು ಕಂಠಪಾಠದ ವಿಧಾನವನ್ನು ಮೀರಿ ತಮ್ಮನ್ನೇ ಅಭಿವ್ಯಕ್ತಿಗೊಳಿಸಿಕೊಳ್ಳಲು ಸಾಧ್ಯವಾದಾಗ ಎಂದು ನಂಬುತ್ತಾರೆ. ಇದನ್ನು ಅವರು ಕಾರ್ಯರೂಪಕ್ಕಿಳಿಸುವ ವಿಧಾನವನ್ನು ಅರ್ಥಮಾಡಿಕೊಳ್ಳಬೇಕೆಂದರೆ ಅವರ ತರಗತಿಯನ್ನೇ ನೋಡಬೇಕು. ಆ ದಿನ ಅವರ ತರಗತಿಯಲ್ಲಿ ಒಂದು ಔಪಚಾರಿಕ ಪತ್ರವನ್ನು ಬರೆಯುವ ರೀತಿಯನ್ನು ಹೇಳಿಕೊಡುತ್ತಿದ್ದರು. ಬಹುತೇಕ ಶಾಲೆಗಳಲ್ಲಿ ಇದು ಕಂಠಪಾಠ ವಿಧಾನದ ಫಲವಾಗಿ ಯಾಂತ್ರಿಕವಾಗಿ ನಡೆದು ಹೋಗುತ್ತದೆ. ಮಕ್ಕಳು, ಹುಷಾರಿಲ್ಲ ಅಥವಾ ಮದುವೆಗೆ ಹೋಗಬೇಕು ಮುಂತಾದ ಕಾರಣಗಳನ್ನು ನೆನಪಿನಲ್ಲಿ ಇಟ್ಟುಕೊಂಡು ಮುಖ್ಯೋಪಾಧ್ಯಾಯರಿಗೆ ಒಂದು ಸಿದ್ಧ ಮಾದರಿಯ ರಜೆ ಅರ್ಜಿಯನ್ನು ಬರೆದಿಡುತ್ತಾರೆ. ಆದರೆ ರಾಮೇಶ್ವರಿಯವರು ತರಗತಿಯಲ್ಲಿ ಅಂಥದೊಂದು ಪತ್ರಕ್ಕೆ ಸಂಬಂಧಿಸಿದ ಪರಿಕಲ್ಪನೆ ಏನು ಎಂಬುದನ್ನು ಮೊದಲು ಚರ್ಚಿಸಲಾರಂಭಿಸಿದರು. ಅನಂತರ ಔಪಚಾರಿಕ ಪತ್ರದ ಅಗತ್ಯ ಏನು, ಎಂಥ ಸಂದರ್ಭದಲ್ಲಿ ಅದು ಬರುತ್ತದೆ, ಅಂತಹ ಪತ್ರಗಳನ್ನು ಯಾರನ್ನು ಉದ್ದೇಶಿಸಿ ಬರೆಯಬೇಕು ಮುಂತಾದವನ್ನೆಲ್ಲ ಚರ್ಚಿಸಿದರು. ಇಂಥ ಒಂದು ವಿಚಾರ ವಿನಿಮಯದ ಅನಂತರ ಸುಮಾರು ಆರೆಂಟು ಸೂಕ್ತ ಸನ್ನಿವೇಶಗಳನ್ನು ಪಟ್ಟಿಮಾಡಿ ಮಕ್ಕಳು ತಾವೇ ಪತ್ರಗಳನ್ನು ಬರೆಯತೊಡಗಿದರು. ಒಂದು ಮಗು ತನ್ನ ಕುಟುಂಬವು ಎದುರಿಸುತ್ತಿರುವ ನೀರಿನ ಸಮಸ್ಯೆಯ ಬಗ್ಗೆ ಜಿಲ್ಲಾಧಿಕಾರಿಗೆ ಬರೆದರೆ, ಇನ್ನೊಂದು ಮಗು ತಾವು ಎದುರಿಸುತ್ತಿರುವ ವಿದ್ಯುತ್ ಕಡಿತದ ಬಗ್ಗೆ ಬರೆಯಿತು. ಮತ್ತೊಂದು ಮಗು ತನ್ನ ಪ್ರಬಂಧವನ್ನು ಶಾಲೆಯ 'ಗೋಡೆಪತ್ರಿಕೆ'ಯಲ್ಲಿ ಪ್ರಕಟಿಸಬೇಕೆಂದು ಕೋರಿ ಶಿಕ್ಷಕರಿಗೆ ಪತ್ರ ಬರೆಯಿತು.

ಅಪರಾಹ್ನ ಸಸ್ಯಾಹಾರಿಗಳು ಹಾಗೂ ಮಾಂಸಾಹಾರಿಗಳ ವಿಷಯದ ಬಗ್ಗೆ ಕಲಿಯುವುದಿತ್ತು. ಈ ವಿಷಯದಲ್ಲಿ ಮಕ್ಕಳು, ತಮಗೆ ಗೊತ್ತಿರುವ ಮಾಹಿತಿಯನ್ನೇ ಚರ್ಚೆಗೆ ತರಬೇಕೆಂದು ರಾಮೇಶ್ವರಿಯವರು ನಿರ್ಧರಿಸಿದರು. ಅಲ್ಲಿದ್ದ ಹದಿನಾಲ್ಕು ಮಕ್ಕಳು ಮೊದಲು ತಮ್ಮಲ್ಲಿಯೇ ವಿಷಯವನ್ನು ಚರ್ಚಿಸಿಕೊಂಡು ಅನಂತರ ಅದನ್ನು ತಮ್ಮೆದುರು ಮಂಡಿಸಬೇಕು ಎಂದು ಹೇಳಿದರು. ಯಾವುದೇ ವಿಷಯದ ಬಗ್ಗೆ ದೊಡ್ಡ

ಗುಂಪಿನಲ್ಲಿ ಚರ್ಚಿಸುವಾಗ ಎಲ್ಲರಿಗೂ ಅವಕಾಶ ಸಿಗುವಂತೆ ವಿಚಾರ ವಿನಿಮಯವನ್ನು ನಡೆಸಿಕೊಂಡು ಹೋಗಲು ಪ್ರೌಢವಯಸ್ಕರೇ ಕಷ್ಟಪಡುತ್ತಾರೆ. ಆದರೆ ಆ ಮಕ್ಕಳು ಈ ವಿಷಯದಲ್ಲಿ ಬಹಳಷ್ಟು ಪ್ರಬುದ್ಧತೆಯನ್ನೂ ಸೂಕ್ಷ್ಮಗ್ರಾಹಿ ಶಕ್ತಿಯನ್ನೂ ಪ್ರದರ್ಶಿಸಿದರು. ಮಕ್ಕಳು ಮೊದಲಿಗೆ ಮೂರು ಗುಂಪುಗಳನ್ನು ರಚಿಸಿಕೊಂಡರು. ಎರಡು ಗುಂಪುಗಳಲ್ಲಿ ತಲಾ ಐದು ಹಾಗೂ ಮೂರನೇ ಗುಂಪಿನಲ್ಲಿ ನಾಲ್ಕು ಮಕ್ಕಳನ್ನು ವಿಂಗಡಿಸಿದರು. ಆರಂಭಿಕವಾಗಿ ಚರ್ಚಿಸಿ ತೀರ್ಮಾನಕ್ಕೆ ಬಂದು ಆಮೇಲೆ ಎಲ್ಲರೂ ಸೇರಿ ತಮ್ಮ ಅಭಿಪ್ರಾಯಗಳನ್ನು ಸಾರಾಂಶವಾಗಿ ರೂಪಿಸಲು ಪ್ರಯತ್ನಿಸಿದರು. ಹತ್ತು ಗಜ ದೂರದಲ್ಲಿ ಕುಳಿತು ಇದನ್ನೆಲ್ಲಾ ಗಮನಿಸುತ್ತಿದ್ದ ರಾಮೇಶ್ವರಿಗೆ ತುಂಬಾ ಸಂತೋಷವಾಯಿತು. ಆ ದಿನ ಸಂಜೆ ಅವರು ತಮ್ಮ ದಿನಚರಿಯಲ್ಲಿ, ಮಕ್ಕಳು ಹೇಗೆ ತಮ್ಮನ್ನೇ ಸಂಘಟಿಸಿಕೊಂಡು, ಒಂದು ಕಠಿಣವಾದ ಕೆಲಸದಲ್ಲಿ ಯಶಸ್ವಿಯಾದರು ಎಂಬುದನ್ನು ಮೆಲುಕು ಹಾಕಿ ದಾಖಲಿಸಿದರು.

ಈ ಉದಾಹರಣೆಗಳು ಶಾಲೆಯ ಇನ್ನೂ ಎರಡು ಉತ್ತಮ ಗುಣಗಳತ್ತ ಬೆಟ್ಟು ಮಾಡುತ್ತವೆ : ಅದೇ ಅಪಾರ ಚೈತನ್ಯ ಮತ್ತು ಪ್ರತಿಯೊಂದು ಮಗುವಿಗೂ ಅವಕಾಶ. ಪ್ರತಿಯೊಂದು ಮಗುವನ್ನೂ ಕ್ರಿಯಾಶೀಲವಾಗಿ ತೊಡಗಿಸಿಕೊಳ್ಳಬೇಕು, ಮಕ್ಕಳು ಒಬ್ಬರಿಗೆ ಇನ್ನೊಬ್ಬರು ನೆರವು ನೀಡುತ್ತ ಸಹಕರಿಸಬೇಕು – ಈ ನಿಟ್ಟಿನಲ್ಲಿ ರಾಮೇಶ್ವರಿ ಅವರು ಸತತವಾಗಿ ಪ್ರಯತ್ನ ನಡೆಸಿದ್ದಾರೆ. ಹೀಗೆ ಅವರು ಮಕ್ಕಳ ಸಾಮಾಜಿಕ ಅಭಿವೃದ್ಧಿಯನ್ನೂ ಪಠ್ಯಕ್ರಮದ ಬೋಧನೆಯನ್ನೂ ಜೊತೆಜೊತೆಯಾಗಿ ನಿರ್ವಹಿಸುತ್ತಿದ್ದಾರೆ. "ಓದುವ, ಬರೆಯುವ, ಎಣಿಸುವ, ಗುಣಿಸುವ ಸಾಮರ್ಥ್ಯ ಮಾತ್ರ ಇದ್ದು ಒಳ್ಳೆಯತನ, ಜವಾಬ್ದಾರಿಯ ಪ್ರಜ್ಞೆ, ಸಹಕಾರ ಮನೋಭಾವ, ಬೇರೆಯವರಿಗೆ ಸಹಾಯ ಮಾಡುವ ಗುಣ ಇಲ್ಲದಿದ್ದರೆ ನನ್ನ ಪ್ರಕಾರ ಅದಕ್ಕೆ ಏನೂ ಬೆಲೆ ಇಲ್ಲ" ಅನ್ನುತ್ತಾರೆ ರಾಮೇಶ್ವರಿ. ಮಕ್ಕಳು ಶಾಲೆಯನ್ನು ವ್ಯವಸ್ಥಿತವಾಗಿ ಇರಿಸಲು ಸಕ್ರಿಯವಾಗಿ ಭಾಗವಹಿಸುತ್ತಾರೆ. ಪಠ್ಯೇತರ ಚಟುವಟಿಕೆಗಳಾದ ಕಲೆ, ಸಂಗೀತಗಳಲ್ಲಿ ಆಸಕ್ತಿ ಮೂಡಿಸುವುದು ಹಾಗೂ ವ್ಯವಹಾರ ಜ್ಞಾನವನ್ನು ಬೆಳೆಸುವುದು ಈ ಶಾಲೆಗೆ ಪಠ್ಯಕ್ರಮದಷ್ಟೇ ಮಹತ್ವದ್ದಾಗಿದ್ದು ವೇಳಾಪಟ್ಟಿಯಲ್ಲಿ ಅವುಗಳನ್ನೂ ಅಳವಡಿಸಲಾಗಿದೆ. ಇಲ್ಲಿನ ಮಕ್ಕಳು ಕ್ಲಸ್ಟರ್ ಮಟ್ಟದಲ್ಲಿ ಮತ್ತು ತಾಲ್ಲೂಕು ಮಟ್ಟದಲ್ಲಿ ಅನೇಕ ಸ್ಪರ್ಧೆಗಳನ್ನು ಗೆದ್ದಿದ್ದಾರೆ. ಅವರ ಚಟುವಟಿಕೆಗಳನ್ನು ಹಾಗೂ ಸಾಧನೆಗಳನ್ನು ಶಾಲೆಯು ಸಮುದಾಯದೊಂದಿಗೆ ಹಂಚಿಕೊಳ್ಳುತ್ತದೆ. ರಾಮೇಶ್ವರಿಯವರು ಸಮುದಾಯದ ಸದಸ್ಯರನ್ನು ತಿಂಗಳಿಗೊಮ್ಮೆ, ಅಗತ್ಯ ಬಿದ್ದರೆ ಹದಿನೈದು ದಿನಗಳಿಗೊಮ್ಮೆ ಭೇಟಿಯಾಗುತ್ತಾರೆ. ಪೋಷಕ–ಶಿಕ್ಷಕರ ಸಭೆಗಳಲ್ಲಿ ಪೋಷಕರು ಅಧಿಕ ಸಂಖ್ಯೆಯಲ್ಲಿ ಭಾಗವಹಿಸುತ್ತಿದ್ದಾರೆ. ಎಸ್‌ಎಂಸಿ ಯಾವ ಸಮಸ್ಯೆಯೂ ಇಲ್ಲದೆ ಕೆಲಸ ಮಾಡುತ್ತಿದ್ದು "ಅತ್ಯುತ್ತಮ ಎಸ್‌ಎಂಸಿ" ಪ್ರಶಸ್ತಿಯನ್ನು ಪಡೆದುಕೊಂಡಿರುವುದು, ಶಾಲೆಯ ಕುರಿತು ಸಮುದಾಯವು ಹೊಂದಿರುವ ವಿಶ್ವಾಸಕ್ಕೆ ಸಾಕ್ಷಿಯಾಗಿದೆ.

ನಾನು ಭೇಟಿ ನೀಡಿದ ಅನೇಕ ಸರ್ಕಾರಿ ಶಾಲೆಗಳಲ್ಲಿ ಶಿಕ್ಷಕರು ಕಲಿಕೆಯಲ್ಲಿ ಹಿಂದುಳಿದ ಹಾಗೂ ಆರ್ಥಿಕವಾಗಿ ಬಡವರಾದ ವಿದ್ಯಾರ್ಥಿಗಳಿಗೆ ನೆರವು ನೀಡುತ್ತಿರುವುದನ್ನು ಕಂಡಿದ್ದೇನೆ. ಗ್ಯಾನ್‌ಸು ಪ್ರಾಥಮಿಕ ಶಾಲೆಯಲ್ಲಿ ಸರ್ಕಾರವು ಎಲ್ಲಾ

ಹುಡುಗಿಯರಿಗೆ ಹಾಗೂ ಪರಿಶಿಷ್ಟ ಸಮುದಾಯದ ಮಕ್ಕಳಿಗೆ ಸಮವಸ್ತ್ರಗಳನ್ನು ಒದಗಿಸುತ್ತದೆ. ಆದರೆ ಕೆಲವು ಹುಡುಗರು ಸಮವಸ್ತ್ರ ಕೊಳ್ಳಲಾಗದಿದ್ದಾಗ ರಾಮೇಶ್ವರಿ ಮತ್ತು ದರ್ಬೇಶ್ವರಿ ಅವರಿಗೆ ಹಣಕಾಸಿನ ಸಹಾಯ ಮಾಡಿದ್ದಾರೆ. ಹೆಚ್ಚಿನ ಶೈಕ್ಷಣಿಕ ಬೆಂಬಲ ಅಗತ್ಯವಿರುವ ಮಕ್ಕಳನ್ನೂ ಅವರು ಗುರುತಿಸಿದ್ದಾರೆ. ಸಿಸಿಇ ಅವರಿಗೆ ಹೊಸ ಪರಿಕಲ್ಪನೆ ಅಲ್ಲ. "ನಮಗೆ ಪ್ರತಿಯೊಂದು ಮಗುವಿನ ಬಗ್ಗೆಯೂ ನಿಕಟವಾದ ಪರಿಚಯ, ತಿಳಿವಳಿಕೆ ಇದೆ. ಅವರು ಪ್ರತಿದಿನ ಏನನ್ನು ಕಲಿಯುತ್ತಾರೆ, ಯಾವ ರೀತಿಯ ಗಮನ ಅಗತ್ಯವಿದೆ ಎಂಬುದು ಗೊತ್ತಿರುತ್ತದೆ. ನಿಜವಾಗಿ ಹೇಳಬೇಕೆಂದರೆ ನಾವು ಅವರ ಮೇಲೆ ನಿಕಟವಾದ ನಿಗಾ ಇರಿಸಿದ್ದೇವೆ ಎಂಬುದು ಮಕ್ಕಳಿಗೆ ಗೊತ್ತೇ ಆಗುವುದಿಲ್ಲ; ಅದು ನಮ್ಮ ಶಾಲೆಯಲ್ಲಿನ ಬೋಧನೆ–ಕಲಿಕೆಗಳ ಪ್ರಕ್ರಿಯೆಯ ಅವಿಭಾಜ್ಯ ಅಂಗವಾಗಿದೆ. ಕಷ್ಟಗಳನ್ನು ಎದುರಿಸುತ್ತಿರುವ ಮಕ್ಕಳನ್ನು ನಾವು ಆಗಿಂದಾಗಲೇ ಗುರುತಿಸಿ ಅವರಿಗೆ ವೈಯಕ್ತಿಕವಾಗಿ ಗಮನ ಕೊಡುತ್ತೇವೆ" ಅನ್ನುತ್ತಾರೆ ರಾಮೇಶ್ವರಿ.

2015ರಲ್ಲಿ ರಾಮೇಶ್ವರಿಯವರಿಗೆ 'ರಾಜ್ಯ ಶಿಕ್ಷಕ ಪುರಸ್ಕಾರ' ಲಭಿಸಿತು. ಅವರು ವಿನಯದಿಂದಲೇ ಹೇಳುತ್ತಾರೆ, "ಇದು ಯಾವತ್ತೂ ಒಳ್ಳೆಯ ಶಾಲೆಯಾಗಿಯೇ ಇತ್ತು. ಇಲ್ಲಿನ ಶಿಕ್ಷಕರು ಎಂದೂ ಸಮರ್ಪಣಾ ಭಾವದಿಂದಲೇ ಕೆಲಸ ಮಾಡಿದ್ದಾರೆ. ಗ್ಯಾನ್‌ಸು ಪ್ರಾಥಮಿಕ ಶಾಲೆಯ ಮಕ್ಕಳು ಶಿಕ್ಷಕರಾಗಿದ್ದಾರೆ, ಎಂಜಿನಿಯರ್‌ಗಳಾಗಿದ್ದಾರೆ." ತಾವು ಈ ಶಾಲೆಯಲ್ಲಿ ಹಿಂದಿನವರ ಅತ್ಯುತ್ತಮ ಕೆಲಸವನ್ನು ಮುಂದುವರೆಸುತ್ತಿದ್ದೇವೆ ಅಷ್ಟೇ ಎಂದು ಪದೇ ಪದೇ ಹೇಳುವ ಮನೋಧರ್ಮ ಹಾಗೂ ವಿನಯ ಇವುಗಳು ಈ ಪ್ರಾಥಮಿಕ ಶಾಲಾ ಶಿಕ್ಷಕಿ ಎಂತಹ ಅಸಾಧಾರಣ ವ್ಯಕ್ತಿ ಎಂಬುದನ್ನು ಸಾರಿ ಹೇಳುತ್ತವೆ. ಇಡೀ ದಿನ ದಣಿವರಿಯದೆ ಕೆಲಸ ಮಾಡಿದರೂ ದಿನದ ಅಂತ್ಯದಲ್ಲಿ ರಾಮೇಶ್ವರಿಯವರು, ಬೆಳಗಿನ ಪ್ರಾರ್ಥನಾ ಸಭೆಯಲ್ಲಿ ಇದ್ದಷ್ಟೇ ಉತ್ಸಾಹದಿಂದ ಇದ್ದರು; ಯಾವಾಗ ಮತ್ತೆ ಬೆಳಗಾದೀತು, ಯಾವಾಗ ಮತ್ತೆ ಶಾಲೆಗೆ ಬಂದೇನು ಎನ್ನುವಂತಹ ಲವಲವಿಕೆ ಅವರಲ್ಲಿ ಕಾಣಿಸಿತು.

---

## ಟ್ರಾನ್ಸ್‌ಫಾರ್ಮರ್‌ಗಳನ್ನು ವೈಂಡಿಂಗ್ ಮಾಡುವುದರಿಂದ ಮಕ್ಕಳ ಬದುಕನ್ನು ಪರಿವರ್ತಿಸುವವರೆಗೆ

**ಪರಮೇಶ್ವರಯ್ಯ ಹಿರೇಮಠ್**

ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಯಾಳಗಿ, ಸುರಪುರ ತಾಲ್ಲೂಕು
ಯಾದಗಿರಿ ಜಿಲ್ಲೆ, ಕರ್ನಾಟಕ

---

ನಲವತ್ತೆಂಟು ವರ್ಷದ ಪರಮೇಶ್ವರಯ್ಯ ಹಿರೇಮಠ ಮಿತಭಾಷಿ. ಶಾಂತ, ಗಂಭೀರ ವ್ಯಕ್ತಿತ್ವದ ಹಿರೇಮಠರಿಗೆ ಅನಾವಶ್ಯಕ ಹರಟೆಗೆ ಮನಸ್ಸು ಒಪ್ಪುವುದಿಲ್ಲ; ಸಮಯವೂ ಇಲ್ಲ. ತರಗತಿಯಲ್ಲಿ ಮಕ್ಕಳೊಂದಿಗೆ ಕಾಲ ಕಳೆಯುವುದರಲ್ಲೇ ಅವರಿಗೆ ಆಸಕ್ತಿ. ವಿದ್ಯಾರ್ಥಿಗಳೊಂದಿಗೆ ಮಾತನಾಡುತ್ತಿರುವಾಗ ಅವರನ್ನು ಗಮನಿಸುವುದೇ ಒಂದು ಖುಷಿಯ ವಿಷಯವಾದರೆ, ಶಾಲೆಯ ಬಗ್ಗೆ, ತಮ್ಮ ಕೆಲಸದ ಬಗ್ಗೆ ಒಂದೆರಡು ತಾಸು

ಅವರನ್ನು ಮಾತಿಗೆಳೆಯುವುದು ಅತ್ಯಂತ ಆಸಕ್ತಿದಾಯಕ.

ಪರಮೇಶ್ವರಯ್ಯನವರು ಪ್ರಾರಂಭದಲ್ಲಿ ನವೋದಯ ಶಾಲೆಯೊಂದರಲ್ಲಿ ಗ್ರಂಥಪಾಲಕನಾಗಿ ಕೆಲಸಕ್ಕೆ ಸೇರಿದರು, ಅನಂತರ ಎಲೆಕ್ಟ್ರಿಶಿಯನ್ ಆಗಿ ಕೆಲಸ ಮಾಡಿದರು. ಟ್ರಾನ್ಸ್‌ಫಾರ್ಮರ್‌ಗಳನ್ನು ವೈಂಡಿಂಗ್ ಮಾಡುತ್ತ ಮೂರು ವರ್ಷ ಕಳೆದರು. 1999ರಲ್ಲಿ ಮೂವತ್ತರ ಪ್ರಾಯದಲ್ಲಿ ಒಂದು ಪದವಿಯನ್ನೂ ಇಂಟರ್ನ್‌ಶಿಪ್ ಟೀಚರ್ ಕೋರ್ಸ್ (ಐಟಿಸಿ)ಅನ್ನೂ ಮುಗಿಸಿ ಶಿಕ್ಷಣ ಇಲಾಖೆಯ ಕೆಲಸಕ್ಕೆ ಸೇರಿದರು. ಮೊದಲು ಕೆಲಸ ಮಾಡಿದ್ದು ಸುರಪುರ ತಾಲ್ಲೂಕಿನ ದಾದಲಾಪುರದ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಯಲ್ಲಿ. ಹಿಂದಿನ ರಾಜ್ಯ ಸರ್ಕಾರ ನೀಡಿದ್ದ ಗ್ರಾಮೀಣ ಮೀಸಲಾತಿಯ ಕೃಪಾಂಕಗಳು ಊರ್ಜಿತವಲ್ಲ ಎಂದು 2003ರಲ್ಲಿ ನ್ಯಾಯಾಲಯ ತೀರ್ಮಾನಿಸಿದ್ದರಿಂದ, ಈ ಆಧಾರದಲ್ಲಿ ನೇಮಕಾತಿಯಾಗಿದ್ದ ಪರಮೇಶ್ವರಯ್ಯನವರು ಉದ್ಯೋಗ ಕಳೆದುಕೊಂಡರು. ಇದೇ ಸಂಕಷ್ಟಕ್ಕೆ ಸಿಲುಕಿದ ಅನೇಕ ಶಿಕ್ಷಕರು, ಸರ್ಕಾರಿ ಆಜ್ಞೆಯನ್ನು ಅನೂರ್ಜಿತಗೊಳಿಸಿದ್ದರ ವಿರುದ್ಧ ಹೈಕೋರ್ಟಿಗೆ ಮೇಲ್ಮನವಿ ಸಲ್ಲಿಸಿದರು. ಹೈಕೋರ್ಟು ಇವರ ಪರವಾಗಿಯೇ ತೀರ್ಪು ನೀಡಿತು. ಇದರಿಂದಾಗಿ 2003ರಲ್ಲಿ ಪರಮೇಶ್ವರಯ್ಯನವರು ಯಕ್ತಾಪುರದ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗೆ ನೇಮಕಗೊಂಡರು. ಕೇವಲ ಒಂದೇ ವರ್ಷದಲ್ಲಿ ಇವರ ಸಾಮರ್ಥ್ಯಗಳನ್ನು ಗುರುತಿಸಿದ ಇಲಾಖೆ ಸಮನ್ವಯ ಶಿಕ್ಷಣದ ಸಂಪನ್ಮೂಲ ಶಿಕ್ಷಕ (ಇಂಟಿಗ್ರೇಟೆಡ್ ಎಜುಕೇಶನ್ ರಿಸೋರ್ಸ್ ಟೀಚರ್ – ಐಇಆರ್‌ಟಿ) ಆಗಿ ನೇಮಿಸಿತು. ಆ ಸ್ಥಾನದಲ್ಲಿ ಅವರು 2005ರಿಂದ 2013ರವರೆಗೆ ಕೆಲಸ ಮಾಡಿದರು.

ಹೀಗೆ ಐಇಆರ್‌ಟಿ ಆಗಿ ದೀರ್ಘ ಕಾಲ ಸೇವೆ ಸಲ್ಲಿಸಿದ ಮೇಲೆ ಪರಮೇಶ್ವರಯ್ಯನವರನ್ನು ಯಾಳಗಿಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗೆ ನೇಮಿಸಲಾಯಿತು. 1950ರ ದಶಕದ ಮಧ್ಯಭಾಗದಲ್ಲಿ ಸ್ಥಾಪಿತವಾದ ಈ ಹಳೆಯ ದೊಡ್ಡ ಶಾಲೆಯಲ್ಲಿ 1 ರಿಂದ 7ರ ವರೆಗಿನ ತರಗತಿಗಳಲ್ಲಿ ಆರುನೂರ ಎಪ್ಪತ್ತು ವಿದ್ಯಾರ್ಥಿಗಳಿದ್ದಾರೆ. ಇಲ್ಲಿ ಹನ್ನೊಂದು ಶಿಕ್ಷಕರಿದ್ದಾರೆ (ಮಂಜೂರಾಗಿರುವುದು ಹದಿನೈದು).

ಪರಮೇಶ್ವರಯ್ಯ ನಾಲ್ಕನೆಯ ತರಗತಿಗೆ ಪಾಠ ಮಾಡುತ್ತಾರೆ. ಅವರ ತರಗತಿಯಲ್ಲಿ ದಾಖಲಾಗಿರುವ ತೊಂಬತ್ತು ಮಕ್ಕಳಲ್ಲಿ ಹಾಜರಾಗುವವರು ಅರವತ್ತು ಮಂದಿ ಮಾತ್ರ. ಹಾಜರಾಗದ ಮೂವತ್ತು ಮಂದಿಯನ್ನು ಪೋಷಕರು ಪ್ರೈವೇಟ್ ಕೋಚಿಂಗ್‌ಗೆ ಹಾಕಿದ್ದಾರೆ. ಸರ್ಕಾರಿ ಶಾಲೆಯಲ್ಲಿ ಮಕ್ಕಳು ದಾಖಲಾಗಿದ್ದರೂ ಖಾಸಗಿ ಶಾಲೆಗೆ ಹೋಗುವ ವಿಚಿತ್ರ ಪರಿಪಾಠಕ್ಕೆ ಈ ಕಡೆ ಪ್ರೈವೇಟ್ ಕೋಚಿಂಗ್ ಎನ್ನುತ್ತಾರೆ. ಇದರಿಂದ ಪರಮೇಶ್ವರಯ್ಯನವರೇನೂ ಬೇಸರ ಪಡುವುದಿಲ್ಲ. ಅವರು 2013ರಲ್ಲಿ ಈ ಶಾಲೆಗೆ ಬಂದಾಗ ತರಗತಿಗೆ ನಿಯಮಿತವಾಗಿ ಬರುತ್ತಿದ್ದವರು ಹದಿನೈದು ಮಂದಿ. ತಮ್ಮ ಅಧ್ಯಾಪನದ ಶಕ್ತಿಯೇನು ಎಂಬುದನ್ನು ಪರಮೇಶ್ವರಯ್ಯ ಒಂದೇ ವರ್ಷದಲ್ಲಿ ಸಾಬೀತುಪಡಿಸಿದರು. ಇದನ್ನು ಗಮನಿಸಿ ಅನೇಕ ಪೋಷಕರು ತಮ್ಮ ಮಕ್ಕಳನ್ನು 'ಪ್ರೈವೇಟ್ ಕೋಚಿಂಗ್'ನಿಂದ ಬಿಡಿಸಿ ಪರಮೇಶ್ವರಯ್ಯನವರ ತರಗತಿಗೆ ಸೇರಿಸಿದರು.

ಯಾಳಗಿ ಗ್ರಾಮದಲ್ಲಿ ಶ್ರೀಮಂತ ಸಮುದಾಯಗಳ ನಡುವೆ ಒಳಜಗಳ, ಹಿಂಸಾಕಾಂಡ ನಡೆಯುತ್ತಲೇ ಇರುತ್ತದೆ. ಇದರಿಂದಾಗಿ ಅನೇಕ ಪೋಷಕರಿಗೆ ಶಾಲೆಗೆ ಬಂದು ತಮ್ಮ ಮಕ್ಕಳು ಹೇಗೆ ಕಲಿಯುತ್ತಿದ್ದಾರೆ ಎಂದು ವಿಚಾರಿಸಲು ಕೂಡಾ ಧೈರ್ಯವಿಲ್ಲ. ಶಿಕ್ಷಕರು ತಮ್ಮ ಸಮುದಾಯದ ಶ್ರೀಮಂತ ಮುಖಂಡರಿಗೆ ದೂರು ಹೇಳಬಹುದು ಎಂಬ ಭಯ ಅವರನ್ನು ಕಾಡುತ್ತಿರುತ್ತದೆ. ಇದನ್ನು ಗಮನಿಸಿದ ಪರಮೇಶ್ವರಯ್ಯನವರು, ವಿದ್ಯಾರ್ಥಿಗಳೇ ಮನೆಯಲ್ಲಿ ಶಾಲೆಯ ಬಗ್ಗೆ ಪೋಷಕರೊಂದಿಗೆ ಮಾತನಾಡುವಂತೆ ಉತ್ತೇಜಿಸುತ್ತಾರೆ. ಹೀಗೆ ಪೋಷಕರು ಪರೋಕ್ಷವಾಗಿ ತಮ್ಮ ಮಕ್ಕಳು ಶಾಲೆಯಲ್ಲಿ ಏನು ಕಲಿಯುತ್ತಿದ್ದಾರೆ ಎಂಬುದನ್ನೂ ಪರಮೇಶ್ವರಯ್ಯನವರ ತರಗತಿಗಳನ್ನು ಮಕ್ಕಳು ಎಷ್ಟು ಇಷ್ಟಪಡುತ್ತಾರೆ ಎಂಬುದನ್ನೂ ತಿಳಿದುಕೊಳ್ಳುತ್ತಾರೆ. ಬಹುತೇಕ ಪೋಷಕರು ಅನಕ್ಷರಸ್ಥರು. ಅವರಲ್ಲಿ ಶೇಕಡಾ 60 ಮಂದಿ ಶಾಲೆಯು ಕಳಿಸುವ ಅಂಕಪಟ್ಟಿಯ ಮೇಲೆ ಹೆಬ್ಬೆಟ್ಟು ಒತ್ತಬಲ್ಲರು, ಅಷ್ಟೇ!

ಪರಮೇಶ್ವರಯ್ಯನವರು ಅತ್ಯುತ್ತಮ ಬೋಧನಾ ಕ್ರಮವನ್ನೂ ತರಗತಿ ವಿಧಿ ವಿಧಾನಗಳನ್ನೂ ಅನುಸರಿಸುವ ಶ್ರೇಷ್ಠ ಅಧ್ಯಾಪಕ ಎಂಬ ಕೀರ್ತಿಯನ್ನು ಯಾಳಗಿಗೆ ಬರುವಾಗಲೇ ಹೊಂದಿದ್ದರು. ಮುಖ್ಯೋಪಾಧ್ಯಾಯರು ಇವರ ಕೆಲಸದಲ್ಲಿ ತಲೆ ಹಾಕುವುದಿಲ್ಲ. ಇದರ ಬಗ್ಗೆ ಪರಮೇಶ್ವರಯ್ಯನವರಿಗೆ ಕೃತಜ್ಞತೆ ಇದೆ. ಅಂತರ್ಮುಖಿ ಎಂಬಂತಿರುವ ಪರಮೇಶ್ವರಯ್ಯನವರು ತಮ್ಮ ಪಾಡಿಗೆ ತಾವು ಇರುವಂಥವರು. ಸಹೋದ್ಯೋಗಿಗಳೊಂದಿಗೆ ಮಾತುಕತೆಯಲ್ಲಿ ತೊಡಗುವುದು ಒಂದೋ ಊಟ ಅಥವಾ ಚಹಾ ವಿರಾಮದಲ್ಲಿ, ಇಲ್ಲವೇ ಎಲ್ಲಾ ಶಿಕ್ಷಕರೂ ಸೇರುವ ಸಭೆಗಳಲ್ಲಿ.

ತಮ್ಮ ತರಗತಿ, ವಿದ್ಯಾರ್ಥಿಗಳು ಮತ್ತು ಕಲಿಕೆ ಇವು ಅಷ್ಟೇ ಪರಮೇಶ್ವರಯ್ಯನವರ ಗಮನದಲ್ಲಿ ಇರುವಂತಹದು. ಅವರಿಗೆ ಸಮೂಹ ಸಂಪನ್ಮೂಲ ವ್ಯಕ್ತಿ (ಕ್ಲಸ್ಟರ್ ರಿಸೋರ್ಸ್ ಪರ್ಸನ್ – ಸಿಆರ್‌ಪಿ), ಬಿಆರ್‌ಪಿ (ಬ್ಲಾಕ್ ರಿಸೋರ್ಸ್ ಪರ್ಸನ್) ಮೊದಲಾದ ಶೈಕ್ಷಣಿಕ ಬೆಂಬಲ ನೀಡುವ ಪಾತ್ರಗಳನ್ನು ವಹಿಸಿಕೊಳ್ಳುವುದರಲ್ಲಿ ಆಸಕ್ತಿ ಇಲ್ಲ. ವಿದ್ಯಾರ್ಥಿಗಳೊಂದಿಗೆ ತಮ್ಮ ತರಗತಿಯಲ್ಲೇ ಇರುವುದರಲ್ಲಿ ಸಂಪೂರ್ಣ ತೃಪ್ತಿ ಇದೆ. ಅವರಿಗಿರುವ ಒಂದೇ ಒಂದು ವಿಷಾದವೆಂದರೆ, ಅವರ ವಿದ್ಯಾರ್ಥಿಗಳು 4ನೇ ತರಗತಿಯಿಂದ ಐದನೆಯ ತರಗತಿಗೆ ಹೋದಾಗ ಪರಮೇಶ್ವರಯ್ಯನವರ ಬೋಧನಾ ವಿಧಾನಗಳಿಂದ ವಂಚಿತಾಗುತ್ತಾರೆ ಎಂಬುದು. ಕೇರಳದಲ್ಲಿನ ಒಂದು ಮಾದರಿ ಶಾಲೆಯನ್ನು ನೋಡಿದ ಮೇಲೆ ತನ್ನ ಮನಸ್ಸು ತರಗತಿಯಲ್ಲಿನ ಅಪಾರ ಸಾಧ್ಯತೆಗಳ ಬಗ್ಗೆ ತೆರೆದುಕೊಂಡಿತು ಎಂದು ತನ್ನದೇ ಉದಾಹರಣೆಯನ್ನು ಮುಂದಿಟ್ಟರು. ತಾನೊಬ್ಬ ಅತ್ಯುತ್ತಮ ಶಿಕ್ಷಕನಾಗಬೇಕೆಂಬ ಅತೀವ ಹಂಬಲ ಅವರಿಗಿದೆ. ಆದರೆ ಅವರು ಯಾರಿಂದಲೂ ಗುಣಗಾನವನ್ನು ನಿರೀಕ್ಷೆ ಮಾಡುವುದಿಲ್ಲ; ಸಹೋದ್ಯೋಗಿಗಳ ಅಥವಾ ಮೇಲ್ವಿಚಾರಕ ಅಧಿಕಾರಿಗಳ ಮೆಚ್ಚುಗೆಯನ್ನೂ ಬಯಸುವುದಿಲ್ಲ.

ಬಾಲಸ್ನೇಹಿ ಶಾಲಾ ಉಪಕ್ರಮ (ಚೈಲ್ಡ್ ಫ್ರೆಂಡ್ಲಿ ಸ್ಕೂಲ್ ಇನಿಶಿಯೇಟಿವ್ – ಸಿಎಫ್‌ಎಸ್‌ಐ)ದ ತರಬೇತಿ ಕಾರ್ಯಕ್ರಮಗಳ ವರ್ಕ್‌ಶೀಟ್‌ಗಳು, ವೈಯಕ್ತಿಕ ರೀಡಿಂಗ್

ಬೋರ್ಡ್‌ಗಳು ಹಾಗೂ ಇತರೇ ಸಾಮಗ್ರಿಗಳು ತಮ್ಮ ತರಗತಿಯಲ್ಲಿ ತುಂಬಾ ಉಪಯುಕ್ತವಾದವು, ತಮ್ಮ ಬೋಧನಾ ಶೈಲಿಯ ಮೇಲೆ ಪರಿಣಾಮ ಬೀರಿದವು ಎಂದು ತಾವು ಬ್ಲಾಕ್ ಸಂಪನ್ಮೂಲ ವ್ಯಕ್ತಿ ಆಗಿದ್ದಾಗ, ಸಿಎಫ್ಎಸ್‌ಐನ ಒಡನಾಟದಲ್ಲಿದ್ದ ಪರಮೇಶ್ವರಯ್ಯನವರು ಹೇಳುತ್ತಾರೆ. ಪರಮೇಶ್ವರಯ್ಯನವರನ್ನು 'ನಲಿ–ಕಲಿ' ತರಬೇತಿದಾರರಾಗಿ ಆಯ್ಕೆಮಾಡಲಾಗಿತ್ತು. ಅವರು 'ನಲಿ–ಕಲಿ' ತರಬೇತಿ ಮಾಡ್ಯೂಲ್‌ಗಳನ್ನು ತಯಾರಿಸುವ ತಂಡದ ಸದಸ್ಯರೂ ಆಗಿದ್ದರು. ಸುರಪುರ ತಾಲೂಕಿನ ಶಿಕ್ಷಕರ ಕಲಿಕಾ ಕೇಂದ್ರ (ಟೀಚರ್ ಲರ್ನಿಂಗ್ ಸೆಂಟರ್ – ಟಿಎಲ್‌ಸಿ) ವನ್ನು ಸ್ಥಾಪಿಸಿದಾಗ, ಎಲ್ಲಾ ಲಭ್ಯ ಸಾಮಗ್ರಿಯಿಂದಲೂ ಕಲಿಯಲು ಉತ್ಸುಕರಾದ ಪರಮೇಶ್ವರಯ್ಯನವರು ಅಲ್ಲಿಗೆ ಪದೇಪದೇ ಭೇಟಿ ನೀಡಿ ಭಾಗೀದಾರರಾದರು. ಅವರು ಸ್ವಯಂ ಪ್ರೇರಣೆಯ ಶಿಕ್ಷಕರ ವೇದಿಕೆ (ವಾಲಂಟರಿ ಟೀಚರ್ ಫೋರಮ್ –ವಿಟಿಎಫ್)ಯಲ್ಲೂ ಭಾಗವಹಿಸುತ್ತಿದ್ದು, ಅಲ್ಲಿ ನಡೆಯುವ ಚರ್ಚೆಗಳಿಗೆ ನೀಡುವ ಕೊಡುಗೆಗಳನ್ನು ಎಲ್ಲರೂ ಮೆಚ್ಚಿಕೊಳ್ಳುತ್ತಾರೆ. ಫೌಂಡೇಶನ್‌ನಿಂದ ಎಚ್‌ಡಿ ಕೋಟೆಯಲ್ಲಿ ನಡೆದ ಸಮಾಜ ವಿಜ್ಞಾನ ಬೇಸಿಗೆ ಶಿಬಿರವು ವಿಷಯದ ಬಗ್ಗೆ ಆಳವಾದ ತಿಳಿವಳಿಕೆಯನ್ನು ಪಡೆದುಕೊಳ್ಳಲು ತಮಗೆ ನೆರವಾಯಿತು ಎಂದು ಹೇಳುತ್ತಾರೆ. ನಾವು ಚರಿತ್ರೆಯನ್ನು ಏಕೆ ಮತ್ತು ಹೇಗೆ ಕಲಿಸಬೇಕು ಎಂಬುದಕ್ಕೆ ತಮ್ಮ ಉತ್ತರವನ್ನು ಅವರು ಬಹಳ ಸುಂದರವಾಗಿ ಅಭಿವ್ಯಕ್ತಿಸಿದ್ದು ಹೀಗೆ, "ಈ ವಿಷಯದಲ್ಲಿ ಮಾಹಿತಿಯನ್ನು ನೆನಪಿಟ್ಟುಕೊಳ್ಳುವುದಕ್ಕಿಂತ ಸಾಕ್ಷಿ–ಪುರಾವೆಯನ್ನು ಹುಡುಕುವುದು, ಪ್ರಶ್ನೆ ಕೇಳಿಕೊಳ್ಳುವುದು ಮುಖ್ಯ ಎಂಬುದನ್ನು ನಾವು ಮಕ್ಕಳಿಗೆ ತಿಳಿಸಬೇಕು. ಆದ್ದರಿಂದಲೇ ನಾನು ಐತಿಹಾಸಿಕ ಘಟನೆಗಳನ್ನು ಚರ್ಚಿಸುವಾಗ ವಿಚಾರ, ತರ್ಕ, ಆಸಕ್ತಿದಾಯಕ ಸಂಬಂಧಿತ ವಿಷಯಗಳು ಇವೆಲ್ಲವನ್ನೂ ತರುತ್ತೇನೆ. ನಾನು ಇದನ್ನು ಅನುಷ್ಠಾನಕ್ಕೆ ತಂದಾಗ ಮಕ್ಕಳ ನೆನಪಿನ ಶಕ್ತಿ ಬೆಳೆಯುತ್ತದೆ ಎಂಬುದನ್ನು ಕಂಡುಕೊಂಡಿದ್ದೇನೆ."

ಪರಮೇಶ್ವರಯ್ಯನವರ ಆಸಕ್ತಿ ಸಂಪೂರ್ಣವಾಗಿ ತರಗತಿಗಳು ಹಾಗೂ ವಿದ್ಯಾರ್ಥಿಗಳು ಎಂಬುದು ನಿಜವಾದರೂ ಅವರು ತಮ್ಮನ್ನು ಇಷ್ಟಕ್ಕೇ ಮಿತಿಗೊಳಿಸಿಕೊಂಡಿದ್ದಾರೆ ಎಂದೇನೂ ಅಲ್ಲ. 2013ರಲ್ಲಿ ಯಾಳಗಿಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯನ್ನು ಸೇರಿದಾಗ ಅವರು ಎಲ್ಲ ತರಗತಿಗಳಲ್ಲೂ ಮಕ್ಕಳ ಕಲಿಕಾ ಸಾಮರ್ಥ್ಯ ಕೆಳಮಟ್ಟದಲ್ಲಿರುವುದನ್ನು ಗಮನಿಸಿ ಮೊದಲು ಅದನ್ನು ಮೇಲಕ್ಕೆತ್ತಬೇಕು ಎಂದು ನಿರ್ಧರಿಸಿದರು. 5, 6, 7ನೇ ತರಗತಿಗಳಿಗೆ ಸೇರಿದ ಸುಮಾರು ನಲವತ್ತೈದು ವಿದ್ಯಾರ್ಥಿಗಳು ಕಲಿಕೆಯಲ್ಲಿ ಹಿಂದೆ ಬಿದ್ದಿರುವುದನ್ನು ಗುರುತಿಸಿ ಅವರಿಗೆ ವಿಶೇಷ ತರಗತಿಗಳನ್ನು ಆರಂಭಿಸಿದರು. ಈ ಮಕ್ಕಳಿಗೆ ಓದುವುದು, ಬರೆಯುವುದು, ಗ್ರಹಣಶಕ್ತಿ ಹಾಗೂ ಗಣಿತದಲ್ಲಿ ನೆರವಾಗಬೇಕು ಎಂಬ ವೈಯಕ್ತಿಕ ಬದ್ಧತೆ ಅವರನ್ನು ಅದಕ್ಕೆ ಪ್ರೇರೇಪಿಸಿತ್ತು. ಕೇವಲ ಆರು ತಿಂಗಳಲ್ಲಿ ಇವರೆಲ್ಲರೂ ಗಮನಾರ್ಹವಾಗಿ ಪ್ರಗತಿಯನ್ನು ಸಾಧಿಸಿದರು. ಪ್ರತಿ ಮಗುವೂ ಕಲಿಯುವ ಸಾಮರ್ಥ್ಯವನ್ನು ಹೊಂದಿದೆ ಎಂದು ನಿರೂಪಿಸಿದರು. "ನಾವು ಶಿಕ್ಷಕರು ಹೆಚ್ಚು ಪ್ರಯತ್ನಶೀಲರಾಗಲು, ತುಂಬಾ ಹೆಚ್ಚು ಪ್ರಯತ್ನಿಸಲು ಸಿದ್ಧರಿದ್ದರೆ ಮಕ್ಕಳು ಕಲಿಯುತ್ತಾರೆ" ಎಂದು ಪರಮೇಶ್ವರಯ್ಯ ಹೇಳುತ್ತಾರೆ. ಆ ನಲವತ್ತೈದು ಮಕ್ಕಳಿಗೆ ವೇಗವಾಗಿ ಕಲಿಯುವ ಕಾರ್ಯಕ್ರಮ ರೂಪಿಸಲು ತಮಗೆ

ಫೌಂಡೇಶನ್‌ನ ಕಾರ್ಯಕ್ರಮಗಳಿಂದ ಕಲಿತದ್ದು ಸಹಾಯಕವಾಯಿತು ಎಂದು ಸ್ಮರಿಸುತ್ತಾರೆ. ಮಕ್ಕಳಿಗೆ ತಾವು ಕಲಿಯುತ್ತಿದ್ದೇವೆ ಎಂಬುದು ತಿಳಿಯತೊಡಗುತ್ತದೆ; ತರಗತಿಯಲ್ಲಿ ಆಸಕ್ತಿ ಬೆಳೆಯುತ್ತದೆ; ಶಾಲೆಗೆ ತಪ್ಪದೆ ಬರಲು ಆರಂಭಿಸುತ್ತಾರೆ, ಈಗ ಪ್ರತಿವರ್ಷವೂ ಹಾಜರಾಗುತ್ತಿದ್ದಾರೆ. ಕರ್ನಾಟಕ ಸ್ಟೇಟ್ ಕ್ವಾಲಿಟಿ ಅಸೆಸ್ಮೆಂಟ್ ಅಂಡ್ ಅಕ್ರೆಡಿಟೇಷನ್ ಕೌನ್ಸಿಲ್ (ಕೆಎಸ್‌ಕ್ಯೂಎಎಸಿ) ಮೌಲ್ಯಮಾಪನದಲ್ಲಿ ತಮ್ಮ ಶಾಲೆಯ ಹೆಸರು ಉನ್ನತ ಶ್ರೇಣಿಯ ಶಾಲೆಗಳ ಪಟ್ಟಿಯಲ್ಲಿರುತ್ತದೆ ಎಂಬ ವಿಶ್ವಾಸ ಪರಮೇಶ್ವರಯ್ಯ ಅವರಿಗಿದೆ. ಇಷ್ಟಾಗಿಯೂ ಆರೆಂಟು ಮಕ್ಕಳು ಇನ್ನೂ ಚೆನ್ನಾಗಿ ಕಲಿಯುತ್ತಿಲ್ಲ ಎಂಬ ನೋವೂ ಸಹ ಅವರನ್ನು ಕಾಡುತ್ತದೆ. ಈ ಮಕ್ಕಳ ಬಗ್ಗೆ ಅವರಿಗೆ ಕಾಳಜಿ ಇದೆ.

ಪರಮೇಶ್ವರಯ್ಯನವರು ತಮ್ಮ ಪಾಠಗಳನ್ನು ಚೆನ್ನಾಗಿ ಸಂಘಟಿಸಿಕೊಳ್ಳುತ್ತಾರೆ. ಮಕ್ಕಳು ಸದಾಕಾಲ ಒಂದಲ್ಲ ಒಂದು ಚಟುವಟಿಕೆಯಲ್ಲಿ ಇರುವಂತೆ ನೋಡಿಕೊಳ್ಳುತ್ತಾರೆ. "ಇಲ್ಲದಿದ್ದರೆ ಸಮಸ್ಯೆಗಳು ಸೃಷ್ಟಿಯಾಗುತ್ತವೆ" ಎನ್ನುತ್ತಾರವರು. ಅವರ ತರಗತಿಗೆ ಒಂದು ಸುಸಂಘಟಿತ ವೇಳಾಪಟ್ಟಿಯಿದ್ದು ಅದರಲ್ಲಿ ಬೆಳಗಿನ ಪ್ರಾರ್ಥನಾ ಸಭೆ, ಪದ್ಯ ಹೇಳುವುದು, ಕಥೆ ಹೇಳುವುದು, ಹಿಂದಿನ ದಿನ ಕಲಿತದ್ದನ್ನು ಚಿಕ್ಕದಾಗಿ ಮೆಲುಕು ಹಾಕುವುದು ಎಲ್ಲವೂ ಇರುತ್ತವೆ. ಅವರು ತುಂಬಾ ಸಹಜವಾಗಿ ಹಾಗೂ ಯುಕ್ತಿಯಿಂದ ಮೌಲ್ಯಗಳನ್ನು ಒಳಗೊಂಡ ಒಂದಲ್ಲ ಒಂದು ಚರ್ಚೆಯನ್ನು ಆರಂಭಿಸುತ್ತಾರೆ. ಪ್ರಾರ್ಥನಾ ಸಭೆಯನ್ನು ನಡೆಸಿಕೊಂಡು ಹೋಗಲು ಅವರೊಂದು 'ತರಗತಿ ಸಂಪುಟ' (ನಾಯಕರ ತಂಡ)ವನ್ನು ರಚಿಸಿದ್ದಾರೆ. ಪ್ರತಿಯೊಂದು ದಿನವೂ ಬೇರೆಬೇರೆ ನಾಯಕರು 'ಚಿಂತನ' ಎಂಬ, ಮೌಲ್ಯಗಳ ಕುರಿತಾದ ಚರ್ಚೆಯನ್ನು ನಡೆಸಿಕೊಡುತ್ತಾರೆ. ಹಾಗೆಯೇ ಗಣಿತ ಮತ್ತು ಕನ್ನಡ ಗುಂಪುಗಳನ್ನು ರಚಿಸಿದ್ದಾರೆ. ಈ ಗುಂಪುಗಳು ಒಂದು ವಾರ ಬಿಟ್ಟು ಇನ್ನೊಂದು ವಾರದ ಬುಧವಾರದಂದು ಸೇರಿ ಮಿತ್ರರಿಂದ ಕಲಿಯುವುದು, ಪರಸ್ಪರ ಸಹಕಾರ ಪಡೆಯುವುದನ್ನು ಉತ್ತೇಜಿಸುತ್ತವೆ. ಈ ಸ್ನೇಹಿತ ಸಹಾಯಕರನ್ನು ವಿವಿಧ ಜಾತಿಗಳಿಂದ ಆರಿಸಿ, ವಾಸ್ತವದಲ್ಲಿ ಸಮಾನತೆಯ ಭಾವವು ಅವರ ನಡುವೆ ನೆಲೆಗೊಳ್ಳುವಂತೆ ಮಾಡಲಾಗಿದೆ.

ಪರಮೇಶ್ವರಯ್ಯನವರ ವೇಳಾಪಟ್ಟಿಯಲ್ಲಿ ಹತ್ತಿರದ ಸ್ಥಳಗಳಿಗೆ ಸಂಚಾರ ಹೋಗುವುದಕ್ಕೆ ಅವಕಾಶವಿದೆ. ಈ ಕಾರ್ಯಕ್ರಮದ ಮೂಲಕ ತರಗತಿಯಲ್ಲಿ ಕಲಿತದ್ದನ್ನು ಮಕ್ಕಳು ಹೊರಜಗತ್ತಿನೊಂದಿಗೆ ತಾಳೆ ನೋಡಲು ಸಹಾಯವಾಗುತ್ತದೆ. ಪ್ರಾಯೋಗಿಕ ಜ್ಞಾನವನ್ನು ಪಡೆಯಲು ಮಕ್ಕಳು ಸರಳವಾದ, ಸ್ಥಳೀಯವಾದ ಸಮೀಕ್ಷೆಗಳನ್ನು ಪ್ರಸ್ತುತ ವಿಷಯಗಳ ಮೇಲೆ ನಡೆಸುತ್ತಾರೆ. ತಮ್ಮ ಸಣ್ಣಪುಟ್ಟ ಉಳಿತಾಯಗಳಿಂದ ತಮ್ಮದೇ ಆದ ಬ್ಯಾಂಕ್ ಅನ್ನು ರಚಿಸಿಕೊಳ್ಳಲು ನೆರವಾಗಿದ್ದಾರೆ. ಮಕ್ಕಳು ಪುಸ್ತಕ ಮೊದಲಾದ ಸಾಮಗ್ರಿಗಳನ್ನು ಕೊಳ್ಳಲು ಆ ಬ್ಯಾಂಕ್‌ನಿಂದ ಸಾಲ ಪಡೆದು ನಂತರ ತಮಗೆ ಸಾಧ್ಯವಾದಾಗ ಆ ಹಣವನ್ನು ವಾಪಸ್ ಮಾಡುತ್ತಾರೆ. ಸ್ವತಃ ಪರಮೇಶ್ವರಯ್ಯನವರೇ ಪ್ರತಿ ತಿಂಗಳು ಆ ಬ್ಯಾಂಕ್‌ಗೆ ತಮ್ಮ ಕಡೆಯಿಂದ 200 ರೂ. ಕೊಡುತ್ತಾರೆ.

ಪ್ರತಿವರ್ಷ ಜೂನ್, ಜುಲೈ ತಿಂಗಳುಗಳಲ್ಲಿ ಹೊಸ ಶೈಕ್ಷಣಿಕ ವರ್ಷ ಆರಂಭವಾಗುತ್ತದೆ. ಆಗ ಪ್ರತಿಯೊಬ್ಬ ವಿದ್ಯಾರ್ಥಿಯ ಕಲಿಕೆಯ ಮಟ್ಟ ಹೇಗಿದೆ ಎಂಬುದನ್ನು ನಿರ್ಧಾರ ಮಾಡಲಾಗುತ್ತದೆ. ಆ ತರಗತಿಯ ಪಠ್ಯಕ್ರಮವನ್ನು ಅವರು ನಿಜಕ್ಕೂ ಅರಗಿಸಿಕೊಳ್ಳಲು

ಸಾಧ್ಯವಾಗುವಂತೆ, ಪ್ರತಿಯೊಬ್ಬ ವಿದ್ಯಾರ್ಥಿಗೂ ಆವಶ್ಯಕ ಬೆಂಬಲವನ್ನು ನೀಡಲಾಗುತ್ತದೆ. ಹೀಗಾಗಿ ಪರಮೇಶ್ವರಯ್ಯನವರು ವಾಸ್ತವದಲ್ಲಿ ಆ ತರಗತಿಯ ನಿಗದಿತ ಪಠ್ಯವನ್ನು ಆರಂಭಿಸುವುದು ಆಗಸ್ಟ್ ತಿಂಗಳಿನಲ್ಲಿಯೇ. ಮೊದಲ ಎರಡು ತಿಂಗಳಿನಲ್ಲಿ ಅವರು ಹಾಕುವ ಅಡಿಪಾಯವು ನಿರ್ಣಾಯಕವಾದದ್ದು. ಅವರು ಪ್ರತಿಯೊಂದು ಮಗುವಿನ ಕಲಿಕೆಯ ಪ್ರಗತಿಯ ದಾಖಲೆಯನ್ನು ಇರಿಸಿದ್ದಾರೆ; ಅದು ಅವರ ಬೋಧನಾಕ್ರಮದ ಒಂದು ವೈಶಿಷ್ಟ್ಯ.

ಪ್ರತಿಯೊಂದು ಮಗುವೂ ಒಂದು ಪರಿಕಲ್ಪನೆಯನ್ನು ಗ್ರಹಿಸಲು ಸಾಧ್ಯವಾಗುವಂತೆ ತರ್ಕ ಮತ್ತು ವಿಶ್ಲೇಷಣೆಯನ್ನು ಪರಮೇಶ್ವರಯ್ಯ ಜಾಣ್ಮೆಯಿಂದ ಉಪಯೋಗಿಸುತ್ತಾರೆ. ಗಣಿತದಲ್ಲಿ ಮಕ್ಕಳು ಮಾಡಿರುವ ಕೆಲಸವನ್ನು ಗಮನಿಸಿದಾಗ ಇದು ಮನವರಿಕೆ ಯಾಗುತ್ತದೆ. ಕೋಷ್ಟಕಗಳು, ಗ್ರಾಫ್‌ಗಳು, ಪೈ ಚಾರ್ಟ್‌ಗಳು ಮುಂತಾದ ಕಲಿಕಾ ಸಾಮಗ್ರಿಗಳನ್ನು ತಯಾರಿಸಲು ಮಕ್ಕಳಿಗೆ ಕೆಲಸವನ್ನು ನೀಡುವಾಗ, ಅದರ ಹಿಂದೆ ಪರಿಕಲ್ಪನೆಗಳನ್ನು ಅಳವಡಿಸುವುದಕ್ಕೆ ಪ್ರಾಮುಖ್ಯತೆಯನ್ನು ನೀಡಿರುವುದು ವೇದ್ಯವಾಗುತ್ತದೆ. ಬಹುತೇಕ ಎಲ್ಲ ಮಕ್ಕಳ ಫಲಿತಾಂಶ ದಾಖಲೆಗಳೂ ಚೆನ್ನಾಗಿಯೇ ಇವೆ. ಆದರೆ ಇದನ್ನು ಅವರು ನಮಗೆ ತೋರಿಸುವಾಗ ನಮಗೆ ಗೋಚರಿಸಿದ್ದು 'ಶಿಕ್ಷಕನೊಬ್ಬ ಮಾಡಬೇಕಾದ ಕರ್ತವ್ಯವನ್ನಷ್ಟೇ ನಾನು ಮಾಡಿದ್ದೇನೆ' ಎಂಬಂತಹ ವಿನಯಶೀಲತೆ.

ಪರಮೇಶ್ವರಯ್ಯನವರಿಗೆ ಇನ್ನೂ ಒಂದು ಕರ್ತವ್ಯವಿದೆ. ನವೋದಯ ಮತ್ತು ಮೊರಾರ್ಜಿ ಶಾಲೆಯಲ್ಲಿ ಪ್ರವೇಶ ಪಡೆಯಲು ಆಸೆಯಿದ್ದು, ಅದಕ್ಕೆ ಅಗತ್ಯ ಸಾಮರ್ಥ್ಯವೂ ಇರುವಂಥ ವಿದ್ಯಾರ್ಥಿಗಳನ್ನು ಹುಡುಕಿ ಅವರಿಗೆ ಅಗತ್ಯವಾದ ತರಬೇತಿಯನ್ನು ಅವರು ಕೊಡುತ್ತಾರೆ. ಈ ಕೆಲಸಕ್ಕೆ ಇನ್ನೊಬ್ಬ ಸಹೋದ್ಯೋಗಿಯನ್ನೂ ಹುಡುಕಿಕೊಂಡಿದ್ದಾರೆ. ಇಬ್ಬರೂ ಸೇರಿ 5ನೆಯ ತರಗತಿಯ ಮಕ್ಕಳಿಗೆ ಎರಡು ತಾಸುಗಳ ವಿಶೇಷ ತರಗತಿಯನ್ನು ನಡೆಸುತ್ತಾರೆ. ಕಳೆದ ಮೂರು ವರ್ಷಗಳ ಕಾಲ ಸತತವಾಗಿ ಪ್ರತಿವರ್ಷ ಮೂವರು ವಿದ್ಯಾರ್ಥಿಗಳು ಮೊರಾರ್ಜಿ ಶಾಲೆಗೆ ಪ್ರವೇಶ ಪಡೆದಿದ್ದು ಇಬ್ಬರು ಅಥವಾ ಮೂರು ಜನ ಪ್ರತಿಭಾವಂತ ವಿದ್ಯಾರ್ಥಿಗಳು ನವೋದಯ ಶಾಲೆಗೂ ಸೇರಿದ್ದಾರೆ. ಸಹೋದ್ಯೋಗಿಗಳಿಗೆ ಪರಮೇಶ್ವರಯ್ಯನವರ ಬಗ್ಗೆ ತುಂಬಾ ಮೆಚ್ಚುಗೆ ಇದೆ. ತಮ್ಮ ವಿದ್ಯಾರ್ಥಿಗಳ ಕಲಿಕೆಯ ಕುರಿತಾಗಿ ಅವರಿಗಿರುವ ಬದ್ಧತೆ ಮತ್ತು ಕಾಳಜಿ ಮಾತ್ರವಲ್ಲದೆ ಹಲವು ರೀತಿಯ ಬೋಧನಾ ಕ್ರಮಗಳನ್ನೂ, ಶೈಕ್ಷಣಿಕ ನಾವೀನ್ಯತೆಯನ್ನೂ ಪ್ರಯತ್ನಿಸುವ ಅವರ ಉತ್ಸಾಹ ಹಾಗೂ ಲವಲವಿಕೆಯನ್ನು ಸಹೋದ್ಯೋಗಿಗಳು ಮೆಚ್ಚಿಕೊಳ್ಳುತ್ತಾರೆ. ಅಲ್ಲದೆ ಅವರ ಜೊತೆ ಮಕ್ಕಳ ಕಲಿಕೆ, ಶೈಕ್ಷಣಿಕ ವಿಷಯಗಳು, ಬೋಧನಾ ವಿಧಾನಗಳ ಬಗ್ಗೆ ಮಾತನಾಡಬಹುದೇ ಹೊರತು ಕಾಡುಹರಟೆ ಸಾಧ್ಯವಿಲ್ಲ ಎಂಬುದನ್ನೂ ಅವರು ಬಲ್ಲರು.

ನಾವು ಅಲ್ಲಿಂದ ಹೊರಡುವಾಗ ಒಂದು ಸಂಕ್ಷಿಪ್ತ ವಿದಾಯವನ್ನು ಹೆಚ್ಚಿನ ಔಪಚಾರಿಕತೆ ಇಲ್ಲದೆ ಹೇಳಿ ಹೊರಟೆವು. ನಾವು ಬಾಗಿಲ ಕಡೆ ಹೊರಳುವಷ್ಟರಲ್ಲಿ, ಪರಮೇಶ್ವರಯ್ಯ ತಮ್ಮ ಕಡತಗಳಲ್ಲಿ ಮುಳುಗಿಹೋಗಿದ್ದರು. ಅವರು ಮತ್ತೆ ಕತ್ತೆತ್ತಿ ನೋಡಲಿಲ್ಲ.

# "ನಮ್ಮ ಮಕ್ಕಳು ಉತ್ತಮ ಕಲಿಕೆಯ ಮಟ್ಟ ಮತ್ತು ಸ್ವತಂತ್ರವಾಗಿ ಕಲಿಯುವ ಶಕ್ತಿಯೊಂದಿಗೆ ನಿರ್ಗಮಿಸುತ್ತಾರೆ" ಉತ್ತಮ ಶಿಕ್ಷಕರಾಗಿ ಬದಲಾದ ಟ್ಯಾಕ್ಸಿ ಚಾಲಕರ ಮಾತು

**ಸತ್ಯನಾರಾಯಣ್ ಬೈರ್‌ವಾಲ್**

ಸರ್ಕಾರಿ ಪ್ರಾಥಮಿಕ ಶಾಲೆ, ಬುಬಾರಿಯಾಫಲಿ ಅಬು ರೋಡ್ ಬ್ಲಾಕ್

ಸಿರೋಹಿ, ರಾಜಸ್ಥಾನ

ಶಿಕ್ಷಕರಾದ, ಅದರಲ್ಲೂ ಉತ್ತಮ ಶಿಕ್ಷಕರಾದ ಟ್ಯಾಕ್ಸಿ ಡ್ರೈವರ್ ಒಬ್ಬರ ಕಥೆ ಇದು. ಮೌಂಟ್ ಅಬು ರಾಜಸ್ಥಾನದ ಜನಪ್ರಿಯ ವಿಶ್ರಾಂತಿಧಾಮಗಳಲ್ಲೊಂದು. ಅದರಲ್ಲೂ ಪಕ್ಕದ ಗುಜರಾತ್ ರಾಜ್ಯದಿಂದ ಬರುವ ಪ್ರವಾಸಿಗಳಿಗೆ ಜಂಜಡಗಳನ್ನು ಮರೆಯುವ ವಾರಾಂತ್ಯದ ತಾಣ ಇದು. ಸತ್ಯನಾರಾಯಣ ಬೈರ್‌ವಾಲ್ ತಂದೆ ಅಬು ರೋಡ್‌ನಿಂದ ಪ್ರವಾಸಿಗಳನ್ನು ಗಿರಿಧಾಮಕ್ಕೆ ಕರೆದೊಯ್ಯುವ ಟ್ಯಾಕ್ಸಿ ಚಾಲಕರಾಗಿದ್ದರು. ಸತ್ಯನಾರಾಯಣರಿಗೆ ಹದಿನೆಂಟು ವರ್ಷ ತುಂಬಿದಾಗ ತಂದೆಯೊಂದಿಗೆ ಟ್ಯಾಕ್ಸಿ ಓಡಿಸಲಾರಂಭಿಸಿದರು. ತಂದೆ, ಮಗ ಕೆಲಸವನ್ನು ಹಂಚಿಕೊಳ್ಳುತ್ತಿದ್ದರು; ಸ್ಥಳೀಯವಾದ ಬಾಡಿಗೆಯಾದರೆ ಅರ್ಧ ದಿನ ತಂದೆ, ಅರ್ಧ ದಿನ ಮಗ ಓಡಿಸುತ್ತಿದ್ದರು. ರಾತ್ರಿ ಪೂರ ಚಾಲನೆ ಮಾಡಬೇಕಾದಾಗ ಒಬ್ಬರ ನಂತರ ಇನ್ನೊಬ್ಬರು ಚಲಾಯಿಸುತ್ತಿದ್ದರು. ವಿವಿಧ ರೀತಿಯ ಪ್ರವಾಸಿಗಳೊಂದಿಗೆ ಮಾತನಾಡುತ್ತಾ ಮಗ, ಉತ್ತಮ ಸಂವಹನ ಕೌಶಲವನ್ನು ಗಳಿಸಿಕೊಂಡರು. ಮಾನವ ಪ್ರವೃತ್ತಿ–ಪ್ರಕೃತಿಗಳ ಬಗ್ಗೆ ಕೂಡ ಕುತೂಹಲ ಬೆಳೆಯಿತು. ಅವರು ಇಂಗ್ಲಿಷ್ ಮಾತನಾಡಲು ಕಲಿತಿದ್ದು ಆಗಲೇ.

ಸತ್ಯನಾರಾಯಣರಿಗೆ ಕಲಿತು ಶಿಕ್ಷಕನಾಗಬೇಕೆಂಬ ಬಯಕೆ ತುಂಬಾ ಇತ್ತು. ಪ್ರಯಾಣಿಕರು ವಾಪಸು ಕಾರಿಗೆ ಬರುವವರೆಗಿನ ಬಿಡುವಿನಲ್ಲಿ ಅವರು ಅಧ್ಯಯನ ಮಾಡತೊಡಗಿದರು. ಈ ಅಧ್ಯಯನದಿಂದ ಅವರು ಬಿ.ಎ. ಪದವಿ ಪಡೆದುಕೊಂಡರು. ಅನಂತರ ಬಿ.ಎಡ್. ಪದವಿಯನ್ನೂ ಗಳಿಸಿದ್ದರು. ಸುಮಾರು ಏಳು ವರ್ಷ ಟ್ಯಾಕ್ಸಿ ಚಾಲಕರಾಗಿದ್ದರು. 1996ರಲ್ಲಿ, 28ನೇ ವಯಸ್ಸಿನಲ್ಲಿ ರಾಜಸ್ಥಾನ ಶಿಕ್ಷಣ ಇಲಾಖೆಯಲ್ಲಿ ಶಿಕ್ಷಕರಾಗಿ ಆಯ್ಕೆಯಾದರು. ಅವರ ಮೊದಲ ನೇಮಕ ಪಕ್ಕದ ರೇವಧರ್ ಬ್ಲಾಕ್‌ನ ಒಂದು ಶಾಲೆಯಲ್ಲಿ; ಅದು ಅವರ ಊರಿನಿಂದ 42 ಕಿ.ಮೀ. ದೂರದಲ್ಲಿತ್ತು ಮುಂದಿನ ಹತ್ತು ವರ್ಷ ಅವರು ಆ ಸರಕಾರಿ ಶಾಲೆಯಲ್ಲಿ ಕೆಲಸ ಮಾಡುತ್ತ ಉತ್ತಮ ಶಿಕ್ಷಕನಾಗುವ ಪರಿಶ್ರಮದಲ್ಲಿ ತೊಡಗಿಸಿಕೊಂಡರು. ವಾಚನ, ಹಿರಿಯರೊಂದಿಗೆ ಸಮಾಲೋಚನೆ, ಸಹೋದ್ಯೋಗಿಗಳ ಜತೆ ಚರ್ಚೆ ಮುಂತಾದ ಮಾರ್ಗಗಳಿಂದ ಜ್ಞಾನವನ್ನು ಪಡೆಯುತ್ತ ಅದನ್ನು ಅಧ್ಯಾಪನದಲ್ಲಿ ಪ್ರಯೋಗಿಸಿದರು. ಎಲ್ಲಾ ಮಕ್ಕಳಿಗೂ ಸಮಾನವಾಗಿ ಗಮನ ಹಾಗೂ ಕಲಿಕೆಯ ಅವಕಾಶ ದೊರೆಯಬೇಕು ಎಂಬುದನ್ನು ಅವರು ಶಿಕ್ಷಕ ವೃತ್ತಿಯ ಪಾರಂಭದ ದಿನಗಳಲ್ಲಿ ಮೈಗೂಡಿಸಿಕೊಂಡರು. ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ

ಅವಕಾಶವಂಚಿತ ಹಿನ್ನೆಲೆಯಿಂದ ಬಂದ ಮಕ್ಕಳು ಶಾಲೆಯಲ್ಲಿ ಸಮಾನತೆಯನ್ನೂ ನ್ಯಾಯವನ್ನೂ ಸದಾಕಾಲ ಅನುಭವಿಸಬೇಕು ಎಂಬ ಸೂಕ್ಷ್ಮ ಸಂವೇದನೆ ಅವರಲ್ಲಿತ್ತು. ಅವರ ಬೋಧನಾಶೈಲಿಗೆ ಇದುವೇ ತಳಹದಿಯನ್ನು ನಿರ್ಮಿಸಿತು.

ಅವರು ಎಂ.ಎ. ಪದವಿಯನ್ನೂ ಪಡೆದರು, ಮದುವೆಯನ್ನೂ ಮಾಡಿಕೊಂಡರು. ಅವರ ಜೀವನಸಂಗಾತಿಯೂ ಒಬ್ಬ ಸರ್ಕಾರಿ ಶಿಕ್ಷಕಿ. ಸತ್ಯನಾರಾಯಣರು ಪ್ರತಿಯೊಂದು ಮಗುವೂ ಕಲಿಯಬೇಕು ಎಂಬ ಗುಂಗಿನಲ್ಲೇ ಮುಳುಗಿದ್ದರು; ಕಾಲ ಸರಿಯುತ್ತಿತ್ತು. ಇದರ ಫಲಿತಾಂಶಗಳು ಕಾಣತೊಡಗುತ್ತಿದ್ದಂತೆ ಅವರನ್ನು, ಇಲಾಖೆ 2007ರಲ್ಲಿ ಸಿಆರ್‌ಪಿ ಆಗಿ ನೇಮಿಸಿತು. ಈ ಮಕ್ಕಳ ಸ್ಥಿತಿ ಎಷ್ಟು ಕಷ್ಟಕರ ಎಂದು ತಿಳಿದಿದ್ದ ಅವರು ತಮ್ಮ ಕ್ಲಸ್ಟರ್‌ನಲ್ಲಿ ಮಕ್ಕಳನ್ನು ಶಾಲೆಗೆ ಸೇರಿಸುವುದಕ್ಕೆ ಹಾಗೂ ಶಾಲೆಯಲ್ಲಿ ಉಳಿಸಿಕೊಳ್ಳುವುದಕ್ಕೆ ಹೆಚ್ಚಿನ ಗಮನವನ್ನು ಹರಿಸಿದರು. ಮೂರು ವರ್ಷಗಳ ನಂತರ 2010ರಲ್ಲಿ ತಮ್ಮದೇ ಅಬು ರೋಡ್ ಬ್ಲಾಕ್‌ನ ಬುಬಾರಿಯಾಫಲಿ ಗ್ರಾಮದ ಸರಕಾರಿ ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯರಾಗಿ ನೇಮಕಗೊಂಡರು. ಜಡವಾಗಿದ್ದ, ನಿಷ್ಕ್ರಿಯವಾಗಿದ್ದ ಒಂದು ಶಾಲೆಯನ್ನು, ಜೀವಂತ ಕಲಿಕೆಯ ಕೇಂದ್ರವನ್ನಾಗಿಸಿದ ಈ ಎಂಟು ವರ್ಷಗಳು ಸತ್ಯನಾರಾಯಣರ ಪಾಲಿಗೆ ಸ್ಮರಣಾರ್ಹವಾದದ್ದು. ಸುಮಾರು ಐವತ್ತು ವರ್ಷ ವಯಸ್ಸಿನ ಇವರು ಒಂದೆರಡು ವರ್ಷಗಳ ಹಿಂದೆ ಗಂಭೀರವಾದ ವ್ಯಾಧಿಯೊಂದಿಗೆ ಸೆಣಸಾಡಬೇಕಾಯಿತು. ಸಂತೋಷದ ವಿಷಯವೆಂದರೆ ಅವರೀಗ ಗುಣಮುಖರಾಗಿದ್ದಾರೆ. ಅವರ ಉತ್ಸಾಹವೂ ಬದ್ಧತೆಯೂ ಕುಂದಿದೆ ಎಂದು ಯಾರಿಗೂ ಅನಿಸುತ್ತಿಲ್ಲ. ಅವರ ದವಡೆಗೆ ಶಸ್ತ್ರಚಿಕಿತ್ಸೆಯಾಗಿದ್ದರೂ ಮಾತು ಮಾತ್ರ ಮೊದಲಿನಂತೆಯೇ ಸ್ಪಷ್ಟವಾಗಿದೆ.

ನಾವು ಬುಬಾರಿಯಾಫಲಿಯ ಸರ್ಕಾರಿ ಪ್ರಾಥಮಿಕ ಶಾಲೆಗೆ ಹೋದದ್ದು ಹೋಳಿ ಹಬ್ಬದ ಹಿಂದಿನ ದಿನ. ಉತ್ತರ ಭಾರತದ ಯಾವುದೇ ಗ್ರಾಮೀಣ ಶಾಲೆಯಲ್ಲಿ ಒಂದು ಪ್ರಮುಖ ಹಬ್ಬದ ಹಿಂದಿನ ದಿನ ಹಾಜರಾತಿ ಕಡಿಮೆ ಇರುವುದು ಸಹಜ. ಅರ್ಧಕ್ಕಿಂತ ಹೆಚ್ಚಿಗೆ ಇರುವುದಿಲ್ಲ ಎಂಬುದು ಖಂಡಿತ. ಊರಿನಲ್ಲಿ ಹಬ್ಬದ ಸಿದ್ಧತೆಗಳು ಅನೇಕ ದಿನ ಮೊದಲೇ ಆರಂಭವಾಗುತ್ತವೆ, ಕೆಲವರು ಸಂಬಂಧಿಕರ ಮನೆಗೆ ಹೋಗುವುದೂ ಉಂಟು. ಬುಬಾರಿಯಾಫಲಿಯ ಶಾಲೆಯಲ್ಲಿ ಐವತ್ತೈದು ಹುಡುಗರ ಗುಂಪು (ನಾವು ವೇಗವಾಗಿ ಎಣಿಸಿದೆವು) ಆನಂದದಿಂದ ನಮ್ಮನ್ನು ಸುತ್ತಿಕೊಂಡು ಉತ್ಸಾಹದಿಂದ ವಂದನೆ ಹೇಳಿದ್ದು ನಮಗೆ ಅಚ್ಚರಿಯ ಸಂಗತಿಯಾಗಿತ್ತು. ಮಕ್ಕಳಿಂದ ನಮ್ಮನ್ನು ಬಿಡಿಸಿಕೊಂಡು ಬಂದ ಸತ್ಯನಾರಾಯಣ್, "ಎಳೆಯ ತಮ್ಮ-ತಂಗಿಯರನ್ನೂ ಶಾಲೆಗೆ ಕರೆತರುವಂತೆ ನಾವು ನಮ್ಮ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುತ್ತೇವೆ. ಆ ಪುಟ್ಟಮಕ್ಕಳು ಶಾಲೆಯ ವಾತಾವರಣಕ್ಕೆ ಹೊಂದಿಕೊಳ್ಳತೊಡಗಿ ಐದು ವರ್ಷ ತುಂಬಿದ ಕೂಡಲೇ ಶಾಲೆಗೆ ಸೇರುತ್ತಾರೆ. ಇದು ಬಹಳ ಕಾರ್ಯಸಾಧುವೂ ಉಪಯುಕ್ತವೂ ಆಗಿದೆ. ನಮಗೆ ಇದರಿಂದ ಒಳ್ಳೆಯ ಪ್ರತಿಫಲವೂ ಸಿಕ್ಕಿದೆ" ಎಂದರು. ಸತ್ಯನಾರಾಯಣ್ ನಮಗೆ ಸಹೋದ್ಯೋಗಿಯಾದ ಅರುಣಾ ಶರ್ಮ ಅವರನ್ನು ಪರಿಚಯಿಸಿದರು. ಅರುಣಾ ಶರ್ಮಾ ಕೂಡಾ ತಮ್ಮ ಮುಖ್ಯೋಪಾಧ್ಯಾಯರಂತೆಯೇ ಎಂ.ಎ., ಬಿ.ಎಡ್. ಮಾಡಿದ್ದಾರೆ. ಅವರಿಬ್ಬರೂ ಜೊತೆಯಾಗಿ ಐದೂ ತರಗತಿಗಳ ಎಲ್ಲಾ ವಿಷಯಗಳನ್ನೂ ಬೋಧಿಸುತ್ತಾರೆ.

ಅವರಿಬ್ಬರೊಳಗೆ ಅತ್ಯುತ್ತಮ ಹೊಂದಾಣಿಕೆಯಿದೆ. ಪರಸ್ಪರ ಗೌರವ, ಬುಬಾರಿಯಾಫಲಿಯ ಶಾಲೆಯನ್ನು ಒಂದು ಉತ್ಕೃಷ್ಟ ಶಾಲೆಯಾಗಿ ಮಾಡಬೇಕೆಂಬ ಸಮಾನ ಧ್ಯೇಯ ಇವೇ ಅವರಿಬ್ಬರ ಸಂಬಂಧದ ಗಟ್ಟಿಯಾದ ನೆಲೆ. 2007ರಲ್ಲಿ ಅರುಣಾ ಅವರ ಮೊಟ್ಟಮೊದಲ ನೇಮಕಾತಿಯೇ ಬುಬಾರಿಯಾಫಲಿಯಲ್ಲಿ. ಆಗ ಅವರು ಇಲ್ಲಿ ಏಕೈಕ ಶಿಕ್ಷಕಿಯಾಗಿದ್ದರು. ಅವರಿಗಿಂತ ಮೊದಲು ಅಲ್ಲಿಗೆ ನಿಯೋಜನೆಯಲ್ಲಿ ಬಂದು ಕೆಲಸ ಮಾಡಿದ ಶಿಕ್ಷಕರು ತೀರಾ ಅನಾಸಕ್ತಿಯಿಂದ ಶಾಲೆ ನಡೆಸಿದ್ದರು. ಹತ್ತಿರದಲ್ಲೇ ಒಂದು ಖಾಸಗಿ ಶಾಲೆಯೂ ಅನತಿ ದೂರದಲ್ಲಿ ಬೇರೆ ಸರ್ಕಾರಿ ಶಾಲೆಗಳೂ ಇದ್ದುದರಿಂದ ಶಾಲೆಯಲ್ಲಿ ಹೆಚ್ಚಿಗೆ ಮಕ್ಕಳು ನೋಂದಾಯಿತರಾಗಿರಲಿಲ್ಲ. ಇಂಥ ಪ್ರತಿಕೂಲ ಪರಿಸ್ಥಿತಿಗಳೊಂದಿಗೆ ಆಕೆ ಸೆಣೆಸಾಟ ನಡೆಸುತ್ತಿದ್ದಾಗಲೇ ಸತ್ಯನಾರಾಯಣ್ ಅಲ್ಲಿಗೆ ಮುಖ್ಯೋಪಾಧ್ಯಾಯರಾಗಿ ಬಂದರು. ಆತ ಒಬ್ಬ ಕ್ರಿಯಾಶೀಲ, ಉತ್ಸಾಹಿ ಶಿಕ್ಷಕ ಎಂಬುದನ್ನು ಆಕೆ ಕಂಡುಕೊಂಡರು. ಇಬ್ಬರೂ ಒಂದಾಗಿ ಆ ಶಾಲೆಯನ್ನು ಪರಿವರ್ತಿಸುವ ಕೆಲಸವನ್ನು ಕೈಗೆತ್ತಿಕೊಂಡರು.

ಇದರಲ್ಲಿ ಮೊದಲ ಹೆಜ್ಜೆ ಸುತ್ತಲಿನ ಸಮುದಾಯದ ವಿಶ್ವಾಸವನ್ನು ಮತ್ತೆ ಪಡೆಯುವುದು. ಸತ್ಯನಾರಾಯಣ್ ಪ್ರತಿಯೊಂದು ಮನೆಗೂ ಭೇಟಿ ನೀಡಿ ಪೋಷಕರೊಂದಿಗೆ ಸಂಬಂಧಗಳನ್ನು ಬೆಳೆಸಿಕೊಳ್ಳಲು ನಿರ್ಧರಿಸಿದರು. ಪ್ರತಿ ತಿಂಗಳೂ ಪೋಷಕ–ಶಿಕ್ಷಕ ಸಭೆಗಳನ್ನು ನಡೆಸಿದರು. ಸ್ವಾತಂತ್ರ್ಯ ದಿನಾಚರಣೆ ಮತ್ತು ಗಣರಾಜ್ಯೋತ್ಸವದ ಸಂದರ್ಭಗಳಲ್ಲಿ ಅತ್ಯಂತ ಲವಲವಿಕೆಯ ಕಾರ್ಯಕ್ರಮಗಳನ್ನು ನಡೆಸಿದರು. ಅವರ ಮಾತಿನಲ್ಲೇ ಹೇಳಬೇಕೆಂದರೆ "ಶಿಕ್ಷಣ ಉತ್ಸವದ ಸಂಸ್ಕೃತಿಯನ್ನು ಹುಟ್ಟುಹಾಕಿ ಸಮುದಾಯಕ್ಕೆ ಮಕ್ಕಳ ಕಲಿಕೆಯ ವಿಷಯದಲ್ಲಿ ಗಂಭೀರವಾಗಿ ತೊಡಗಿಸಿ ಕೊಂಡಿದ್ದೇವೆ" ಎಂಬುದನ್ನು ತೋರಿಸಿಕೊಟ್ಟರು. ಅರುಣಾ ಮತ್ತು ಸತ್ಯನಾರಾಯಣ ಇಂಥ ಸಮಾರಂಭಗಳಲ್ಲಿ ಬಹುಮಾನದ ವಸ್ತುಗಳನ್ನು ತರಲು ತಮ್ಮದೇ ಹಣ ವಿನಿಯೋಗಿಸಿ, ಅವುಗಳ ವಿತರಣೆಗೆ ಪೋಷಕರನ್ನೂ ಕರೆದರು. ತಾವು ಆರಂಭದ ದಿನಗಳಲ್ಲಿ ಸಮುದಾಯದ ವಿಶ್ವಾಸವನ್ನು ಮತ್ತೆ ಗಳಿಸಿಕೊಳ್ಳಲು ಮಾಡಿದ ಪ್ರಯತ್ನಗಳನ್ನು ನೆನಪಿಸಿಕೊಳ್ಳುತ್ತಾ "ಶಾಲಾ ಸಮಯ ಮುಗಿದ ಮೇಲೆ ನಾನು ಪೇಟೆಯಲ್ಲಿ ಕೂಡಾ ಪೋಷಕರನ್ನು ಭೇಟಿ ಮಾಡುತ್ತಿದ್ದದ್ದು ಉಂಟು........" ಎನ್ನುತ್ತಾರೆ ಸತ್ಯನಾರಾಯಣ.

ಶಿಕ್ಷಕರು ನುಡಿದಂತೆ ನಡೆದರು. "ನಾವು ಎಲ್ಲರಿಗೂ ಕಾಣುವಂತೆ, ಪರಿಶ್ರಮದಿಂದ ಕೆಲಸ ಮಾಡಿದೆವು. ಆ ದಿನಗಳಲ್ಲಿ ಇದು ಕಲ್ಲು ತುಂಬಿದ ಗಟ್ಟಿಯಾದ ಭೂಮಿಯಾಗಿತ್ತು" ಎಂದು ಅವರು ಸಾಕಷ್ಟು ವಿಸ್ತಾರವಾದ, ಸಮತಟ್ಟಾದ ಶಾಲಾಮೈದಾನವನ್ನು ತೋರಿಸಿ ಹೇಳುತ್ತಾರೆ. ತಾವೇ ಸ್ವತಃ ಹಣಹಾಕುತ್ತಾ, ಕೈಯಾರೆ ಕೆಲಸಮಾಡುತ್ತಾ, ಹಳ್ಳಿಯ ಸರಪಂಚರನ್ನೂ ತೊಡಗಿಸಿಕೊಂಡು ಮೈದಾನವನ್ನು ಸಪಾಟು ಮಾಡಿದರು, ಸಿಮೆಂಟ್ ಹಾಕಿಸಿದರು; ಸುತ್ತಲೂ ಕಾಂಪೌಂಡ್ ಎಬ್ಬಿಸಿ ಶಾಲೆಗೆ ಭದ್ರತೆಯನ್ನು ಒದಗಿಸಿದರು. ಇದಕ್ಕಾಗಿ ಸರ್ವಶಿಕ್ಷಾ ಅಭಿಯಾನದ ಹಣವನ್ನು ತಂದದ್ದಲ್ಲದೆ ಪಂಚಾಯಿತಿಯಿಂದಲೂ ಸಂಪನ್ಮೂಲವನ್ನು ಸೇರಿಸಿದರು. ಶಾಲೆಗೆ ವಿದ್ಯುದ್ದೀಪಗಳು ಮತ್ತು ಪಂಖಗಳು ಬೇಕಾಗಿತ್ತು, ಇದಕ್ಕೆ ಅರುಣಾ ಮತ್ತು ಸತ್ಯನಾರಾಯಣ್ ಸಂತೋಷದಿಂದಲೇ ತಲಾ ಐದು ಸಾವಿರ ರೂಪಾಯಿ ಹಾಕಿದರು.

ಇದೇ ವೇಳೆ ಇಬ್ಬರು ಶಿಕ್ಷಕರೂ ಮಕ್ಕಳ ಕಲಿಕೆಯ ಮಟ್ಟವನ್ನು ಸುಧಾರಿಸಲು ಗಮನವನ್ನು ಕೇಂದ್ರೀಕರಿಸಿದರು. ಸತ್ಯನಾರಾಯಣ್ ಹೇಳುತ್ತಾರೆ, "ನಾವು ಗುಣಮಟ್ಟದ ಬಗ್ಗೆ ಗಮನ ಕೊಟ್ಟೆವು. ಅಂದರೆ ನಮ್ಮ ಪ್ರಕಾರ ಇದರ ಅರ್ಥ, ಮಕ್ಕಳು ತಮ್ಮ ಗ್ರಹಿಕೆಯನ್ನು ಉತ್ತಮಪಡಿಸಿಕೊಳ್ಳಬೇಕು. ಅಭಿವ್ಯಕ್ತಿ ಸಾಮರ್ಥ್ಯವನ್ನು ಗಳಿಸಬೇಕು ಹಾಗೂ ಸ್ವತಂತ್ರವಾಗಿ ತಾವೇ ಕಂಡುಕೊಳ್ಳಬೇಕು. ಆರಂಭದ ವರ್ಷಗಳಲ್ಲಿ ಮಕ್ಕಳ ಆಸಕ್ತಿಯನ್ನು ಅರಳಿಸಿ ಅವರನ್ನು ತೊಡಗಿಸಿಕೊಳ್ಳಲು ಚಟುವಟಿಕೆಗಳು ಬೇಕು ಎಂಬುದು ನಮಗೆ ಗೊತ್ತಿತ್ತು. ಪಠ್ಯಪುಸ್ತಕಗಳು ಕೇವಲ ಆಧಾರ ಅಷ್ಟೇ. ಆದರೆ ನಮ್ಮ ಗುರಿ, ಮಕ್ಕಳು ಪಠ್ಯವಿಷಯಗಳನ್ನು ಕಲಿತುಕೊಳ್ಳಬೇಕಾದುದರ ಉದ್ದೇಶದ ಜೊತೆ ಪಠ್ಯವನ್ನೂ ಪಠ್ಯಕ್ರಮವನ್ನೂ ಬೆಸೆಯುವುದು." 'ರೂಮ್ ಟು ರೀಡ್'ನಿಂದ ಶಾಲೆಗೆ ಸಾವಿರದ ಐನೂರು ಪುಸ್ತಕಗಳು ಕೊಡುಗೆಯಾಗಿ ಬಂದದ್ದನ್ನು ಅವರು ಕೃತಜ್ಞತೆಯಿಂದ ಸ್ಮರಿಸುತ್ತಾರೆ. ಅರುಣಾ ಹೇಳುತ್ತಾರೆ, "ಓದುವ ಅಭ್ಯಾಸವು, ಜೀವನ ಪರ್ಯಂತ ಕಲಿಯುವಿಕೆಯ ಮುಖ್ಯಭಾಗ. ಮಕ್ಕಳು ಓದುವುದನ್ನು ಆನಂದಿಸಲು ತೊಡಗಿದರೆ ನಮ್ಮ ಕೆಲಸ ನೂರುಪಾಲು ಕಡಿಮೆಯಾಗುತ್ತದೆ." ಆಕೆ ನಮ್ಮನ್ನು ಗ್ರಂಥಾಲಯವೂ ಆಗಿರುವ ತರಗತಿ ಕೊಠಡಿಗೆ ಕರೆದೊಯ್ದು ಅಲ್ಲಿಟ್ಟಿರುವ ರಿಜಿಸ್ಟರ್ ಪುಸ್ತಕವೊಂದನ್ನು ತೋರಿಸಿದರು. ಅದರಲ್ಲಿ ಮಕ್ಕಳು ತೆಗೆದುಕೊಂಡಿರುವ ಪುಸ್ತಕಗಳ ವಿವರ ಇತ್ತು. ಬೆಳಗಿನ ಸಾಮಾನ್ಯ ಸಭೆಯಲ್ಲಿ ಮತ್ತು ಶನಿವಾರದ ಮಧ್ಯಾಹ್ನ ಮಕ್ಕಳಿಗೆ ತಾವು ಓದಿರುವ ಕತೆಗಳನ್ನು ಹೇಳಲು ಅವಕಾಶವಿರುತ್ತದೆ.

ಇನ್ನು ಈ ಬೆಳಗಿನ ಸಭೆಗಳು ಹೇಗಿರುತ್ತವೆ ಎಂಬುದನ್ನು ನೋಡೋಣ. ಮೂವತ್ತು ನಿಮಿಷಗಳ ಆ ಸಭೆಯಲ್ಲಿ ಪುಟ್ಟ ಭಾಷಣ, ಮಗ್ಗಿ, ಸಾಮಾನ್ಯ ಜ್ಞಾನ, ಮಾನಸಿಕ ಗಣಿತ, ಇಂಗ್ಲಿಷ್ ನುಡಿಗಟ್ಟುಗಳು, ಮಕ್ಕಳು ಓದಿದ ಪುಸ್ತಕಗಳ ಕಥೆಗಳು ಇವೆಲ್ಲಕ್ಕೂ ಅವಕಾಶವಿರುತ್ತದೆ. ಇಬ್ಬರೂ ಶಿಕ್ಷಕರು ಈ ಸಭೆಗೆ ತುಂಬಾ ಮಹತ್ವವನ್ನು ನೀಡುತ್ತಾರೆ. ಸತ್ಯನಾರಾಯಣ್ ಒಂದು ಆಸಕ್ತಿದಾಯಕ ವಿಷಯವನ್ನು ಹೇಳಿದರು, "ಮಕ್ಕಳ ಅಂದಿನ ಮನ:ಸ್ಥಿತಿ ಹೇಗಿದೆ ಎಂಬುದು ನನಗೆ ಬೆಳಗಿನ ಸಾಮಾನ್ಯ ಸಭೆಯಲ್ಲೇ ಗೊತ್ತಾಗುತ್ತದೆ". ಇದನ್ನು ಗ್ರಹಿಸಿದ ಸತ್ಯನಾರಾಯಣ್ ಮತ್ತು ಅರುಣಾ ಅಂದಿನ ಚಟುವಟಿಕೆಗಳು ಏನೇನಿರಬೇಕು, ಕಲಿಕೆ ಹೇಗೆ ಸಾಗಬೇಕು ಎಂಬುದನ್ನು ಸೂಕ್ಷ್ಮವಾಗಿ ಯೋಜಿಸುತ್ತಾರೆ. ಶನಿವಾರ ನಡೆಯುವ 'ಬಾಲಸಭಾ'ಗಳಿಗೆ ಮಕ್ಕಳು ಕಾತರದಿಂದ ಕಾಯುತ್ತಾರೆ. ಅಲ್ಲಿ ಅವರು ಹಾಡು, ನೃತ್ಯ, ಕಥೆ ಹೇಳುವುದು, ನಟನೆ ಮುಂತಾದ ಎಲ್ಲಾ ಪ್ರತಿಭೆಗಳನ್ನೂ ಪ್ರದರ್ಶಿಸಲು ಅವಕಾಶ ದೊರೆಯುತ್ತದೆ. ಶನಿವಾರ ಇಂಥ ಕಾರ್ಯಕ್ರಮಗಳನ್ನು ನಿಗದಿ ಪಡಿಸುವುದರಿಂದ ಮಕ್ಕಳಲ್ಲಿ ಇಡಿಯ ವಾರ ಒಂದು ರೀತಿಯ ನಿರೀಕ್ಷೆ, ಉತ್ಸಾಹ ಇರುತ್ತದೆ ಎಂದು ಅರುಣಾ ಹೇಳುತ್ತಾರೆ. ಪ್ರತಿದಿನ ಕಡೆಯ ಪೀರಿಯಡ್ ಅನ್ನು ಶಿಕ್ಷಕರು ಹೋಂವರ್ಕ್‌ಗಾಗಿ ಉಪಯೋಗಿಸಿಕೊಳ್ಳುತ್ತಾರೆ. ಮಕ್ಕಳಿಗೆ ಮನೆಯಲ್ಲಿ ಕಲಿಯುವ ವಾತಾವರಣ ತೀರಾ ಕಡಿಮೆ ಇರುತ್ತದೆ ಅಥವಾ ಇರುವುದೇ ಇಲ್ಲ ಎಂಬುದನ್ನು ಅರಿತ ವಾಸ್ತವವಾದಿಗಳಾದ ಶಿಕ್ಷಕರು ಹೋಂವರ್ಕ್ ಅನ್ನು ಶಾಲೆಯಲ್ಲಿಯೇ ಮಾಡಿಸುತ್ತಾರೆ.

"ನಾನು ಅವರಿಗೆ ದಶಮಾಂಶ ಮುಂತಾದವುಗಳನ್ನು ಕಲಿಸಲು ಯತ್ನಿಸುವುದಿಲ್ಲ,

ಅದು ಅವರಿಗೆ ತೀರಾ ಕಷ್ಟಕರ. ಅವರು ಓಡಿಹೋಗುತ್ತಾರೆ" ಎಂದು ಸತ್ಯನಾರಾಯಣ ನಗುತ್ತಾರೆ. ಆ ನಗುವಿನ ಹಿಂದೆ ಇರುವ ಪ್ರಾಮಾಣಿಕತೆ, ಅನೇಕ ವರ್ಷಗಳ ಕಾಲ ಮಕ್ಕಳೊಂದಿಗೆ ಕೆಲಸ ಮಾಡಿ ಅವರ ಗ್ರಹಣ ಶಕ್ತಿಯ ಕುರಿತು ಪಡೆದುಕೊಂಡಿರುವ ಆಳವಾದ ತಿಳಿವಳಿಕೆಯಿಂದ ಬಂದಿರುವಂಥದ್ದು. ಸತ್ಯನಾರಾಯಣರಿಗೆ ಒಳ್ಳೆಯ ಶಿಕ್ಷಕನೆಂದು ಇಡಿಯ ತಾಲ್ಲೂಕಿನಲ್ಲಿಯೇ ಹೆಸರಿದೆ. ಅವರ 'ಸ್ಥಾನಿಕಮೌಲ್ಯ'ದ ತರಗತಿಗಳು ಮಾರ್ಗದರ್ಶಕವೆಂದು ಪ್ರಸಿದ್ಧವಾಗಿರುವುದನ್ನು ಇಲ್ಲಿ ಹೆಸರಿಸಲೇಬೇಕು. ಪ್ರತಿಯೊಂದು ಮಗುವೂ ಕಲಿಯಬೇಕು ಎನ್ನುವ ಆಸಕ್ತಿಯನ್ನು ಹೊಂದಿರುವ ಸತ್ಯನಾರಾಯಣ್ ಕೆಲವು ಮಕ್ಕಳಲ್ಲಿ ಇರುವ ವಿಶೇಷ ಸಾಮರ್ಥ್ಯಗಳನ್ನು ಗುರುತಿಸುತ್ತಾರೆ. ಅಂಥವರಿಗೆ ಮಾನಸಿಕ ಗಣಿತ ಮತ್ತು ಹೆಚ್ಚು ಆಳವಾದ ಚಿಂತನೆಯನ್ನು ಬೇಡುವಂಥ ವಿಷಯಗಳಲ್ಲಿ ಹೆಚ್ಚಿನ ಸವಾಲಿನ ಪ್ರಶ್ನೆಗಳನ್ನು ಕೇಳುತ್ತಾರೆ. ನವೋದಯ ಶಾಲೆಯ ಪರೀಕ್ಷೆಗಳಿಗೆ ಮೂರು– ನಾಲ್ಕು ಮಕ್ಕಳನ್ನಾದರೂ ತಯಾರು ಮಾಡಬೇಕೆಂಬುದು ಅವರ ಇರಾದೆ. ಇದರಲ್ಲಿ ಅವರಿಗೆ ಹಿಂದೆ ಕೆಲವೊಮ್ಮೆ ಯಶಸ್ಸು ಸಿಕ್ಕಿದೆ, ಆದರೆ ಇದನ್ನು ಪ್ರತಿವರ್ಷದ, ಸತತವಾದ ಗುರಿಯನ್ನಾಗಿ ಮಾಡಿಕೊಳ್ಳಬೇಕೆಂದು ಅವರು ಪ್ರಯತ್ನಿಸುತ್ತಿದ್ದಾರೆ. ಬುಬಾರಿಯಾಫಲಿಗೆ ಸಂಬಂಧಿಸಿದಂತೆ ಅವರಿಗೆ ಅತಿ ಹೆಚ್ಚು ತೃಪ್ತಿ ನೀಡುವ ವಿಷಯ ಯಾವುದೆಂದು ಅವರ ಮಾತಿನಲ್ಲೇ ಕೇಳೋಣ, "ಐದನೆಯ ತರಗತಿಯಲ್ಲಿ ಇರುವ ಎಲ್ಲಾ ಮಕ್ಕಳು ತೇರ್ಗಡೆಯಾಗಿ ಆರನೆಯ ತರಗತಿಗೆ ಅಂದರೆ ಹಿರಿಯ ಪ್ರಾಥಮಿಕ ಶಾಲೆಗೆ ದಾಖಲಾಗುವುದು." ಸತ್ಯನಾರಾಯಣ್ ಹೇಳುತ್ತಾರೆ, "ನಮ್ಮ ಕೆಲವು ಮಕ್ಕಳು ಪ್ರೌಢಶಾಲೆಗೆ, ಕಾಲೇಜಿಗೆ ಹೋಗಿದ್ದಾರೆ. ಈ ಮಕ್ಕಳು ಒಳ್ಳೆಯ ಕಲಿಕಾಮಟ್ಟವನ್ನು ಸಾಧಿಸಿಕೊಂಡು, ಸ್ವತಂತ್ರವಾಗಿ ಕಲಿಯುವ ಶಕ್ತಿಯನ್ನು ಗಳಿಸಿಕೊಂಡು ಹೋಗಿದ್ದಾರೆ. ಆದ್ದರಿಂದ ಅವರಿಗೆ ಉನ್ನತ ತರಗತಿಗಳಲ್ಲಿ ತೊಂದರೆಯಾಗುವುದಿಲ್ಲ."

ಸತ್ಯನಾರಾಯಣ್ ದೃಢಸಂಕಲ್ಪದ ಮನುಷ್ಯ, ಬದುಕಿನಲ್ಲೂ ಆಯ್ದುಕೊಂಡ ವೃತ್ತಿಯಲ್ಲೂ ಹೋರಾಟಗಾರ. ಸಮುದಾಯದೊಂದಿಗಿನ ಅವರ ಬಾಂಧವ್ಯ ಪ್ರಾಯಶಃ ಹಿಂದೆಂದಿಗಿಂತಲೂ ಈಗ ಗಟ್ಟಿಯಾಗಿದೆ. ಸಮುದಾಯದ ಜನರನ್ನು ಕುರಿತಾದ ಈ ಶಿಕ್ಷಕನ ಸ್ಪಂದನೆ ನಿಜವಾದದ್ದು. "ಅವರಲ್ಲಿ ಶೇಕಡಾ ಐವತ್ತರಷ್ಟು ಮಂದಿ ಬಡ ಕೂಲಿಗಾರರು, ನೀರಾವರಿ ತೀರಾ ದುರ್ಲಭವಿರುವ ಭೂಮಿಯಲ್ಲಿ ಕೆಲಸ ಮಾಡುತ್ತಾರೆ. ಇನ್ನು ಅರ್ಧಾಂಶ ಮಂದಿ ಆರ್ಥಿಕವಾಗಿ ಸ್ವಲ್ಪ ಹೆಚ್ಚು ಸಬಲರು; ತಾವು ಬೆಳೆದ ತರಕಾರಿಗಳನ್ನು ಯಾವ ಮಧ್ಯವರ್ತಿಯೂ ಇಲ್ಲದೆ ಅಬುರೋಡ್‌ನ ಮಾರುಕಟ್ಟೆಯಲ್ಲಿ ಮಾರುತ್ತಾರೆ. ನಾನು ಸಮುದಾಯದ ಪ್ರತಿಯೊಬ್ಬರಿಗೂ ಸಲ್ಲತಕ್ಕವನು. ಈ ಶಾಲೆ ಅವರದ್ದು. ಆದ್ದರಿಂದ ನಾವು ಅವರ ಮಕ್ಕಳಿಗೆ ಸಾಧ್ಯವಾದದ್ದನ್ನೆಲ್ಲಾ ಮಾಡಬೇಕು." ನಾವು ಶಾಲೆ ಬಿಡುವ ವೇಳೆಗೆ ಮಕ್ಕಳೆಲ್ಲಾ ತಮ್ಮ ಇಬ್ಬರು ಶಿಕ್ಷಕರ ಸುತ್ತ ಸೇರಿ ಖುಷಿಯಾಗಿ ಹರಟುತ್ತಾ ಆರಾಮವಾಗಿದ್ದರು. ಶಿಕ್ಷಕರಿಗೆ ಅವರ ಗಲಾಟೆಯ ಬಗ್ಗೆ ಯಾವ ತಕರಾರೂ ಇದ್ದಂತಿರಲಿಲ್ಲ, ಮಕ್ಕಳನ್ನು ಸುಮ್ಮನಾಗಿಸಲು ಅವರು ಪ್ರಯತ್ನಿಸಲೂ ಇಲ್ಲ. ನಿಜಕ್ಕೂ ಇದೊಂದು ಸಂತಸ ಉಕ್ಕುವ ಶಾಲೆಯೇ ಸರಿ.

# ವೈದ್ಯವೃತ್ತಿಯ ಆಕಾಂಕ್ಷಿಯೊಬ್ಬ ಬೋಧನೆಗೆ ತೊಡಗಿದ್ದು – ವಿಧಿವಿಲಾಸವೇ?

**ತಿಲೋಕ್ ಚಂದ್**

ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ
ಬರೇವಡ ಶಿವಗಂಜ್ ಬ್ಲಾಕ್, ಸಿರೋಹಿ, ರಾಜಸ್ಥಾನ

ಮುಖ್ಯೋಪಾಧ್ಯಾಯರಾದ ಮೋಹನಲಾಲ್ ಮೀನಾ ಸೇರಿದಂತೆ ಈ ಶಾಲೆಯಲ್ಲಿ ಆರು ಜನ ಶಿಕ್ಷಕರಿದ್ದಾರೆ. ಬರೇವಡದ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ನೂರಮೂವತ್ತೊಂಬತ್ತು ವಿದ್ಯಾರ್ಥಿಗಳಿದ್ದು ಅದಕ್ಕೆ ರಾಜಸ್ಥಾನ ರಾಜ್ಯ ಶೈಕ್ಷಣಿಕ ಇಲಾಖೆಯ 'ಉತ್ಕೃಷ್ಟ ವಿದ್ಯಾಲಯ' (School of excellence) ಎಂಬ ಪ್ರಶಸ್ತಿ ಬಂದಿದೆ. ಇದನ್ನು ತಾಲ್ಲೂಕಿನ ಅತ್ಯುತ್ತಮ ಶಾಲೆಯೆಂದೂ, ಜಿಲ್ಲೆಯ ನಾಲ್ಕನೆಯ ಅತ್ಯುತ್ತಮ ಶಾಲೆಯೆಂದೂ ತೀರ್ಮಾನಿಸಲಾಗಿದೆ. ಇಲಾಖೆಯ ಮೂವರು ಸದಸ್ಯರ ತಂಡ ಶಾಲೆಗಳನ್ನು ಮೌಲ್ಯಮಾಪನ ಮಾಡುತ್ತದೆ. ಅದರಲ್ಲಿ ರಾಷ್ಟ್ರೀಯ ಮಾಧ್ಯಮಿಕ ಶಿಕ್ಷಾ ಅಭಿಯಾನದ (ಆರ್‌ಎಂಎಸ್‌ಎ) ಅಧಿಕಾರಿ ಮತ್ತು ಇಬ್ಬರು ಶೈಕ್ಷಣಿಕ ಸಂಪನ್ಮೂಲ ವ್ಯಕ್ತಿಗಳು ಇರುತ್ತಾರೆ. ಅವರೆಲ್ಲರೂ ಶಾಲೆಯಲ್ಲಿ ಒಂದು ದಿನ ಇದ್ದು ಅಲ್ಲಿನ ಮೂಲಸೌಕರ್ಯ, ಶುಚಿತ್ವ, ನೈರ್ಮಲ್ಯ ಹಾಗೂ ಪೂರಕ ಸೌಲಭ್ಯಗಳು ಇವುಗಳನ್ನೆಲ್ಲಾ ಅಭ್ಯಾಸ ಮಾಡುವುದಲ್ಲದೆ, ಬೋಧನಾ–ಕಲಿಕಾ ಪ್ರಕ್ರಿಯೆಗಳನ್ನು ಗಮನಿಸುತ್ತಾರೆ. ಮಕ್ಕಳೊಂದಿಗೆ ಮಾತನಾಡಿ ಅವರ ಓದುವ ಸಾಮರ್ಥ್ಯ, ಗ್ರಹಣಶಕ್ತಿ, ಸಾಮಾನ್ಯ ಜ್ಞಾನದಮಟ್ಟ ಇವುಗಳನ್ನೂ ಪರೀಕ್ಷಿಸುತ್ತಾರೆ. ಈ ಎಲ್ಲಾ ವಿಷಯಗಳೂ ಮಹತ್ವದವುಗಳೇ ಸರಿ; ಆದರೆ ಬರೇವಡಕ್ಕೆ ಹೋಗಬೇಕೆಂದು ನನ್ನನ್ನು ಒತ್ತಾಯಿಸಿದ್ದು ಶಿವಗಂಜ್‌ನಲ್ಲಿ ಕೆಲಸಮಾಡುತ್ತಿದ್ದವರ ಸಹೋದ್ಯೋಗಿಗಳು. ಈ ಶಾಲೆಯಲ್ಲಿ ಕೆಲಸ ಮಾಡುತ್ತಿರುವ ತಿಲೋಕ್ ಚಂದ್ ಎಂಬ ಶಿಕ್ಷಕರನ್ನು ಭೇಟಿ ಮಾಡಲೇಬೇಕೆಂದು ಅವರು ನನ್ನನ್ನು ಒತ್ತಾಯಿಸಿದರು.

ನಾವು ಶಾಲೆಗೆ ಹೋದಾಗ ಇನ್ನೂ ಪ್ರಾರ್ಥನಾ ಸಭೆ ಆರಂಭವಾಗಿರಲಿಲ್ಲ. ಹುಡುಗರು ಇನ್ನೂ ತರಗತಿವಾರು ಸಾಲುಗಳಲ್ಲಿ ನಿಲ್ಲುತ್ತಿದ್ದರಷ್ಟೆ. ಧ್ವನಿವರ್ಧಕವೂ ವಾದ್ಯವೃಂದವೂ ಅಣಿಯಾಗುತ್ತಿದ್ದವು. ಎಲ್ಲಾ ಆರೂ ಜನ ಶಿಕ್ಷಕರು ಹಾಜರಿದ್ದರು. ಆಸಕ್ತಿಯ ವಿಷಯವೆಂದರೆ ಕೆಲವು ಹುಡುಗರು ತರಗತಿ ಕೊಠಡಿಗಳನ್ನು ಮತ್ತು ಹಜಾರವನ್ನು ಗುಡಿಸುತ್ತಿದ್ದರು. ಇದು ವಿದ್ಯಾರ್ಥಿಗಳು ಸರತಿಯಲ್ಲಿ ಮಾಡುವ ಕರ್ತವ್ಯ ಎಂದು ನಮಗೆ ತಿಳಿಯಿತು. ಸಾಮಾನ್ಯ ಸಭೆಯನ್ನು ಸಹ ವಿದ್ಯಾರ್ಥಿಗಳ ಒಂದು ತಂಡ ನಡೆಸಿಕೊಂಡು ಹೋಗುತ್ತಿತ್ತು. ಪ್ರತಿವಾರ ಆ ಜವಾಬ್ದಾರಿ ಇನ್ನೊಂದು ತಂಡಕ್ಕೆ ವರ್ಗಾವಣೆಗೊಳ್ಳುತ್ತಿತ್ತು ಆ ಶಾಲೆಯನ್ನು ಬಹಳ ದಕ್ಷತೆಯಿಂದ ನಡೆಸಲಾಗುತ್ತಿದ್ದು, ಅಲ್ಲಿನ ಶಿಕ್ಷಕರು ತಮ್ಮೊಳಗೆ ಅತ್ಯುತ್ತಮ ಬಾಂಧವ್ಯವನ್ನು ಹೊಂದಿದ್ದಾರೆ ಎಂಬುದು

ಮುಂದಿನ ಮೂರು ಗಂಟೆಗಳಲ್ಲಿ ನಮಗೆ ಸ್ಫುಟವಾಯಿತು ಬರೇವಡದ ಶಾಲೆಯು ಒಂದು ಉತ್ಕೃಷ್ಟ ಶಾಲೆಯಾಗಿ ಮುಂದುವರಿಯಲು ಅವರೆಲ್ಲರೂ ತಮ್ಮನ್ನು ತೊಡಗಿಸಿಕೊಂಡಿದ್ದರು; ತಂತಮ್ಮ ಜವಾಬ್ದಾರಿಯ ಅರಿವುಳ್ಳವರಾಗಿದ್ದರು. ಎಲ್ಲ ಶಿಕ್ಷಕರೂ ತರಗತಿಗೆ ತೆರಳಿದ ನಂತರ ನಮಗೆ ಮುಖ್ಯೋಪಾಧ್ಯಾಯರೊಂದಿಗೆ ಮಾತನಾಡಲು ಅವಕಾಶ ದೊರೆಯಿತು. ಅನಂತರ ನಾವು ತಿಲೋಕ್ ಚಂದ್‌ರನ್ನು ಭೇಟಿಯಾದೆವು.

ಮುಖ್ಯೋಪಾಧ್ಯಾಯರಾದ ನಲವತ್ಮೂರರ ವಯಸ್ಸಿನ ಮೋಹನ್‌ಲಾಲ್ ಮೀನಾರವರು ತಮ್ಮ ಆಡಳಿತಾತ್ಮಕ ಜವಾಬ್ದಾರಿಗಳನ್ನು ನಿರ್ವಹಿಸುವುದರೊಂದಿಗೆ ಹಿರಿಯ ಪ್ರಾಥಮಿಕ ತರಗತಿಗಳಿಗೆ ಸಮಾಜ ವಿಜ್ಞಾನವನ್ನು ಬೋಧಿಸುತ್ತಾರೆ. ಅವರು ಈ ಶಾಲೆಗೆ ಬಂದದ್ದು 2014ರಲ್ಲಿ. ಶಾಂತ, ಗಂಭೀರ ಪ್ರಕೃತಿಯ ಇವರಿಗೆ ತನ್ನ ತಂಡ ಅತ್ಯುತ್ತಮವಾದದ್ದು ಎಂದು ಗೊತ್ತಿದೆ. ಈ ತಂಡ ಸದಾ ಸಂತೃಪ್ತಿಯಿಂದ ಇದ್ದು ತನ್ನ ಉದ್ದೇಶದಲ್ಲಿ ತಲ್ಲೀನವಾಗಿರಬೇಕು ಎಂದು ಅವರು ಬಯಸುತ್ತಾರೆ. ಮೃದುವಾಗಿಯೇ ನಿಯಂತ್ರಿಸುವಂಥವರು, ಸೌಮ್ಯ ಆದರೆ ಜಾಗರೂಕ ದೃಷ್ಟಿಯವರು ಎಂದು ಗಮನಿಸಿದರೆ ತಿಳಿಯುತ್ತದೆ. ಶುಚಿತ್ವ, ಮೂಲಸೌಕರ್ಯಗಳು, ಸಮುದಾಯದೊಂದಿಗಿನ ಸಂಬಂಧವನ್ನು ನಿರ್ವಹಿಸುವುದು ಇದೆಲ್ಲಾ ತಮ್ಮ ಜವಾಬ್ದಾರಿಯೆಂದು ಅವರು ಗುರುತಿಸಿಕೊಂಡಿದ್ದಾರೆ. ಹೀಗೆ ಮಾಡುವ ಮೂಲಕ ಅವರು ತಮ್ಮ ಶಿಕ್ಷಕರು ಸಂಪೂರ್ಣವಾಗಿ ಬೋಧನೆಯತ್ತ ಗಮನವನ್ನು ಕೇಂದ್ರೀಕರಿಸಲು ಅನುವು ಮಾಡಿಕೊಟ್ಟಿದ್ದಾರೆ. ಶಾಲೆಯಲ್ಲಿ ಎಂಟು ತರಗತಿ ಕೊಠಡಿಗಳು, ಒಂದು ಕಛೇರಿ, ಉತ್ತಮ ಸ್ಥಿತಿಯಲ್ಲಿರುವ ಶೌಚಾಲಯ, ಒಂದು ಸಾಕಷ್ಟು ವಿಸ್ತಾರವಾದ ಆಟದ ಮೈದಾನ ಎಲ್ಲವೂ ಇವೆ. ಸುತ್ತಲಿನ ಜನಸಮುದಾಯವು ಶ್ರೀಮಂತವಲ್ಲದಿದ್ದರೂ ಶಾಲೆಗೆ ಎಲ್ಲ ರೀತಿಯ ಬೆಂಬಲವನ್ನೂ ನೀಡುತ್ತಿದೆ. ಶಾಲೆಯು ತಮ್ಮ ಮಕ್ಕಳಿಗೆ ತನ್ನಿಂದ ಸಾಧ್ಯವಾದಷ್ಟು ಒಳಿತು ಮಾಡುತ್ತಿದೆ ಎಂಬ ಅರಿವು ಈ ಜನಕ್ಕೆ ಇರುವುದೇ ಅದಕ್ಕೆ ಕಾರಣ. "ಉದಾರಿಗಳಾದ ಈ ಜನ ತಾವಾಗಿಯೇ ಶಾಲೆಗೆ ಕಾಣಿಕೆ ನೀಡಿದ್ದಾರೆ. ತರಗತಿ ಕೊಠಡಿಗಳಿಗೆ ಹಸಿರು ಹಲಗೆಗಳನ್ನು, ಕುಡಿಯುವ ನೀರಿಗೆಂದು ಆರ್.ಓ. ಯಂತ್ರವನ್ನು ನೀಡಿದ್ದಾರೆ. ಇದು ತಮ್ಮದೇ ಶಾಲೆ ಎಂದು ಭಾವಿಸಿ ಎಲ್ಲ ಬೆಂಬಲ ನೀಡಿದ್ದಾರೆ." ಸಮುದಾಯದಿಂದ ಶಾಲೆಗಾಗಿ ಸಂಪನ್ಮೂಲ ಸಂಗ್ರಹಿಸಲು ತಾವು ಸ್ವತಃ ಪಟ್ಟ ಶ್ರಮ ಏನೂ ಅಲ್ಲ ಎಂಬಂತೆ ಮೀನಾ ಮೇಲಿನ ಮಾತುಗಳನ್ನು ಹೇಳಿದರು.

ತಿಲೋಕ್ ಚಂದ್ 2008ರಲ್ಲಿ ಈ ಶಾಲೆಗೆ ಬಂದರು. ಸಿರೋಹಿಯ ವಾಯವ್ಯ ದಿಕ್ಕಿನಲ್ಲಿ ಮುನ್ನೂರ ಇಪ್ಪತ್ತು ಕಿ.ಮೀ ದೂರದಲ್ಲಿರುವ ಜೋಧ್‌ಪುರ ಅವರ ಸ್ವಂತ ಊರು. 'ನೀಲ್ ನಗರ್'ನಲ್ಲಿಯೇ ಹುಟ್ಟಿ ಬೆಳೆದ ತಿಲೋಕ್, ಶಾಲಾ ದಿನಗಳಲ್ಲೇ ಅತ್ಯುತ್ತಮ ವಿದ್ಯಾರ್ಥಿ. ವೈದ್ಯನಾಗಬೇಕೆಂಬ ಹಂಬಲದಿಂದ ಶಾಲಾದಿನಗಳಲ್ಲಿ ವಿಜ್ಞಾನವನ್ನು ಅಭ್ಯಾಸಮಾಡಿದರು. ಕುಟುಂಬದ ಪರಿಸ್ಥಿತಿ ಚೆನ್ನಾಗಿರಲಿಲ್ಲವಾದ್ದರಿಂದ ವೈದ್ಯಕೀಯ ಪ್ರವೇಶ ಪರೀಕ್ಷೆಗೂ ಕಟ್ಟಲಾಗಲಿಲ್ಲ. ವೈದ್ಯನಾಗುವುದು ಸಾಧ್ಯವಿಲ್ಲ ಎಂಬ

ವಾಸ್ತವಿಕತೆಯನ್ನು ಒಪ್ಪಿಕೊಂಡು ಜೀವವಿಜ್ಞಾನದಲ್ಲಿ ಬಿಎಸ್‌ಸಿಯನ್ನು ಪ್ರಥಮ ಶ್ರೇಣಿಯಲ್ಲಿ ಮುಗಿಸಿದರು. ವಿಜ್ಞಾನದ ಪದವೀಧರರಾಗಿ ಹೊರಬಂದ ತರುಣದಲ್ಲೇ ಜೋಧ್‌ಪುರದ ಸರ್ವೋದಯ ಪಬ್ಲಿಕ್ ಶಾಲೆಯಲ್ಲಿ ನಾಲ್ಕು ವರ್ಷಗಳ ಕಾಲ ಐದರಿಂದ ಹತ್ತನೆಯ ತರಗತಿಯವರೆಗೆ ಗಣಿತವನ್ನೂ ವಿಜ್ಞಾನವನ್ನೂ ಕಲಿಸಿದರು. ಆ ನಾಲ್ಕು ವರ್ಷಗಳ ಅನುಭವಕ್ಕೆ ತಾನು ಯಾವತ್ತೂ ಕೃತಜ್ಞ ಎಂದು ತಿಲೋಕ್ ಹೇಳುತ್ತಾರೆ. ಹಿರಿಯ ಪ್ರಾಥಮಿಕ ಮತ್ತು ಪ್ರೌಢಶಾಲೆಗೆ ಪಾಠ ಮಾಡಿದ್ದರಿಂದ ತಮ್ಮ ಮೂಲಾಧಾರ ಕೌಶಲಗಳು ಪುಷ್ಟಿಗೊಂಡವು ಎಂದು ಅವರು ಭಾವಿಸಿದ್ದಾರೆ. ಇದರಿಂದಾಗಿಯೇ ತಾನು ರಾಜ್ಯದ ಶಿಕ್ಷಣ ಇಲಾಖೆಗೆ ಆಯ್ಕೆಯಾದೆ ಎಂದು ಹೇಳುತ್ತಾರೆ. ಸರ್ವೋದಯ ಶಾಲೆಯ ಅನುಭವವಾದ ಮೇಲೆ ತಿಲೋಕ್‌ಗೆ ತನ್ನ ಬದುಕನ್ನು ಶಿಕ್ಷಕನಾಗಲಿಕ್ಕೇ ಮೀಸಲಿಡಬೇಕು ಅನ್ನಿಸಿತಂತೆ. ಅಲ್ಲಿಂದಾಚೆಗೆ ಅವರು ಧೈರ್ಯದಿಂದ ಮುಂದಡಿ ಇಟ್ಟು, ಜಮ್ಮುವಿನಲ್ಲಿರುವ ಡೋಗ್ರಾದ ಶೈಕ್ಷಣಿಕ ಕಾಲೇಜಿಗೆ ಸೇರಿ ಬಿಎಡ್ ಪದವಿಯನ್ನು ಮುಗಿಸಿದರು. "ಬಿಎಡ್ ಇಂಗ್ಲಿಷ್ ಮಾಧ್ಯಮದಲ್ಲಿತ್ತು. ನಾನು ಹಿಂದಿ ಮಾಧ್ಯಮದಿಂದ ಬಂದಿದ್ದೆ. ಆರಂಭದಲ್ಲಿ ನನಗಿದು ತುಂಬಾ ಕಠಿಣ ಎನಿಸಿತು. ಆದರೆ ಪರಿಶ್ರಮದ ಕೌಟುಂಬಿಕ ಹಿನ್ನೆಲೆಯಿಂದ ಬಂದ ನಾನು ಕಷ್ಟಪಟ್ಟು ದುಡಿಯಬಲ್ಲೆ. ನನ್ನ ಅರವತ್ತೆರಡು ವರ್ಷದ ತಂದೆಯವರು ಇಂದಿಗೂ ಸಹ ಒಳ್ಳೆಯ ಬಡಗಿಯಾಗಿ ದುಡಿಯುತ್ತಿದ್ದಾರೆ. ಹೀಗಾಗಿ ನಾನು ಶ್ರಮವಹಿಸಿ ನಾಲ್ಕನೆಯ ರ್‍ಯಾಂಕ್ ಪಡೆದೆ" ಎಂದು ತಿಲೋಕ್ ತಾನು ಶಿಕ್ಷಕ ವೃತ್ತಿಗೆ ಬಂದ ಹಿನ್ನೆಲೆಯನ್ನು ಹೇಳಿದರು. ತಿಲೋಕ್ 2008ರ ಮಾರ್ಚ್‌ನಲ್ಲಿ ರಾಜಸ್ಥಾನ್ ಶೈಕ್ಷಣಿಕ ಸೇವೆಯನ್ನು ಸೇರಿದರು. ಅವರ ಮೊದಲ ನೇಮಕಾತಿ ಬಾರೆವಾಡಕ್ಕೆ ಆಗಿದ್ದು, ಅವರು ಅಲ್ಲಿಯೇ ದುಡಿಯುತ್ತಿದ್ದಾರೆ. ಅಷ್ಟು ಹೊತ್ತಿಗೆ ಮದುವೆಯಾಗಿದ್ದ ತಿಲೋಕ್ ಮಡದಿ ಮತ್ತು ಪುಟ್ಟ ಮಗುವನ್ನು ಜೋಧ್‌ಪುರದಲ್ಲಿಯೇ ಬಿಟ್ಟು, ಬಾರೇವಾಡದಿಂದ ಮೂರು ಕಿ.ಮೀ ದೂರದಲ್ಲಿರುವ ಪಾಲಡಿಯಲ್ಲಿ ಮನೆ ಮಾಡಿಕೊಂಡು ತಮ್ಮ ಕೆಲಸದಲ್ಲಿ ಸಂಪೂರ್ಣವಾಗಿ ಮುಳುಗಿಹೋದರು. ಮೂರು ವರ್ಷಗಳ ನಂತರ ಅವರು ತಮ್ಮ ಕುಟುಂಬವನ್ನು ಪಾಲಡಿಗೆ ಕರೆತಂದರು. ಅವರ ದೊಡ್ಡ ಮಗ ಪಾಲಡಿಯ ಸರ್ಕಾರಿ ಶಾಲೆಯಲ್ಲಿ ಏಳನೆಯ ತರಗತಿಯಲ್ಲಿ ಓದುತ್ತಿದ್ದಾನೆ. ನಾವು "ನಿಮ್ಮ ಮಗ ನಿಮ್ಮ ಶಾಲೆಯಲ್ಲಿ ಏಕೆ ಓದುತ್ತಿಲ್ಲ" ಎಂದು ಕೇಳಿದೆವು. "ನಾನು ನನ್ನ ಸಹೋದ್ಯೋಗಿ ವೀರಾರಾಮ್‌ರ ಬೈಕಿನ ಹಿಂದೆ ಕೂತು ಬರುತ್ತೇನೆ. ಅವನನ್ನು ಹೇಗೆ ಕರೆತರಲಿ?" ಎಂದರು. "ಅವನು ಓದುವ ಶಾಲೆ ಮನೆಯಿಂದ ಕಾಲ್ನಡಿಗೆಯ ದೂರದಲ್ಲಿದೆ" ಎಂದು ವಿವರಿಸಿದರು.

ಬರೇವಡದಲ್ಲಿ ತಿಲೋಕ್ ಆರು, ಏಳು ಮತ್ತು ಎಂಟನೇ ತರಗತಿಗಳಿಗೆ ವಿಜ್ಞಾನ ಮತ್ತು ಗಣಿತವನ್ನು ಕಲಿಸಲಾರಂಭಿಸಿದರು. ನಂತರ ತಮಗೆ ಪ್ರಾಥಮಿಕ ಶಾಲೆಯ ಮಕ್ಕಳಿಗೂ ಗಣಿತವನ್ನು ಹೇಳಿಕೊಡುವ ಅವಕಾಶ ನೀಡಬೇಕೆಂದು ಹೆಚ್ಚು ಕಡಿಮೆ ಒತ್ತಾಯಪೂರ್ವಕವಾಗಿಯೇ ಕೇಳಿಕೊಂಡರು. ಅದಕ್ಕೆ ಕಾರಣವೇನೆಂದು ಅವರು ನಮಗೆ ಹೀಗೆ ಹೇಳಿದರು: "ಹಿಂದುಳಿದ ಹಿನ್ನೆಲೆಯಿಂದ ಬರುವ ಮಕ್ಕಳಿಗೆ ಚಿಕ್ಕವಯಸ್ಸಿನ

ಕಲಿಕೆ ಬಹಳ ಮುಖ್ಯವಾದದ್ದು. ಮಕ್ಕಳಿಗೆ ಗಣಿತದಲ್ಲಿ ಭದ್ರವಾದ ಬುನಾದಿಯನ್ನು ಒದಗಿಸಬೇಕೆಂಬುದು ನನ್ನ ಇಚ್ಛೆ. ಇಲ್ಲಿ ಶೇಕಡಾ 60ರಷ್ಟು ಪೋಷಕರು ಅನಕ್ಷರಸ್ಥರು. ಗಂಡಸರು ಒಂದೋ ಕಟ್ಟಡ ಕಾರ್ಮಿಕರಾಗಿದ್ದಾರೆ ಅಥವಾ ಮನರೇಗಾ ಯೋಜನೆಯ ಅಡಿಯಲ್ಲಿ ಕೆಲಸ ಮಾಡುತ್ತಿದ್ದಾರೆ. ಅವರು ಕೆಲಸಕ್ಕಾಗಿ ವಲಸೆ ಹೋಗುತ್ತಾರೆ, ಮುಖ್ಯವಾಗಿ ಗುಜರಾತ್‌ಗೆ. ಹಾಗಾಗಿ ಪೋಷಕ ಶಿಕ್ಷಕ ಸಭೆಗೆ ಬರುವವರು, ಸುಮಾರು ಶೇಕಡಾ 40ರಷ್ಟು ಮಹಿಳೆಯರೇ." ಒಟ್ಟಿನಲ್ಲಿ ಕುಟುಂಬದ ಪರಿಸ್ಥಿತಿ ಏನೇ ಇರಲಿ ಎಲ್ಲಾ ಪೋಷಕರಿಗೂ ತಮ್ಮ ಮಕ್ಕಳು ಶಾಲೆಗೆ ಹೋಗಬೇಕು ಎಂದಿದೆ. ನಾವು ಅಲ್ಲಿಗೆ ಹೋದ ದಿನ ಸುಮಾರು ನೂರಾ ಇಪ್ಪತ್ತು ಹುಡುಗರು ಶಾಲೆಗೆ ಹಾಜರಾಗಿದ್ದರು. ತಿಲೋಕ್‌ರವರ ಪ್ರಕಾರ ವರ್ಷದುದ್ದಕ್ಕೂ ಇಷ್ಟೇ ಹಾಜರಾತಿ ಇರುತ್ತದೆ. ಮುಖ್ಯೋಪಾಧ್ಯಾಯರು ನೆನಪಿಸಿದ ಮೇಲೆ, ಸ್ವಲ್ಪ ಸಂಕೋಚದಿಂದಲೇ ತಮ್ಮ ವಿದ್ಯಾರ್ಥಿಯೊಬ್ಬ ಎಂಟನೆಯ ತರಗತಿಯ ಮಂಡಳಿ (ಬೋರ್ಡ್) ನಡೆಸುವ ಪರೀಕ್ಷೆಯಲ್ಲಿ ನೂರಕ್ಕೆ ನೂರು ಅಂಕಗಳನ್ನು ತೆಗೆದುಕೊಂಡ ಎಂದು ತೃಪ್ತಿಯಿಂದ, ಆದರೆ ಜಂಭವಿಲ್ಲದೆ ಹೇಳಿಕೊಂಡರು.

ಎ.ಪಿ.ಜೆ. ಅಬ್ದುಲ್ ಕಲಾಮ್ ಆವಿಷ್ಕಾರ್ ಅಭಿಯಾನ ಆರಂಭವಾದಾಗ, ಜಿಲ್ಲೆಯಲ್ಲಿನ ನೂರು ಶಾಲೆಗಳಿಗೆ ತಲಾ 15,000 ರೂ. ಅನುದಾನ ನೀಡಿ ಯಾವುದಾದರೊಂದು ವೈಜ್ಞಾನಿಕ ಯೋಜನೆಯನ್ನು ಕೈಗೆತ್ತಿಕೊಳ್ಳಬೇಕೆಂದು ತಿಳಿಸಲಾಯಿತು. ತಿಲೋಕ್‌ರವರ ನೇತೃತ್ವದಲ್ಲಿ ಬರೇವಡದ ಶಾಲೆ ಮಾಡಿದ ಪ್ರಾಜೆಕ್ಟ್‌ಗೆ ಪ್ರಥಮ ಬಹುಮಾನ ಬಂದಿತು. ಈಗ ಶಾಲೆಯಲ್ಲಿ ಸಕ್ರಿಯವಾದ, 'ವಿಜ್ಞಾನ – ಗಣಿತ ಸಂಘ' ಇದೆ. ಮಕ್ಕಳು ಮಾಡೆಲ್‌ಗಳನ್ನು ಮಾಡುವುದು, ಪ್ರಬಂಧ ಬರೆಯುವುದು, ಕ್ವಿಜ಼್, ಚರ್ಚೆಗಳು ಮೊದಲಾದ ಸ್ಪರ್ಧೆಗಳಲ್ಲಿ ಭಾಗವಹಿಸುತ್ತಾರೆ. ಇಂಥ ಪ್ರತಿಯೊಂದು ವಿಭಾಗದಲ್ಲೂ ನಾಲ್ವರು ಹುಡುಗರು ಜಿಲ್ಲಾ ಫೈನಲ್ ತಲುಪಿದರು ಎಂದು ತಿಲೋಕ್ ಹೇಳುತ್ತಾರೆ. ವಿಜ್ಞಾನ ಪ್ರಬಂಧ ಸ್ಪರ್ಧೆಯಲ್ಲಿ ಮೊದಲ ಬಹುಮಾನ ಪಡೆದ ಸೂರ್ಯಮಾನ್ ಸಿಂಗ್ ಎಂಬ ವಿದ್ಯಾರ್ಥಿಯನ್ನು ನಮಗೆ ತಿಲೋಕ್ ಪಿತೃಸದೃಶ ಹೆಮ್ಮೆಯೊಂದಿಗೆ ಪರಿಚಯಿಸಿದರು. 2018ರಲ್ಲಿ ಪಾಲಡಿಯಲ್ಲಿ ನಡೆದ ಬಾಲಮೇಳದಲ್ಲಿ ಬಾರೇವಾಡದ ಹುಡುಗರು ಧ್ವನಿ, ವಿದ್ಯುಚ್ಛಕ್ತಿ ಮತ್ತು ಅಯಸ್ಕಾಂತೀಯತೆ ಕುರಿತಾದ ಮಾದರಿಗಳನ್ನು ಮಾಡಿದ್ದರು. ಇವೆಲ್ಲಾ ಬೋಧನಾ–ಕಲಿಕಾ ಪ್ರಕ್ರಿಯೆಯ ಸಹಜ ಭಾಗ ಎಂಬುದು ತಿಲೋಕ್‌ರವರ ಅಭಿಪ್ರಾಯ. "ಪ್ರತಿಯೊಂದು ಮಗುವೂ ತೊಡಗಿಕೊಂಡಿರಬೇಕು ಎಂಬುದು ನನ್ನ ನಂಬಿಕೆ. ಆದ್ದರಿಂದ ಎಲ್ಲರನ್ನೂ ಒಂದಲ್ಲ ಒಂದು ಗುಂಪಿಗೆ ಸೇರಿಸಿ ಅವರ ಉತ್ಸಾಹವೂ ಆಸಕ್ತಿಯೂ ಉಳಿಯುವಂತೆ ನೋಡಿಕೊಳ್ಳಬೇಕು. ಈ ಪ್ರಕ್ರಿಯೆಗೆ ನೆರವಾಗುವಂತೆ ನಾನು ಈ ಎಲ್ಲ ವಿಷಯಗಳೂ ನಮ್ಮ ಸುತ್ತಲಿನ ಸಂದರ್ಭಕ್ಕೆ ಸಂಬಂಧ ಹೊಂದಿರುವಂತೆ ಎಚ್ಚರ ವಹಿಸುತ್ತೇನೆ. ಇದಕ್ಕಾಗಿ ನಾನು ಅವರಿಗೆ ವಿಡಿಯೋಗಳನ್ನೂ, ಪವರ್ ಪಾಯಿಂಟ್ ಪ್ರದರ್ಶನಗಳನ್ನು ಸಹ ವ್ಯವಸ್ಥೆ ಮಾಡುತ್ತೇನೆ." ತಿಲೋಕ್‌ರವರು ತಮ್ಮ ಪಾಠದ ಯೋಜನೆಗಳನ್ನು ಎಚ್ಚರಿಕೆಯಿಂದ

ಮಾಡಿಕೊಳ್ಳುತ್ತಾರೆ. ಚಿತ್ರಗಳನ್ನೂ, ಚಾರ್ಟ್‌ಗಳನ್ನೂ ಮಾಡುವುದರಲ್ಲಿ ಅವರು ಮಕ್ಕಳನ್ನೂ ತೊಡಗಿಸುತ್ತಾರೆ. “ಕೆಲವೊಮ್ಮೆ ನಾನು ಬೆಳಕಿನ ಗುಣಗಳು, ಜ್ಯಾಮಿತಿಯ ಪರಿಕಲ್ಪನೆಗಳು ಇವುಗಳನ್ನು ಅರ್ಥಮಾಡಿಸಲು ನಿಜ ಜೀವನದಿಂದಲೇ ನಿದರ್ಶನಗಳನ್ನು ಎತ್ತಿಕೊಳ್ಳುತ್ತೇನೆ. ಆಗಾಗ ಯು-ಟ್ಯೂಬ್ ಅನ್ನು ಉಪಯೋಗಿಸುತ್ತೇನೆ. ನನ್ನ ಮಗ ಇದರಲ್ಲೆಲ್ಲಾ ಚುರುಕಾಗಿದ್ದು, ಇವುಗಳನ್ನು ಡೌನ್‌ಲೋಡ್ ಮಾಡಿಕೊಳ್ಳಲು ನನಗೆ ನೆರವಾಗುತ್ತಾನೆ” ಅನ್ನುತ್ತಾರೆ ತಿಲೋಕ್. ಎಂಟನೆಯ ತರಗತಿಯ ಮಂಡಳಿ ಪರೀಕ್ಷೆಯ ರ್‍ಯಾಂಕ್ ಪಟ್ಟಿಯಲ್ಲಿ ಸೇರಿಕೊಂಡ ಶಾಲೆಯ ಮೂವರು ವಿದ್ಯಾರ್ಥಿಗಳಿಗೆ, ಬಹುಮಾನ ನೀಡುವ ಸರ್ಕಾರಿ ಯೋಜನೆಯೊಂದರಲ್ಲಿ ಲ್ಯಾಪ್‌ಟಾಪ್‌ಗಳು ಬಂದಿವೆ.

ಪ್ರಾರಂಭದಿಂದಲೂ ಸ್ವಯಂ ವ್ಯಕ್ತಿತ್ವ ವಿಕಸನಕ್ಕೆ ಬದ್ಧರಾದ ತಿಲೋಕ್‌ರವರು 2010ರಲ್ಲಿ ಮೊತ್ತಮೊದಲ ಬಾರಿಗೆ ವಿಜ್ಞಾನ ಶಿಕ್ಷಕರ ತರಬೇತಿ ಕಾರ್ಯಕ್ರಮದಲ್ಲಿ ಭಾಗವಹಿಸಿದರು. ಅಲ್ಲಿಂದಾಚೆಗೆ ಅವರು ತಪ್ಪದೆ ಹಾಜರಾಗುತ್ತಿದ್ದಾರೆ. ಅಲ್ಲದೆ ಸಿರೋಹಿ ಜಿಲ್ಲೆಯಲ್ಲಿ ಡಯೆಟ್ ನಡೆಸುವ ಎಲ್ಲಾ ವಿಜ್ಞಾನ ಮತ್ತು ಇವಿಎಸ್ ಕಾರ್ಯಕ್ರಮಗಳಲ್ಲೂ ಸಂಪನ್ಮೂಲ ವ್ಯಕ್ತಿಯಾಗಿದ್ದಾರೆ; ಜತೆಗೆ ಮಾಸ್ಟರ್ ಟ್ರೇನರ್ ಕೂಡಾ ಆಗಿದ್ದಾರೆ.

ನಾವು ಇನ್ನೇನು ಹೊರಡಬೇಕು ಎಂದಾಗ ಮುಖ್ಯೋಪಾಧ್ಯಾಯರು ತಿಲೋಕ್ ಅವರ ಬಗ್ಗೆ ಇನ್ನೊಂದು ಅಮೂಲ್ಯ ಮಾಹಿತಿಯನ್ನು ತಿಳಿಸಿದರು. “ತಿಲೋಕ್ ಒಬ್ಬ ತರಬೇತಿ ಹೊಂದಿದ ಸ್ಕೌಟ್ ಟೀಚರ್ ಎಂಬುದು ನಿಮಗೆ ಗೊತ್ತೇ? ಕಳೆದ ಹತ್ತು ವರ್ಷಗಳಿಂದಲೂ ಅವರು ನಮ್ಮ ಶಾಲೆಯಲ್ಲಿ ಬಾಯ್ಸ್ ಸ್ಕೌಟ್ ಕಾರ್ಯಕ್ರಮವನ್ನು ನಡೆಸಿಕೊಡುತ್ತಿದ್ದಾರೆ.” ತಿಲೋಕ್ ಅವರು ಪ್ರತಿ ಮಂಗಳವಾರ ಮತ್ತು ಶುಕ್ರವಾರದ ಆಟ/ಎಸ್‌ಯುಪಿ/ಕಲೆ ಪೀರಿಯಡ್‌ಗಳನ್ನು ಉಪಯೋಗಿಸಿಕೊಂಡು ಸ್ಕೌಟ್‌ನಲ್ಲಿ ನೋಂದಾಯಿಸಿಕೊಂಡಿರುವ ಮೂವತ್ತೆರಡು ಮಕ್ಕಳಿಗೆ ತರಬೇತಿ ನೀಡುತ್ತಿದ್ದಾರೆ. ಅವರು ಸ್ವತಃ ಈ ಮಕ್ಕಳಿಗೆ ಸಿರೋಹಿ ಪಟ್ಟಣದಿಂದ ಖಾಕಿ ಸಮವಸ್ತ್ರಗಳನ್ನು ತಂದುಕೊಡುತ್ತಾರೆ. ಈಗಾಗಲೇ ತೀರಾ ಬಿಗಿಯಾಗಿರುವ ತಮ್ಮ ವೇಳಾಪಟ್ಟಿಯಲ್ಲಿ ಇದನ್ನೆಲ್ಲಾ ಅವರು ಹೇಗೆ ನಿಭಾಯಿಸುತ್ತಾರೆ ಎಂದು ನಾವು ಕೇಳಲು ಹೋಗಲಿಲ್ಲ. ಅವರು “ಇದೆಲ್ಲಾ ಏನುಬಿಡಿ” ಎಂದು ಹೆಗಲು ಕುಣಿಸಿ ಮಾತು ಹಾರಿಸಿಬಿಡುತ್ತಾರೆ ಎಂದು ನಮಗೆ ಗೊತ್ತು.

---

## ದಶಮಾಂಶ, ಭಿನ್ನರಾಶಿ ಯಾವುದೇ ಗಣಿತ ಕ್ರಿಯೆಯನ್ನು ಕೇಳಿ! ಈ ಶಾಲೆಯ ಮಕ್ಕಳಿಗೆ ಎಲ್ಲವೂ ಗೊತ್ತು

**ಅಶೋಕ್ ಕುಮಾರ್ ಸೊಹೇಲ್, ಕೈಲಾಶ್‌ಚಂದ್ ಜಾಟ್**

ಸರ್ಕಾರಿ ಪ್ರಾಥಮಿಕ ಶಾಲೆ, ನದ್ಯಾ-ಕಿ-ಧಾನಿ
ಉಣಿಯಾರಾ ಬ್ಲಾಕ್, ಟೋಂಕ್ ಜಿಲ್ಲೆ, ರಾಜಸ್ಥಾನ

---

ನದ್ಯಾ-ಕಿ-ಧಾನಿಯನ್ನು ತಲಪಲು ನಮಗೆ ನಾವು ಅಂದುಕೊಂಡದ್ದಕ್ಕಿಂತ ಹೆಚ್ಚು ಸಮಯ ತಗುಲಿತು. ದೇವಾಲಿಯಿಂದ ವಾಹನದಲ್ಲಿ ಹೊರಟು ಟೋಂಕ್ ಅನ್ನು ಬಳಸಿ

ಕೊಂಡು ಹೋಗುತ್ತಿದ್ದರೆ ನಮಗೆ ಕಂಡದ್ದು ಮೈಲುಗಟ್ಟಲೆ ದೂರ ಆಗಷ್ಟೇ ಬಿತ್ತಿದ ಸಾಸಿವೆ ಹೊಲಗಳು. ಆಗಲೇ ಮೂರು ಘಂಟೆಯಾಗಿತ್ತು. ಇನ್ನೊಂದು ತಾಸಿನಲ್ಲಿ ಶಾಲೆಯು ಮುಚ್ಚಬಹುದು. ನಾವು ಎಷ್ಟನ್ನು ನೋಡಬಹುದು, ಎಷ್ಟು ಅರ್ಥಮಾಡಿಕೊಳ್ಳಬಹುದು? ದುರದೃಷ್ಟವಶಾತ್ ಇದೊಂದು ನಿಷ್ಫಲ ಭೇಟಿಯಾದೀತೇ? ಇಂತಹ ಆತಂಕಗಳೊಂದಿಗೆ ಕೆಸರು ತುಂಬಿದ ಹಳ್ಳಿ ರಸ್ತೆಯಲ್ಲಿ, ಎಮ್ಮೆಗಳ ನಡುವೆ ದಾರಿ ಮಾಡಿಕೊಂಡು ಶಾಲೆಯ ಗೇಟ್ ತಲಪಿದೆವು. ಶಾಲೆಯ ಹೊರಗಡೆ ಒಂದು ದನದ ಕೊಟ್ಟಿಗೆ ಇತ್ತು. ಅದರ ಇರವು ಕಣ್ಣಿಗೂ, ಮೂಗಿಗೂ ರಾಚುವಂತಿತ್ತು. ಇದೆಲ್ಲ ಶುಭಸೂಚನೆಯೇನೂ ಆಗಿರಲಿಲ್ಲ. ಆದರೆ ನಾವು ಒಳಗೆ ಹೋಗುತ್ತಿದ್ದಂತೆಯೇ ಒಂದು ಶುಚಿಯಾದ ಆವರಣವನ್ನು, ಎಡಗಡೆಯಲ್ಲಿ ಚೆನ್ನಾಗಿ ನಿರ್ವಹಣೆಯಲ್ಲಿರುವ ಆಟದ ಮೈದಾನವೊಂದನ್ನು ಕಂಡೆವು. ಬಲಗಡೆಯಲ್ಲಿ ಅನೇಕ ಮರಗಳ ಗುಂಪಿದ್ದು, ದಾರಿಯ ಎರಡೂ ಬದಿ ಬೇವಿನ ಮರಗಳ ಸಾಲು ಶಾಲೆಯವರೆಗೂ ಇದ್ದವು. ನಾವು ವೆರಾಂಡದ ಮೆಟ್ಟಿಲನ್ನು ಹತ್ತುತ್ತಿದ್ದಂತೆ ಮಕ್ಕಳ ಉತ್ಸಾಹದ ಗುಜು ಗುಜು ಕೇಳಿ ಬಂತು. ನಾನು ಮತ್ತು ನನ್ನ ಸಹೋದ್ಯೋಗಿ ರಾಕೇಶ್ ಬಲಕ್ಕೆ ತಿರುಗಿ ಮೂರು, ನಾಲ್ಕು ಹಾಗೂ ಐದನೇ ತರಗತಿಗಳಿಗೆ ಅಶೋಕ್ ಕುಮಾರ್ ಸೊಹೇಲ್‌ರವರು ಗಣಿತ ಹೇಳಿಕೊಡುತ್ತಿರುವ ಕಡೆಗೆ ಸಾಗಿದೆವು. ನಮ್ಮ ಇನ್ನೊಬ್ಬ ಸಹೋದ್ಯೋಗಿ ದೀಪ್ ಚಂದ್‌ರವರು ಎಡಕ್ಕೆ ತಿರುಗಿ ಒಂದು ಮತ್ತು ಎರಡನೇ ತರಗತಿಗೆ ಕೈಲಾಶ್ ಚಂದ್ ಜಾಟ್‌ರು ಹಿಂದಿ ಹೇಳಿಕೊಡುತ್ತಿದ್ದಲ್ಲಿಗೆ ನಡೆದರು.

ಅಶೋಕ್‌ರವರ ತರಗತಿಯಲ್ಲಿ ಇಪ್ಪತ್ತಮೂರು ವಿದ್ಯಾರ್ಥಿಗಳಿದ್ದರು. ನಾನು ಮತ್ತು ರಾಕೇಶ್ ತರಗತಿಗೆ ತೊಂದರೆ ಆಗದಂತೆ ಅಲ್ಲಿದ್ದ ಚಿಕ್ಕ ಸ್ಥಳಾವಕಾಶದಲ್ಲಿ ಸೇರಿಕೊಂಡೆವು. ಸಾಮಾನ್ಯವಾಗಿ ಯಾವುದೇ ಶಾಲೆಗೆ ಸಂದರ್ಶಕರು ಹೋದಾಗ, ಮಕ್ಕಳೆಲ್ಲಾ ಎದ್ದು ನಿಂತು ಚೆನ್ನಾಗಿ ಅಭ್ಯಾಸ ಮಾಡಿದ ಮಾದರಿಯಲ್ಲಿ "ಗುಡ್‌ಮಾರ್ನಿಂಗ್/ಗುಡ್ ಆಫ್ಟರ್‌ನೂನ್ ಸರ್", "ಹೇಗಿದ್ದೀರಿ ಸರ್" ಎಂದು ಒಟ್ಟಿಗೇ ಕೇಳುತ್ತವೆ. ಆದರೆ ಇಲ್ಲಿ ಹಾಗಾಗಲಿಲ್ಲ. ಶಿಕ್ಷಕರು ತಮ್ಮತ್ತ ಎಸೆಯುತ್ತಿದ್ದ ಗಣಿತದ ಸಮಸ್ಯೆಗಳನ್ನು ಉತ್ತರಿಸುವುದರಲ್ಲಿ ಮಕ್ಕಳು ಸಂಪೂರ್ಣವಾಗಿ ಮುಳುಗಿ ಹೋಗಿದ್ದರು. ನಮ್ಮನ್ನು ನಿರೀಕ್ಷಿಸುತ್ತಿದ್ದ ಅಶೋಕ್ ನಮ್ಮತ್ತ ಮುಗುಳ್ನಗೆ ಬೀರಿದರು. ಮಕ್ಕಳು ಸಹ ನಮ್ಮತ್ತ ತಿರುಗಿ ಒಮ್ಮೆ ಮುಗುಳ್ನಕ್ಕು ತಮ್ಮ ಪಾಠವನ್ನು ಮುಂದುವರೆಸಿದರು. ನಮಗೆ ಮುಂದಿನ ಮೂವತ್ತೈದು ನಿಮಿಷಗಳು ಹಬ್ಬದಂತಿತ್ತು. ಎರಡು ಅಂಕಿಗಳೊಂದಿಗೆ ಹಲವಾರು ಗಣಿತ ಕ್ರಿಯೆಗಳನ್ನು, ಮನಸ್ಸಿನಲ್ಲಿಯೇ ಬಿಡಿಸಬೇಕಾದ ಅನೇಕ ಸಮಸ್ಯೆಗಳನ್ನು ಅಶೋಕ್ ಮಕ್ಕಳಿಗೆ ಸವಾಲಾಗಿ ನೀಡುತ್ತಿದ್ದರು. ಅವರು ಒಂದು ಮಾರುಕಟ್ಟೆಯ ಸಂದರ್ಭವನ್ನು ಸೃಷ್ಟಿಸಿದ್ದರು. ಕಾಲ್ಪನಿಕವಾಗಿ ಅವರು ಮಕ್ಕಳನ್ನು ಅನೇಕ ಸ್ಟೇಷನರಿಗಳನ್ನು ಕೊಳ್ಳಲು ಕಳಿಸಿದರು. ಅಲ್ಲೊಂದು ಹಲಗೆಯ ಮೇಲೆ ವಿವಿಧ ವಸ್ತುಗಳ ಬೆಲೆಯನ್ನು ನಮೂದಿಸಲಾಗಿತ್ತು. ಕ್ವಿಜ್ ಮಾಸ್ಟರ್‌ನಂತೆ ಅಶೋಕ್ ಪ್ರಶ್ನೆಗಳನ್ನು ಕೇಳುತ್ತಾ ಹೋದರು: "ನೀವು ಮೂರು ಪೆನ್ಸಿಲ್ ಮತ್ತು ನಾಲ್ಕು ಅಳಿಸುವ ರಬ್ಬರ್‌ಗಳನ್ನು ಕೊಂಡರೆ ಅದಕ್ಕೆ ಎಷ್ಟು ಖರ್ಚು ಮಾಡಿದ

ಹಾಗಾಯಿತು? ನೀವು ಸುಮಾರು 90 ರೂಪಾಯಿ ಖರ್ಚು ಮಾಡಿದ್ದರೆ ಏನೆಲ್ಲಾ ಸಾಮಾನು ಕೊಂಡಿರಬಹುದು? ನೀವು ನೂರು ರೂಪಾಯಿ ತೆತ್ತು ಈ ಮೂರು ಪದಾರ್ಥಗಳನ್ನು ಇಂತಿಂಥ ಪರಿಮಾಣದಲ್ಲಿ ಕೊಂಡಿದ್ದರೆ ನಿಮಗೆ ಸಿಗುವ ಬಾಕಿ ಹಣ ಎಷ್ಟು?" ಕೋಣೆಯಲ್ಲಿದ್ದ ಮಕ್ಕಳೆಲ್ಲರೂ ಉತ್ತರಿಸುತ್ತಿದ್ದರು; ಕೆಲವು ಪ್ರಶ್ನೆಗಳಿಗೆ ಒಂದಕ್ಕಿಂತ ಹೆಚ್ಚು ಉತ್ತರಗಳಿರುತ್ತಿದ್ದವು; ಕೆಲವು ಮಕ್ಕಳು ತಪ್ಪು ಮಾಡುತ್ತಿದ್ದರು ನಿಜ, ಆದರೆ ಮಕ್ಕಳು ಮನಸ್ಸಿನಲ್ಲಿಯೇ ವೇಗವಾಗಿ ಲೆಕ್ಕ ಹಾಕುತ್ತಿದ್ದರು, ಅವರಿಗೆ ಪ್ರಶ್ನೆಯ ಅರ್ಥ ಮತ್ತು ಗಣಿತ ಕ್ರಿಯೆ ಸ್ಪಷ್ಟವಾಗಿ ತಿಳಿದಿದೆ ಎಂಬುದು ಅವರ ಉತ್ತರಗಳಿಂದ ಸ್ಪಷ್ಟವಾಗುತ್ತಿತ್ತು.

ಅಶೋಕ್ ಆಗಾಗ ನಮ್ಮ ಕಡೆ ನೋಡಿ ಮುಗುಳ್ನಗುತ್ತಿದ್ದರು. ಹೆಮ್ಮೆಯನ್ನೂ ಸಂತಸವನ್ನೂ ನಾನು ಆ ನಗುವಿನಲ್ಲಿ ಕಂಡೆ. ಅವರು ಶಾಲೆಯ ಕಟ್ಟಡ ನಿರ್ಮಾಣಕ್ಕಾಗಿ ಆವಶ್ಯಕ ಸಾಮಗ್ರಿಗಳನ್ನು ಕೊಳ್ಳಲು ಅಂಗಡಿಗೆ ಕಳಿಸುವ ಕಾಲ್ಪನಿಕ ಸಂದರ್ಭವನ್ನು ಸೃಷ್ಟಿಮಾಡಿದರು. ಅದರಲ್ಲಿ ಇನ್ನೂ ದೊಡ್ಡ ಸಂಖ್ಯೆಗಳು ಲೆಕ್ಕದಲ್ಲಿ ಬಂದವು. ಸಿಮೆಂಟ್, ಉಕ್ಕು ಮತ್ತು ಇಟ್ಟಿಗೆಗಳನ್ನು ತರಬೇಕಿತ್ತು. ನಾನು ಯಾವ ಮಗು ಹೇಗೆ ಉತ್ತರ ಹೇಳುತ್ತದೆ ಎಂಬುದನ್ನು ಗಮನಿಸುತ್ತಿದ್ದೆ. ನಾಲ್ವರು ಹುಡುಗರು ಮಿಂಚಿನ ವೇಗದಲ್ಲಿ ಉತ್ತರ ಹೇಳುತ್ತಿದ್ದರು. ಆದರೆ ಇಪ್ಪತ್ತಮೂರು ವಿದ್ಯಾರ್ಥಿಗಳಲ್ಲಿ ಹದಿನೇಳು ಹುಡುಗರು ಒಂದಲ್ಲ ಒಂದು ಪ್ರಶ್ನೆಗೆ ಉತ್ತರಿಸಿದರು. ಮೇಷ್ಟರು ಲೆಕ್ಕ ಪಾಠದ ಪ್ರಶ್ನೆ ಕೇಳುತ್ತಿಲ್ಲ, ಬದಲಾಗಿ ದೀಪಾವಳಿ ಹಬ್ಬದ ಸಿಹಿ ಹಂಚುತ್ತಿದ್ದಾರೆ ಎಂದು ನೋಡಿದವರು ಅಂದುಕೊಳ್ಳಬೇಕು, ಮಕ್ಕಳ ಮುಖದಲ್ಲಿ ಅಂತಹ ಪ್ರತೀಕ್ಷೆಯ ಮಂದಹಾಸವಿತ್ತು. ಶಾಲೆ ಮುಚ್ಚುವ ಸಮಯವಾಗಿದ್ದರೂ ಆ ಕಡೆ ಯಾರಿಗೂ ಗಮನವಿರಲಿಲ್ಲ. ಅಶೋಕ್ ಈಗ ಮಕ್ಕಳಿಗೆ ದಶಮಾಂಶ ಪದ್ಧತಿಯ ಬಗ್ಗೆ ತಿಳುವಳಿಕೆ ನೀಡುತ್ತಿದ್ದರು. ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಇಬ್ಬರೂ ಪ್ರಯಾಸ ಪಡುವ ಎರಡು ಪರಿಕಲ್ಪನೆಗಳೆಂದರೆ "ಭಿನ್ನರಾಶಿ" ಮತ್ತು "ದಶಮಾಂಶ". ಆದರೆ ಮಕ್ಕಳಿಗೆ ಸಂಖ್ಯೆಗಳ ಬಗ್ಗೆ ಸರಿಯಾದ ಗ್ರಹಿಕೆ ಇದ್ದಾಗ, ಅವುಗಳ ರಚನೆ ಮತ್ತು ಮೂಲಭೂತ ಗಣಿತ ಕ್ರಿಯೆಗಳ ಅರಿವು ಇದ್ದಾಗ ಈ ಪ್ರಕ್ರಿಯೆಗಳನ್ನು ಕಟ್ಟಿಕೊಡುವುದು ಸುಲಭ. ಅಶೋಕ್‌ರವರು ಮಕ್ಕಳಿಗೆ ನೂರು ರೂಪಾಯಿಯನ್ನು ಯಾವುದೆಲ್ಲಾ ರೂಪಾಯಿ ನೋಟುಗಳಿಂದ ಒಟ್ಟುಮಾಡಬಹುದು ಎಂದು ಕೇಳಿದರು. ಮಕ್ಕಳು ಒಂದೇ ದನಿಯಲ್ಲಿ ಮೊದಲಿಗೆ ಎರಡು ಐವತ್ತು ರೂಪಾಯಿ ನೋಟುಗಳನ್ನು ಸೇರಿಸಿ ಮಾಡಬಹುದು ಎಂದವರು ಆಮೇಲೆ ಇಪ್ಪತ್ತು ರೂಪಾಯಿಗಳಿಂದ, ಹತ್ತು ರೂಪಾಯಿಗಳಿಂದ... ಹೀಗೆ ಬೇರೆ ಬೇರೆ ಮೌಲ್ಯದ ನೋಟುಗಳಿಂದ ಕಡೆಗೆ ಎರಡು ಮತ್ತು ಒಂದು ರೂಪಾಯಿಯನ್ನು ಸಹ ಉಪಯೋಗಿಸಿ ನೂರು ರೂ ಮಾಡಿದರು. ಉತ್ಸಾಹದಿಂದ ನಡೆಯುತ್ತಿದ್ದ ಈ ಚರ್ಚೆಯ ಒಂದು ಘಟ್ಟದಲ್ಲಿ ಅಶೋಕ್‌ರವರು, ಅಂಗಡಿಯವನಿಗೆ ಒಂದು ಸಮಸ್ಯೆಯಿದೆ ಎಂದು ಹೇಳಿ ಚರ್ಚೆಯನ್ನು ನಿಲ್ಲಿಸಿದರು. ಅಂಗಡಿಯವನ ಬಳಿ ಇರುವ ನೋಟುಗಳನ್ನೆಲ್ಲಾ ಸೇರಿಸಿದರೆ ತೊಂಬತ್ತೊಂಬತ್ತು ರೂಪಾಯಿಗಳಿವೆ,

ಉಳಿದದ್ದು ರೂಪಾಯಿಗಿಂತ ಕಡಿಮೆ ಬೆಲೆಯ ನಾಣ್ಯಗಳಲ್ಲಿವೆ ಎಂದರು. ಈಗ ಮಕ್ಕಳು ಐವತ್ತು ಪೈಸೆ, ಇಪ್ಪತ್ತೈದು ಪೈಸೆ, ಹತ್ತು ಪೈಸೆ ಮೊದಲಾದ ನಾಣ್ಯಗಳಿಂದ ರೂಪಾಯಿಯನ್ನು ಲೆಕ್ಕಹಾಕಿದರು. ಈಗ ಭಿನ್ನರಾಶಿ ಮತ್ತು ದಶಮಾಂಶವನ್ನು ಮಕ್ಕಳಿಗೆ ಪರಿಚಯಿಸಲು ಅಶೋಕ್ ಅವರಿಗೆ ಸೂಕ್ತ ಸಂದರ್ಭ ಒದಗಿ ಬಂತು. ಐವತ್ತು ಪೈಸೆ ಎಂದರೆ ಅರ್ಧ ರೂಪಾಯಿ ಅಥವಾ 0.5 ರೂಪಾಯಿ ಎಂದು ವಿವರಿಸಿದರು. ಮಕ್ಕಳು ಈಗ ನೂರನ್ನು 99+0.5+0.25+0.25 ಎಂದು ಬರೆದರು. ಇವತ್ತಿಗೆ ಇಷ್ಟು ಸಾಕು ಎಂದು ಅಶೋಕ್ ನಿರ್ಧರಿಸುವ ವೇಳೆಗಾಗಲೇ ಮಕ್ಕಳು ಎರಡು ರೂಪಾಯಿಗೆ, ಮೂರು ರೂಪಾಯಿಗೆ ಭಿನ್ನರಾಶಿ ಮತ್ತು ದಶಮಾಂಶವನ್ನು ರಚಿಸುತ್ತಾ ವೇಗವಾಗಿ ಮುಂದುವರಿಯುತ್ತಿದ್ದರು.

ನಮಗೆ ಮಕ್ಕಳ ಜೊತೆ ಮಾತನಾಡಲು ಕೊಂಚ ಸಮಯ ಸಿಕ್ಕಿದಾಗ ನನ್ನ ಸಹೋದ್ಯೋಗಿ ರಾಕೇಶ್ ತಾವು ಜೈಪುರ್‌ನಿಂದಲೂ, ನಾನು ಬೆಂಗಳೂರಿನಿಂದಲೂ ಬಂದಿದ್ದೇವೆ ಎಂದು ಹೇಳಿದರು. ನದ್ಯಾ–ಕಿ–ಧಾನಿ ಹಳ್ಳಿಯಿಂದ ಈ ಎರಡು ಮಹಾನಗರಗಳು ಎಷ್ಟು ದೂರದಲ್ಲಿವೆ ಎಂದು ನಾವು ಲೆಕ್ಕ ಹಾಕಿದೆವು. ಅಲ್ಲಿಂದಾಚೆಗೆ ನಾವು ಇಲ್ಲಿಗೆ ತಲುಪಲು ಸಾಪೇಕ್ಷವಾಗಿ ಎಷ್ಟು ಸಮಯ ತೆಗೆದುಕೊಂಡಿತು ಎಂಬ ಲೆಕ್ಕಾಚಾರ ಶುರುವಾಯಿತು. ಆಗ ಮಕ್ಕಳು ರಸ್ತೆಯಲ್ಲಿ ಪ್ರಯಾಣ ಮಾಡಿದರೆ ಬೆಂಗಳೂರಿನಿಂದ ನದ್ಯಾ–ಕಿ–ಧಾನಿಗೆ ಎಷ್ಟು ಸಮಯ ತೆಗೆದುಕೊಳ್ಳಬಹುದು ಎಂಬ ಅಂದಾಜನ್ನು ಕರಾರುವಾಕ್ಕಾಗಿ ಮಾಡಿದರು.

ನಮಗೆ ಕೈಲಾಶ್ ಚಂದ್‌ರೊಂದಿಗೆ ಕಳೆಯಲು ಸಾಧ್ಯವಾದದ್ದು ಬಹಳ ಕಡಿಮೆ ಸಮಯ. ಆದರೆ ಕಿರಿಯ ತರಗತಿಯ ಮಕ್ಕಳು ಇವರೊಂದಿಗೆ ಹೊಂದಿದ್ದ ಸ್ನೇಹಭಾವವು ಅಶೋಕ್‌ರವರ ತರಗತಿಯಂತೆಯೇ ಇತ್ತು– ಮಕ್ಕಳಿಗೆ ಅದೇ ಸ್ವತಂತ್ರ, ನಿರ್ಬಂಧ ರಹಿತ ವಾತಾವರಣ ಮತ್ತು ಎಲ್ಲವನ್ನೂ ಉತ್ತರಿಸುವ ತವಕ. ಆರು–ಏಳರ ವಯಸ್ಸಿನಲ್ಲಿ ಸಹಜವಾಗಿರುವಂತೆ ಅವರ ಏಕಾಗ್ರತೆ ಸುಲಭವಾಗಿ ಬದಲಾಗುತ್ತಿತ್ತು. ಕೈಲಾಶ್ ಚಂದ್ 'ತರಕಾರಿ' ಎಂಬ ವಿಷಯವನ್ನು ಅವರಿಗೆ ಆಸಕ್ತಿದಾಯಕವಾಗುವಂತೆ ಮಾಡುತ್ತಿದ್ದರು. ಒಂದನೆಯ ತರಗತಿಯ ಮಕ್ಕಳಿಗೆ 'ಟೊಮ್ಯಾಟೊ' ಎಂಬ ಪದವನ್ನು ಹೇಳಿಕೊಟ್ಟರೆ, ಎರಡನೆಯ ತರಗತಿಯವರಿಗೆ ಅದೇ ಟೊಮ್ಯಾಟೊ ಪದವನ್ನು ಉಪಯೋಗಿಸಿ ಸರಳವಾದ ವಾಕ್ಯಗಳನ್ನು ರಚಿಸಲು ಹೇಳಿದರು. ಸಂಜೆ ಮಾಡಲು ಸ್ವಲ್ಪ ಹೋಂ ವರ್ಕ್ ಕೊಟ್ಟರು, ಪೋಷಕರನ್ನು, ಅಕ್ಕ–ಅಣ್ಣರನ್ನು ಕೇಳಿ ಟೊಮ್ಯಾಟೊದಿಂದ ಏನೆಲ್ಲಾ ಅಡಿಗೆ ಮಾಡಬಹುದೆಂಬುದನ್ನು ತಿಳಿದುಬರಲು ಹೇಳಿದರು. ಒಂದು ಮಗು ಕೂಡಲೇ, "ನಾವು ಜ್ಯೂಸ್ ಮಾಡುತ್ತೇವೆ" ಎಂದು ಹೇಳಿತು. ಕೈಲಾಶ್ ನಗುತ್ತಾ "ಇನ್ನೂ ಏನೇನು ಮಾಡಬಹುದೆಂದು ಮನೆಯಲ್ಲಿ ಕೇಳಿಕೊಂಡು ಬಾ" ಎಂದರು.

ನಾವು ಅಂಗಳಕ್ಕೆ ಬಂದಾಗ ಮಕ್ಕಳು ಮನೆಗೆ ಹೋದ ಮೇಲೆ ಕೈಲಾಶ್ ಹಾಗೂ ಅಶೋಕ್‌ರೊಂದಿಗೆ ಮಾತನಾಡಬಹುದು ಎಂಬುದು ನಮ್ಮ ಎಣಿಕೆಯಾಗಿತ್ತು. ಆದರೆ ಮಕ್ಕಳು ಹೋಗಲಿಕ್ಕೆ ಒಪ್ಪಲಿಲ್ಲ. "ನಾವು ಹೋಗುವವರೆಗೂ ಮಕ್ಕಳು ಹೋಗುವುದಿಲ್ಲ

ಸರ್, ಹೀಗಾಗಿ ನಾವು ಅವರ ಎದುರೇ ಮಾತನಾಡಬೇಕಾಗುತ್ತದೆ." ಎಂದರು ಅಶೋಕ್. ಮಕ್ಕಳು ನಮ್ಮ ಮೇಜನ್ನು ಸುತ್ತುವರೆದಿದ್ದರಿಂದ ನಾವು ಅವರೊಂದಿಗೆ ಹರಟೆ ಹೊಡೆಯಲು ನಿರ್ಧರಿಸಿದೆವು. ಮೇಜಿನ ಮೇಲಿದ್ದ ಲೋಹದ ಹೂಜಿಯಲ್ಲಿ ನೀರಿತ್ತು. ಇದು ಯಾವ ಲೋಹ ಎಂದು ನಾವು ಕೇಳಿದೆವು. ಸರಿಯೋ, ತಪ್ಪೋ ಆದರೆ ಮಕ್ಕಳು ಪಟಪಟನೆ ಉತ್ತರ ಹೇಳಿದರು. ಒಂದು ಮಗು ಸ್ಟೀಲ್ ಎಂದರೆ, ಇನ್ನೊಂದು ಹಿತ್ತಾಳೆ ಎಂದಿತು. ಕಡೆಗೆ ಅಶೋಕ್ ಅದು ತಾಮ್ರದ್ದೆಂದೂ ತಾಮ್ರದ ಪಾತ್ರೆಗಳಲ್ಲಿ ಊಟ ಮಾಡುವುದು, ಕುಡಿಯುವುದು ಒಳ್ಳೆಯದೆಂದೂ ಹೇಳಿದರು. ಅನಂತರ ನಾವು ಇದರಲ್ಲಿ ಎಷ್ಟು ನೀರು ಹಿಡಿಯಬಹುದು ಎಂದು ಕೇಳಿದೆವು. ತಕ್ಷಣವೇ ಕೆಲವರು ಅರ್ಧ ಲೀಟರ್ ಎಂದರೆ, ಇನ್ನು ಕೆಲವರು ಒಂದು ಲೀಟರ್ ಎಂದರು. ಆಮೇಲೆ ಎಲ್ಲರೂ ಅದು ಒಂದು ಲೀಟರ್ ಹೂಜಿ ಎಂಬ ತೀರ್ಮಾನಕ್ಕೆ ಬಂದರು. ಅನಂತರ ಅವರ ಮನೆಗಳಲ್ಲಿರುವ ಹಾಲು ಅಳೆಯುವ ಪಾತ್ರೆಯ ಗಾತ್ರದ ವಿಷಯ ಚರ್ಚೆಗೆ ಬಂತು. ಅಮೇಲೆ ನಮ್ಮ ಮುಂದಿದ್ದ ಮೇಜಿನ ಅಳತೆ ಏನು ಎಂದು ಕೇಳಿದೆವು. ಅಗಲ ಎಷ್ಟು ಎಂಬುದಕ್ಕೆ ಉತ್ತರ, ತಿದ್ದುಪಡಿಗಳ ನಂತರ ಎರಡು ಅಡಿ ಎಂದರು. ಇನ್ನು ಉದ್ದ? ಅದಂತೂ ಮೂರು ಅಡಿ ಎಂದು ಬೇಗನೇ ತೀರ್ಮಾನವಾಯಿತು. ಸುತ್ತಳತೆ ಎಷ್ಟು ಎನ್ನುವುದು ಇನ್ನಷ್ಟು ಲೆಕ್ಕಾಚಾರಕ್ಕೆ ದಾರಿಯಾಯಿತು. ಅಂಕಗಣಿತವನ್ನು ಕಲಿಯುವುದರಲ್ಲಿ ಬರೇ ಲೆಕ್ಕಾಚಾರವಲ್ಲ, ಆಡುವ ಭಾಷೆ ಮುಖ್ಯವಾಗಿರುತ್ತದೆ ಅಲ್ಲವೇ. ಹಿಂದಿಯಲ್ಲಿ ಇದನ್ನು 'ಪದ ಸಮಸ್ಯೆಗಳು' (ಇಬರ್ತಿ ಸವಾಲ್) ಎಂದು ಕರೆಯುತ್ತಾರೆ. ಇವುಗಳಲ್ಲಿ ಮಕ್ಕಳು ಯಾವ ಗಣಿತ ಪ್ರಕ್ರಿಯೆಯನ್ನು ಉಪಯೋಗಿಸಬೇಕು ಎಂದು ಅರ್ಥಮಾಡಿಕೊಳ್ಳಲು ಸಾಧ್ಯವಾಗುವುದು, ಏನನ್ನು ಕೇಳುತ್ತಿದ್ದಾರೆ ಎಂದು ಗ್ರಹಿಸಿದಾಗ ಮಾತ್ರ. ಈ ಮಕ್ಕಳು ಹಾಡು ಹೇಳುವಷ್ಟು ಉಲ್ಲಾಸದಿಂದ ಪಟಪಟನೆ ಉತ್ತರಿಸುತ್ತಿದ್ದರು.

ಅಶೋಕ್ ಶಿಕ್ಷಣ ಇಲಾಖೆಯನ್ನು ಸೇರಿದ್ದು 2001ರಲ್ಲಿ. ನದ್ಯಾ-ಕಿ-ಧಾನಿಗೆ ಬಂದದ್ದು 2010ರಲ್ಲಿ. ಪದವೀಧರರಾಗಿದ್ದು, ಶಿಕ್ಷಕ ತರಬೇತಿಯಲ್ಲಿ ಡಿಪ್ಲೊಮಾ ಹೊಂದಿರುವ ಅಶೋಕ್ ಗಣಿತ ಮತ್ತು ಇಂಗ್ಲಿಷ್‌ಅನ್ನು ಕಲಿಸುತ್ತಾರೆ. ತನಗೆ ಇನ್ನೂ ಚೆನ್ನಾಗಿ ಇಂಗ್ಲಿಷ್ ಕಲಿಸಲು ಆಗುತ್ತಿದ್ದರೆ ಒಳ್ಳೆಯದಿತ್ತು ಎಂದು ಅವರು ಹುಳಿ ನಗೆಯೊಡನೆ ಹೇಳುತ್ತಾರೆ. ನಲವತ್ತೈದು ವರ್ಷ ವಯಸ್ಸಿನ ಅಶೋಕ್‌ಗೆ ಇಬ್ಬರು ಮಕ್ಕಳು. ಮಗಳು ಶಾಲೆ ಮುಗಿಸಿ ವೈದ್ಯಕೀಯ ಕೋರ್ಸ್‌ಗಾಗಿ ನೀಟ್ ಪ್ರವೇಶ ಪರೀಕ್ಷೆಯನ್ನು ಬರೆಯುತ್ತಿದ್ದಾಳೆ. ಮಗ ಹನ್ನೆರಡನೆಯ ತರಗತಿಯಲ್ಲಿ ಓದುತ್ತಿದ್ದಾನೆ.

ಐವತ್ತು ವರ್ಷ ವಯಸ್ಸಿನ ಕೈಲಾಶ್ ಚಂದ್ 1999ರಿಂದಲೇ ನದ್ಯಾ- ಕಿ- ಧಾನಿ ಶಾಲೆಯಲ್ಲಿ ಇದ್ದಾರೆ. ರಾಜೀವ್ ಗಾಂಧಿ ಪಾಠಶಾಲಾ ಕಾರ್ಯಕ್ರಮದಲ್ಲಿ ಈ ಶಾಲೆಯನ್ನು ಆರಂಭಿಸಿದ ವರ್ಷ ಅದು. ಗುತ್ತಿಗೆ ಶಿಕ್ಷಕರಾಗಿ ಕೆಲಸಕ್ಕೆ ಸೇರಿದ ಅವರಿಗೆ ನೇಮಕಾತಿ ಖಾಯಂ ಆದದ್ದು 2008ರಲ್ಲಿ. ಇಬ್ಬರು ಶಿಕ್ಷಕರೂ ಹಳ್ಳಿಯಿಂದ ಕೆಲವೇ ಕಿ.ಮೀ ದೂರದಲ್ಲಿ ನೆಲೆಸಿದ್ದಾರೆ. ವಿನಯಶೀಲರೂ ಸಂತೃಪ್ತರೂ ಆದ ಕೈಲಾಶ್ ಹೇಳುತ್ತಾರೆ, "ಸರ್ಕಾರ ನನಗೆ ಒಳ್ಳೆಯ ಉದ್ಯೋಗ ನೀಡಿದೆ, ಆದ್ದರಿಂದಲೇ ನಾನು

ಪ್ರತಿದಿನ ಅತ್ಯುತ್ತಮವಾಗಿ ಕೆಲಸವನ್ನು ನಿರ್ವಹಿಸಬೇಕು.” ಇವರಿಬ್ಬರಲ್ಲಿ ಅಶೋಕ್ ನಾಯಕರು. ಕೈಲಾಶ್‌ರಿಗೆ ಅವರನ್ನು ಬೆಂಬಲಿಸುವುದರಲ್ಲಿ ಸಂತೋಷವಿದೆ. ಅಶೋಕ್ ಮಾತು– ಕೃತಿಗಳಲ್ಲಿ ಆತ್ಮವಿಶ್ವಾಸವಿರುವ ಮನುಷ್ಯ. ತಮ್ಮ ಮಕ್ಕಳ ಕುರಿತಾದ ಪ್ರೀತಿ, ಶಾಲೆಯ ಕುರಿತಾದ ಹೆಮ್ಮೆ ಅವರಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ಅವರ ಕೆಲವೊಂದು ಹೇಳಿಕೆಗಳನ್ನು ಬಿಡಿಯಾಗಿ ತೆಗೆದುಕೊಂಡರೆ ಅವರು ಜಂಬದ ಮನುಷ್ಯ ಎಂಬ ಭಾವನೆ ಬರಬಹುದು;. ಆದರೆ ಹಾಗಿಲ್ಲದೆಯೂ ಇರಬಹುದು. ಅವರು ಗಣಿತದ ಕಾರ್ಯಾಗಾರಗಳನ್ನು ಹಾಗೂ ತಾವು ಹಾಜರಿದ್ದ ಎಸ್‌ಎಲ್‌ಡಿಪಿಗಳನ್ನು, ಅದರಲ್ಲಿ ತಮಗೆ ದೊರೆತ ಸಲಹೆ ಸೂಚನೆಗಳನ್ನು ಮೌಲ್ಯಯುತವೆಂದು ಸ್ವೀಕರಿಸುತ್ತಾರೆ. ತಮ್ಮ ಐದನೆಯ ತರಗತಿಯ ಮಕ್ಕಳು ನವೋದಯ ಶಾಲೆಯ ಪ್ರವೇಶ ಪರೀಕ್ಷೆಗಳನ್ನು ತೆಗೆದುಕೊಂಡು ಹಾಜರಾಗಬೇಕೆಂಬುದು ಅವರ ಆಸೆ. ಆದರೆ ಪರೀಕ್ಷೆಗೆ ತಯಾರು ಮಾಡುವುದಕ್ಕಿಂತ ಆಚೆಗೆ ಅವರು ಹೆಚ್ಚಿನ ಮುತುವರ್ಜಿಯನ್ನು ತೆಗೆದುಕೊಳ್ಳುತ್ತಿಲ್ಲ. ಅದಕ್ಕೆ ಕಾರಣವನ್ನು ಅವರು ಬಿಚ್ಚು ಮನಸ್ಸಿನಿಂದ ಹೇಳುತ್ತಾರೆ. “ತಮ್ಮ ಮಕ್ಕಳನ್ನು ಪರೀಕ್ಷೆ ಬರೆಯಲು ಪಟ್ಟಣಕ್ಕೆ ಕರೆದುಕೊಂಡು ಹೋಗಲು ಪೋಷಕರು ತಯಾರಿಲ್ಲ. ನಾನು ಅವರಿಗೆ ಅವಶ್ಯ ಪುಸ್ತಕಗಳನ್ನು, ಸಾದಿಲ್ವಾರನ್ನು ಕೊಂಡುಕೊಡಲು ಸಿದ್ಧನಿದ್ದೇನೆ. ಆದರೆ ಪಟ್ಟಣಕ್ಕೆ ಕರೆದೊಯ್ದು ಬರುವ ಜವಾಬ್ದಾರಿಯನ್ನು ಹೊರಲು ನನಗೆ ಸಾಧ್ಯವಾಗದು. ದಾರಿಯಲ್ಲೇನಾದರೂ ಅವಘಡವಾದರೆ ಏನು ಗತಿ, ಜವಾಬ್ದಾರಿ ನನ್ನ ತಲೆಗೆ ಬರುತ್ತದೆ. ಆಗ ದೇವರೇ ಗತಿ.”

ಇಲ್ಲಿನ ಜನಸಮುದಾಯದಲ್ಲಿ ಭಿಲ್ಲರು (ಪರಿಶಿಷ್ಟ ಬುಡಕಟ್ಟು) ಮತ್ತು ನಾಥರು (ಹಿಂದುಳಿದ ವರ್ಗ) ಸಮಾನ ಪ್ರಮಾಣದಲ್ಲಿದ್ದಾರೆ. ಬಹುತೇಕ ಪೋಷಕರು ಅನಕ್ಷರಸ್ಥರು. ಕೇವಲ ನಾಲ್ಕೈದು ಕುಟುಂಬಕ್ಕೆ ಮಾತ್ರ ಸ್ವಂತ ಉಳಲು ಆಗುವಷ್ಟು ಭೂಮಿ ಇದೆ. ಉಳಿದವರಿಗೆ ಇರುವ ಭೂಮಿ ಬಲು ಅಲ್ಪ; ಅವರು ಕೃಷಿ ಕಾರ್ಮಿಕರಾಗಿಯೇ ಬದುಕು ಕಟ್ಟಿಕೊಳ್ಳಬೇಕು. “ಅದೇನೇ ಇದ್ದರೂ ಅವರಿಗೆಲ್ಲಾ ಸ್ವಂತ ಎಮ್ಮೆಗಳಿದ್ದು, ಮನೆಗೆ ಬೇಕಾಗುವಷ್ಟು ಹಾಲಂತೂ ದೊರಕುತ್ತದೆ” ಎಂದು ಕೈಲಾಶ್ ಹೇಳಿದರು. ಅವಶ್ಯಕತೆ ಇದ್ದಾಗ ಈ ಸಮುದಾಯ ತಮ್ಮದೇ ಸಣ್ಣ ನಿಧಿಯನ್ನು ಕೂಡಿಸಿ ಕೊಡುತ್ತಾರೆ. ಅವರಿಗೆ ತಮ್ಮ ಶಾಲೆ ಚೆನ್ನಾಗಿದೆ, ಕೈಲಾಶ್ ಮತ್ತು ಅಶೋಕ್ ತಮ್ಮ ಕೈಲಾದದ್ದನ್ನೆಲ್ಲಾ ಮಾಡುತ್ತಿದ್ದಾರೆ ಎಂಬ ಅರಿವಿದೆ. ಹತ್ತಿರದಲ್ಲೇ ಒಂದು ಖಾಸಗಿ ಶಾಲೆಯಿದೆ. ಅಶೋಕ್ ಕೊಂಚ ಎದೆಯುಬ್ಬಿಸಿ ಹೇಳುತ್ತಾರೆ. “ಕೊಯಿ ನಹೀಂ ಜಾಯೇಂಗೆ ವಹಾಂ, ಕ್ಯೋ ಜಾಯೇಂಗೆ?” (ಅಲ್ಲಿಗೆ ಯಾರೂ ಹೋಗುವುದಿಲ್ಲ, ಏಕೆ ಹೋದಾರು?) ಪೋಷಕರಿಗೆ ತಮ್ಮ ಮಕ್ಕಳು ಇಲ್ಲಿ ಚೆನ್ನಾಗಿ ಕಲಿಯುತ್ತಿದ್ದಾರೆ ಎಂಬುದು ತಿಳಿದಿದೆ.

ಸಂಜೆ ಐದು ಘಂಟೆಯಾದರೂ ಹುಡುಗರು ಇನ್ನೂ ಅಲ್ಲೇ ಇದ್ದರು. ಗೇಟಿನಿಂದಾಚೆ ಮೂರು ಜನ ಮಹಿಳೆಯರು ಬಣ್ಣಬಣ್ಣದ ಬಟ್ಟೆಗಳನ್ನು ಧರಿಸಿ, ಮುಖದ ತುಂಬಾ ಸೆರಗು ಹೊದ್ದು ನಿಂತಿದ್ದರು. ಅವರಲ್ಲಿ ಒಬ್ಬಾಕೆ ಎರಡು ದೊಡ್ಡ ಸ್ಟೀಲ್ ಬಿಂದಿಗೆಗಳನ್ನು (ಭಾರತದ ಅನೇಕ ಕಡೆ ಅವುಗಳನ್ನು ಅಂಡಾ ಎನ್ನುತ್ತಾರೆ) ಎರಡೂ ಕೈ ಬಿಟ್ಟು

ಸುಂದರವಾಗಿ ತಲೆಯ ಮೇಲೆ ಸಮತೋಲನದಿಂದ ಇರಿಸಿಕೊಂಡಿದ್ದರು. ಈ ಮಹಿಳೆಯರಲ್ಲಿ ಇಬ್ಬರು ಎಸ್‌ಡಿಎಮ್‌ಸಿ ಸದಸ್ಯೆಯರೆಂದೂ, ಒಬ್ಬಾಕೆ ಅಧ್ಯಕ್ಷರೆಂದೂ ಶಿಕ್ಷಕರು ನಮಗೆ ತಿಳಿಸಿದರು. ಶಿಕ್ಷಕರು, ಹೆಣ್ಣುಮಕ್ಕಳು ಹಾಗೂ ವಿದ್ಯಾರ್ಥಿಗಳೊಂದಿಗೆ ನಾವು ನೆನಪಿಗೆಂದು ಒಂದು ಫೋಟೋ ತೆಗೆಸಿಕೊಂಡೆವು. ಮಧ್ಯದಲ್ಲಿ ನಮ್ಮ ಗಮನ ಸೆಳೆಯಲಿಕ್ಕೆ ಎಂಬಂತೆ ಅಡ್ಡಬರುತ್ತಿದ್ದ ಎಮ್ಮೆಗಳಿಂದಾಗಿ ನಾವು ಹಲವಾರು ಚಿತ್ರಗಳನ್ನೇ ತೆಗೆಸಿಕೊಳ್ಳಬೇಕಾಯಿತು.

# 4

## ಒಗ್ಗಟ್ಟಿನ ಕೆಲಸ : ಅತೀತ ಗುರಿಗಳತ್ತ ಸೆಳೆತ

ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯಲ್ಲಿ ಅನೇಕ ಬಾರಿ ವ್ಯಕ್ತಿ ಜೀವನಪರ್ಯಂತ ಸರ್ಕಾರಿ ಶಿಕ್ಷಕನಾಗಿ ಸೇವೆ ಸಲ್ಲಿಸಿದರೂ ಯಾರೂ ಗುರುತಿಸದೆ, ಗೌರವಿಸದೆ ಅವಗಣನೆಗೆ ಒಳಗಾಗಬಹುದು. ಆದರೆ ಇದೇ ವಾತಾವರಣದಲ್ಲಿಯೇ ಅನೇಕ ಶಿಕ್ಷಕರು 'ಮನ್ನಣೆಯ ದಾಹ'ಕ್ಕೆ ಒಳಗಾಗದೆ ಅಂತರಂಗದ ಕರೆಗೆ ಓಗೊಟ್ಟು ತಮ್ಮ ಶಾಲೆಗೆ ಬರುವ ಅತ್ಯಂತ ಹಿಂದುಳಿದ ಹಿನ್ನೆಲೆಯ ಮಕ್ಕಳನ್ನು ಮೇಲೆತ್ತಲು ಸರ್ವಸ್ವವನ್ನೂ ಧಾರೆಯೆರೆಯುವುದನ್ನು ನಾವು ಕಾಣುತ್ತೇವೆ. ಅನೇಕ ಬಾರಿ ಇಂಥ ಶಿಕ್ಷಕರು ಒಂಟಿಯಾಗಿ ತಮ್ಮ ಶಾಲೆಯಲ್ಲಿ ಏಕಾಂಗಿ ವೀರರಂತೆ ಸೆಣಸಾಡುತ್ತಾರೆ. ಆ ಶಾಲೆಯ ಭವಿಷ್ಯವು ಸಂಪೂರ್ಣವಾಗಿ ಅವರ ಮೇಲೆಯೇ ಅವಲಂಬಿತವಾಗಿರುತ್ತದೆ. ಅತ್ಯುತ್ತಮ ಶಿಕ್ಷಕರ ಒಂದು ತಂಡ ರೂಪುಗೊಂಡಾಗ ಮಾತ್ರ ಒಂದು ಶಾಲೆಯ ಭವಿಷ್ಯ ಸುಭದ್ರವಾಗುತ್ತದೆ. ಹೀಗಾಗಿ ಯಾವುದೇ ಶಾಲೆಯ ಯಶಸ್ಸಿಗೆ ಕೇವಲ ಒಬ್ಬ ಶಿಕ್ಷಕ ಕಾರಣವಲ್ಲ. ಬದಲಿಗೆ ಒಂದು ಮಧುರ, ಗಟ್ಟಿ ಬಾಂಧವ್ಯವಿರುವ ಶಿಕ್ಷಕರ ತಂಡವು ಯಾವುದೇ ಶಾಲೆಯಲ್ಲಿ ಗೋಚರಿಸಿದಾಗ ಅದು ನನ್ನ ಸಂತೋಷವನ್ನು ದ್ವಿಗುಣಗೊಳಿಸುತ್ತದೆ.

ಅನೇಕರು ಸೇರಿ ಒಂದು ಶಾಲೆಯನ್ನು ಏಕೋಭಾವದಿಂದ ಸಮರ್ಥವಾಗಿ ನಡೆಸಿಕೊಂಡು ಹೋಗುತ್ತಿದ್ದಾರೆ ಎಂದರೆ – ಅಲ್ಲಿ ನನಗೆ ಎಲ್ಲಕ್ಕಿಂತ ಹೆಚ್ಚು ಮಹತ್ವದ್ದೆಂದು ಅನಿಸುವುದು ಅವರು ಹೊಂದಿರುವ ಉನ್ನತ ಗುರಿಗಳಾಗಲಿ, ಎಲ್ಲರೂ ಸಮಾನವಾಗಿ ಶ್ರಮ ವಹಿಸುತ್ತಿದ್ದಾರೆ ಎಂಬುದಾಗಲಿ ಅಲ್ಲ; ಬದಲಾಗಿ ತಮ್ಮಲ್ಲಿ ಪ್ರತಿಯೊಬ್ಬರ ಪ್ರತಿಭೆ, ಶಕ್ತಿ, ಸಾಮರ್ಥ್ಯಗಳು ಒಂದೇ ಮಟ್ಟದಲ್ಲಿರದೆ ಬೇರೆಬೇರೆಯಾಗಿವೆ ಎಂಬುದನ್ನು ಒಪ್ಪಿಕೊಂಡು ಸೌಹಾರ್ದ, ಸಂತೋಷಗಳಿಂದ ಕೆಲಸ ಮಾಡುತ್ತಿದ್ದಾರೆ ಎಂಬುದು. ಇಂಗ್ಲಿಷ್, ವಿಜ್ಞಾನ, ಗಣಿತ, ಸಮಾಜ ವಿಜ್ಞಾನ ಮತ್ತು ಪ್ರಥಮ ಭಾಷೆ ಹೀಗೆ ಐದು ವಿಭಿನ್ನ ವಿಷಯ, ಶಿಸ್ತುಗಳಿಗೆ ಸೇರಿದ ಐವರು ಶಿಕ್ಷಕರು ವಿಭಿನ್ನ ಅನುಭವ, ವಿಭಿನ್ನ ವಿದ್ಯಾರ್ಹತೆಗಳು ಮತ್ತು ಬೋಧನಾ ಸಾಮರ್ಥ್ಯಗಳೊಂದಿಗೆ ಒಂದೇ ಮಟ್ಟದ ಬದ್ಧತೆಯನ್ನು ಹೊಂದಿದ್ದು ಒಗ್ಗಟ್ಟಾಗಿದ್ದರು. ಯಾವುದೇ ವೃತ್ತಿಯಲ್ಲಿ, ಯಾವುದೇ ತಂಡಕ್ಕೆ ಇದೊಂದು ಅಮೂಲ್ಯವಾದ ಪಾಠವೇ ಸರಿ.

ರಾಷ್ಟ್ರೀಯ ಮಾನವ ಸಂಪನ್ಮೂಲ ಅಭಿವೃದ್ಧಿ (ಮಾನವ ಸಂಪನ್ಮೂಲ ವೃತ್ತಿನಿರತರ ಉನ್ನತ ಸಂಸ್ಥೆ)ಯ ಪತ್ರಿಕೆಗೆ ಬರೆಯುತ್ತಾ ನಾನು ಈ ಪ್ರಕ್ರಿಯೆಯನ್ನು ಬಹಳಷ್ಟು ಚರ್ಚೆಗೂ ಸಂಶೋಧನೆಗೂ ಒಳಗಾದ 'ಪಿಗ್‌ಮೇಲಿಯನ್ ಪರಿಣಾಮ' (Pygmalion effect)ದ ಒಂದು ರೂಪ ಎಂದು ಕರೆದಿದ್ದೆ. ಈ ಶಿಕ್ಷಕರು ತಮ್ಮ ಕುರಿತಾದ ನಿರೀಕ್ಷೆಯ ಮಟ್ಟವನ್ನು ತಾವೇ ಎತ್ತರಿಸಿಕೊಂಡು, ಅದರಾಚೆಗೆ ಜಿಗಿಯಲು ಯತ್ನಿಸುತ್ತಿರುವುದರ ಹಿಂದೆ ಇಂಥ ಒಂದು ವಿದ್ಯಮಾನವಿದೆ ಎಂದು ನಾನು ವಾದಿಸಿದ್ದೆ. 'ಪಿಗ್‌ಮೇಲಿಯನ್ ಪರಿಣಾಮ'ಕ್ಕೆ ಪ್ರಚೋದನೆ ಎಲ್ಲ ಕಡೆಯಿಂದ ಬರುತ್ತದೆ. ಕೆಲವೊಂದು ಮಾದರಿ ಶಾಲೆಗಳಲ್ಲಿ ದುಡಿಯುವ ಶಿಕ್ಷಕರಿಗೆ ಬಹಳ ದೊಡ್ಡ ಶಿಕ್ಷಕ ಸಮುದಾಯದ ನಡುವೆ 'ಇವರು ಉತ್ತಮರು' ಎಂದು ಆಯ್ಕೆಯಾಗಿರುವುದೇ ಒಂದು ಪ್ರೇರಣೆ. ಇನ್ನು ಕೆಲವರಿಗೆ ಅತ್ಯಂತ ಹಿಂದುಳಿದ ಸಮುದಾಯಗಳಿಂದ ಬಂದ ವಿದ್ಯಾರ್ಥಿಗಳಿಗೆ ಕಲಿಸುವ ಅವಕಾಶ ತಮಗೆ ದೊರೆತಿದೆ, ಅವರ ಭವಿಷ್ಯ ತಮ್ಮ ಕೈಯಲ್ಲಿದೆ ಎಂಬುದೇ ಪ್ರೇರಣೆ. ಕೆಲವರಿಗೆ ಇನ್ನೊಂದು ರೀತಿಯ ನೈತಿಕ ಪ್ರೇರಣೆ ಇದ್ದು, ಅದನ್ನು ಒಬ್ಬ ಶಿಕ್ಷಕರು ಹೀಗೆ ಅಭಿವ್ಯಕ್ತಿಸಿದರು: "ನಮ್ಮ ಶಾಲೆಯು ಮೂಲ ಸೌಕರ್ಯ ಮತ್ತು ಶಿಕ್ಷಕರು ಎರಡೂ ದೃಷ್ಟಿಗಳಿಂದಲೂ, ಬೇರೆ ಶಾಲೆಗಳಿಗಿಂತ ಅತ್ಯುತ್ತಮ ಸಂಪನ್ಮೂಲಗಳನ್ನು ಹೊಂದಿದೆ, ಹೀಗಾಗಿ ನಮ್ಮ ಮಕ್ಕಳಿಗೆ ಸಾಧ್ಯವಾದಷ್ಟು ಅತ್ಯುತ್ತಮ ಶಿಕ್ಷಣವನ್ನು ಖಾತ್ರಿ ಪಡಿಸಬೇಕಾದದ್ದು ನಮ್ಮ ಕರ್ತವ್ಯ". ಆದ್ದರಿಂದ ನಾವು ಇಂಥ ತಂಡಗಳಿಂದ, 'ಕುಛ್ ಕರ್‌ಕೆ ದಿಖಾನಾ ಹೆ' (ಏನಾದರೂ ಮಾಡಿ ತೋರಿಸಬೇಕು) ಎಂಬ ಮಾತನ್ನು ಕೇಳಿದ್ದರಲ್ಲಿ ಯಾವ ಅಚ್ಚರಿಯೂ ಇಲ್ಲ.

ಕೊನೆಗೂ ನಮ್ಮ ಕೆಲಸವೇ ಎಲ್ಲವನ್ನೂ ಹೇಳುತ್ತದೆ. ಇಂಥ ಕೆಲವೊಂದು ಶಾಲೆಗಳಲ್ಲಿ ಶಿಕ್ಷಕರು ತುಂಬಾ ಕಡಿಮೆ ಅವಧಿಯಲ್ಲಿ (ಇತರರಿಗೆ ಅದು ಹೆಚ್ಚಿನ ಕಾಲಾವಧಿಯನ್ನು ತೆಗೆದುಕೊಳ್ಳಬಹುದು) ಅನೇಕ ಕ್ರಿಯೆಗಳನ್ನು ಏಕಕಾಲಕ್ಕೆ ಜಾರಿಗೆ ತಂದಿದ್ದಾರೆ. ಶಾಲೆ ಮುಗಿದ ಮೇಲೂ ಸಾಕಷ್ಟು ಕಾಲ ಮಕ್ಕಳೊಂದಿಗೆ ಸಮಯ ಕಳೆಯುವುದು, ಕೆಲವೊಮ್ಮೆ ಭಾನುವಾರ ಅಥವಾ ರಜಾದಿನಗಳಲ್ಲೂ ಶಾಲೆಗೆ ಬರುವುದು, ಮನೆ ಮನೆಗೆ ಭೇಟಿ ನೀಡಿ ಪೋಷಕರನ್ನು ಸಂಪರ್ಕಿಸುವುದು, ತಮ್ಮದೇ ಹಣದಿಂದ ಸಾಮಗ್ರಿಗಳನ್ನು, ಸೌಲಭ್ಯಗಳನ್ನು ಒದಗಿಸುವುದು, ಜೊತೆಗೆ ತಮ್ಮ ವಿಷಯ ಜ್ಞಾನವನ್ನು ವೃದ್ಧಿಸಿಕೊಳ್ಳುವುದು – ಇಂಥ ಕ್ರಮಗಳು ಇವುಗಳಲ್ಲಿ ಪ್ರಮುಖವಾದುವುಗಳು. ಪ್ರತಿಯೊಂದು ಮಗುವಿನ ಸಾಧನೆಯ ವರದಿಯನ್ನು ಇಟ್ಟುಕೊಳ್ಳುವ ಮೂಲಕ ಮಗುವಿನ ಪ್ರಗತಿಯ ಮೇಲೆ ನಿಗಾವಹಿಸುವುದು ಸಹ ಇಂತಹ ಒಂದು ರಚನಾತ್ಮಕ ಕ್ರಮವಾಗಿದೆ. ಅಗತ್ಯವಿರುವ ಮಕ್ಕಳಿಗೆ ವಿಶೇಷ ಗಮನ ಹರಿಸುವುದು ಮತ್ತು ಅಗತ್ಯ ಬೆಂಬಲ ನೀಡುವುದು, ಪ್ರತಿಭಾವಂತ ಮಕ್ಕಳನ್ನು ನವೋದಯ ಶಾಲೆಯ ಪ್ರವೇಶ ಪರೀಕ್ಷೆಗೆ, 'ಗಣಿತ ಮಾಂತ್ರಿಕ' ಮುಂತಾದ ಸ್ಪರ್ಧೆಗಳಿಗೆ ತಯಾರು ಮಾಡಲು ಪ್ರತ್ಯೇಕ ವೇಳಾಪಟ್ಟಿಯನ್ನು, ಯೋಜನೆಯನ್ನು ಹಾಕಿಕೊಳ್ಳುವುದು ಮುಂತಾದವೂ ಈ ಕ್ರಮಗಳಲ್ಲಿ ಸೇರುತ್ತವೆ. ಈ ಶಿಕ್ಷಕರು ಮಹತ್ವಾಕಾಂಕ್ಷೆಯಿಂದಲೂ

ಉತ್ಸಾಹದಿಂದಲೂ ತುಂಬಿ ತುಳುಕುತ್ತಿದ್ದರು. ಇಡೀ ಪ್ರದೇಶದಲ್ಲಿಯೇ ತಮ್ಮದು ಅತ್ಯುತ್ತಮ ಶಾಲೆ ಆಗಬೇಕೆಂಬ ಹಂಬಲ ಅವರಲ್ಲಿ ತುಂಬಿತ್ತು. ಶಾಲೆಗೆ ಬೇಗ ಬರುವ ಉತ್ಸುಕತೆ ಅವರಲ್ಲಿ ಇರುತ್ತಿತ್ತು, ಆದರೆ ವಾಪಸ್ ಹೋಗುವುದು ತಡವಾದರೆ ಬೇಸರವಿರುತ್ತಿರಲಿಲ್ಲ. ಹೀಗಾಗಿ ತೀರಾ ದುರ್ಗಮ ಪ್ರದೇಶಗಳಾದ ಕೂಡಲಗಿ, ವೀರ್‌ಪುರ್ ಕುರಾಹ ಮುಂತಾದ ಕಡೆ ಶಿಕ್ಷಕರು "ನಮಗೆ ಯಾವುದೂ ಹೊರೆಯಲ್ಲ, ನಮಗೆಲ್ಲ ಒಂದು ಸಮಾನ ಧ್ಯೇಯವಿದೆ" ಎಂದಾಗ ನಮಗದು ಕೃತಕವೆಂದು ಅನಿಸಲಿಲ್ಲ.

ಇದರಲ್ಲಿ ಕೊನೇಪಕ್ಷ ಒಂದೆರಡು ಶಾಲೆಗಳಲ್ಲಿ ನೈಜವಾದ ಅರ್ಥದಲ್ಲಿ ಮುಖ್ಯೋಪಾಧ್ಯಾಯರು ಇರಲೇ ಇಲ್ಲ ಎನ್ನಬಹುದು. ಒಂದೋ ಅವರು ಹೆಸರಿಗೆ ಮಾತ್ರವೇ ಎಂಬಂತೆ ಉತ್ಸಾಹ ಬತ್ತಿದ ವ್ಯಕ್ತಿಯಾಗಿದ್ದರು ಇಲ್ಲವೇ ಕಾಯಿಲೆ ಪೀಡಿತರಾಗಿದ್ದರು. ಆದರೆ ಉಳಿದ ಶಿಕ್ಷಕರು ಯಾವ ಬೇಸರವೂ ಇಲ್ಲದೆ ಶಾಲೆಯ ಜವಾಬ್ದಾರಿಯನ್ನು ತಮ್ಮ ಹೆಗಲ ಮೇಲೆ ಹೊತ್ತು ನಡೆದಿದ್ದರು; ಇದರಿಂದ ಅನಿವಾರ್ಯವಾಗಿ, ಇತರ ಶಿಕ್ಷಕರಲ್ಲಿ ಸಾಮರ್ಥ್ಯಗಳೂ ಆಲೋಚನೆಗಳೂ ಬದ್ಧತೆಯೂ ಇರುವವರು ವಸ್ತುಶಃ ನಾಯಕರಾಗಿ ಹೊರಹೊಮ್ಮುತ್ತಿದ್ದರು; ಇತರರು ತಾವಾಗಿಯೇ ಅವರನ್ನು ಒಪ್ಪಿಕೊಂಡು ಬೆಂಬಲಿಸುತ್ತಿದ್ದರು.

ತಂಡಕಾರ್ಯದ ಏಕೋಭಾವದ ಕುತೂಹಲಕಾರಿಯಾದ ಒಂದು ವಿಷಯವನ್ನು ನಾನಿಲ್ಲಿ ಹಂಚಿಕೊಳ್ಳಬೇಕು. ಇಂತಹ ಏಕೋಭಾವದ ಬಾಂಧವ್ಯವಿರುವ ಅನೇಕ ಶಾಲೆಗಳಲ್ಲಿ ನಾವು ಶಿಕ್ಷಕರಿಗೆ, ನಿಮ್ಮ ಬಗ್ಗೆ ನೀವೇ ಏನಾದರು ಹೇಳಿ ಎಂದಾಗ ಅವರ ಸಹೋದ್ಯೋಗಿಗಳು ಇವರ ಬಗ್ಗೆ ಮಾಹಿತಿ ಕೊಡಲು ಆರಂಭಿಸುತ್ತಿದ್ದರು. ಈ ಪ್ರಕ್ರಿಯೆಯು ಅಲ್ಲಿ ಪರಸ್ಪರರ ಸಾಮರ್ಥ್ಯ, ಸಾಧನೆಗಳ ಬಗೆಗೆ ಹೆಮ್ಮೆಪಡುವ ಚರ್ಚೆಯಾಗಿ ಮಾರ್ಪಡುತ್ತಿತ್ತು. ಇಂಥದೊಂದು ಶಾಲೆಯಲ್ಲಿನ ವಿಜ್ಞಾನದ ಒಬ್ಬ ಶಿಕ್ಷಕಿಯು ಮಕ್ಕಳನ್ನು ರಾಷ್ಟ್ರೀಯ ಬಾಲ ವಿಜ್ಞಾನ ಕಾಂಗ್ರೆಸ್‌ಗೆ ತಯಾರು ಮಾಡುತ್ತಿದ್ದರು. ಆಕೆ ವಿಷಯದಲ್ಲಿ ಪರಿಣತರಾಗಿದ್ದರೂ ಕೆಲಸಕ್ಕೆ ಹೊಸಬರಾಗಿದ್ದರು; ಅವರಿಗೆ ಸರ್ಕಾರಿ ಶಾಲೆಯ ವಾತಾವರಣದ ಬಗ್ಗೆ ಹೆಚ್ಚೇನೂ ತಿಳಿದಿರಲಿಲ್ಲ. ಹೀಗಾಗಿ ಅವರಿಗೆ ಇಪ್ಪತ್ತು ವರ್ಷ ಸರ್ಕಾರಿ ಶಾಲೆಗಳಲ್ಲಿ ದುಡಿದಿದ್ದ ಒಬ್ಬ ಹಿಂದಿ ಶಿಕ್ಷಕರು ಸಹಾಯಹಸ್ತ ಚಾಚಿದರು. ತಾವು ಹಿಂದೆ ಕೆಲಸ ಮಾಡಿದ ಶಾಲೆಯಲ್ಲಿನ ವಿಜ್ಞಾನ ಶಿಕ್ಷಕರ ಕೆಲಸವನ್ನು ಸೂಕ್ಷ್ಮವಾಗಿ ಗಮನಿಸಿ ತಿಳಿದುಕೊಂಡಿದ್ದ ಅವರು ಈ ಶಿಕ್ಷಕಿಗೆ ವಿಜ್ಞಾನದ ಪ್ರಾಜೆಕ್ಟ್ ತಯಾರಿ ಸಂಬಂಧವಾಗಿ ಒಳನೋಟಗಳನ್ನು ನೀಡಿದರು. ಈ ಸಹಾಯಕ್ಕೆ ಕೃತಜ್ಞರಾದ ಕಿರಿಯ ಶಿಕ್ಷಕಿಯು ನಮ್ಮೊಂದಿಗೆ ಮಾತನಾಡುವಾಗ ಈ ವಿಷಯವನ್ನು ತಿಳಿಸಿ ಈ ಶಾಲೆಯಲ್ಲಿನ 'ವಿಜ್ಞಾನದ ಕಲಿಕೆಗೆ ಹಿಂದಿ ಶಿಕ್ಷಕರ ಕೊಡುಗೆ ದೊಡ್ಡದು' ಎಂದರು. ನಾನು ಒಮ್ಮೆ ಹಿಂದಿ ಶಿಕ್ಷಕರತ್ತ ಓರೆನೋಟವನ್ನು ಹರಿಸಿದಾಗ ಆತ ಆ ಉತ್ತರಕಾಶಿಯ ಚಳಿಗಾಲದ ಇಳಿಬಿಸಿಲಿನಲ್ಲಿ ನಾಚಿ ಕೆಂಪಾಗಿದ್ದರು.

ಹಿಂದಿನ ವಿಭಾಗಗಳಲ್ಲಿ ಹೇಳಿದ ಅನೇಕ ಗುಣವಿಶೇಷಗಳನ್ನು ಈ ವಿಭಾಗವು

ಬಹುಶಃ ಒಂದು ಮೊತ್ತವಾಗಿ ಕ್ರೋಡೀಕರಿಸಿ ನಿಮ್ಮ ಮುಂದೆ ಮಂಡಿಸುತ್ತದೆ. ಜೊತೆಗೆ ಆ ಗುಣವಿಶೇಷಗಳೆಲ್ಲವೂ ಒಂದು ಶಕ್ತಿಯಾಗಿ ಇಲ್ಲಿನ ಕಥನಗಳಲ್ಲಿ ಹೊರಹೊಮ್ಮುತ್ತವೆ. ಏಕೋಭಾವದ ಶಿಕ್ಷಕರ ಪರಿಶ್ರಮದ ಈ ಕಥೆಗಳು ವಿಭಿನ್ನ ಹಿನ್ನೆಲೆಯಿಂದ ಬಂದವರ ವೃತ್ತಿಜೀವನದ ಇತಿವೃತ್ತಗಳಾಗಿವೆ. ಇವುಗಳಲ್ಲಿ ಕೆಲವು ಅತ್ಯುತ್ತಮ ಸೌಲಭ್ಯಗಳಿದ್ದ ಮಾದರಿ ಶಾಲೆಗಳಿಗೆ ಸಂಬಂಧಿಸಿದ್ದಾದರೆ, ಇನ್ನು ಕೆಲವು ಸ್ಥಳೀಯ ರಾಜಕೀಯದಿಂದ ಕೆಟ್ಟುಹೋದ ಸಾಧಾರಣ ಶಾಲೆಗಳದ್ದಾಗಿವೆ. ನಾನು ಈ ಭಾಗದಲ್ಲಿ ಮಂಡಿಸುತ್ತಿರುವ ತಂಡಗಳಿಗೆ ಹೊರಗಿನಿಂದ ಉಸ್ತುವಾರಿಯಾಗಲಿ, ಪ್ರೇರಣೆಯಾಗಲಿ ಅಗತ್ಯವಿಲ್ಲ. ಅವರು ತಮ್ಮ ಕುರಿತಾದ ನಿರೀಕ್ಷೆಗಳನ್ನು ತಮಗೆ ತಾವೇ ಮರು ನಿಷ್ಕರ್ಷೆ ಮಾಡಿಕೊಂಡವರು. ತಮ್ಮ ಆ ಸಾಧನೆಯ ಉನ್ನತಿಯ ನೆಲೆಗಿಂತ ಕೆಳಗಿನದಾದ ಯಾವುದೇ ಸ್ಥಾನಕ್ಕೂ ಅವರು ಸಿದ್ಧರಿರಲಿಲ್ಲ. ಈ ಪ್ರಕ್ರಿಯೆಯಲ್ಲಿ ಅವರು ತಮ್ಮನ್ನೇ ಮತ್ತೆಮತ್ತೆ ಪರಿಷ್ಕರಣಕ್ಕೆ ಒಳಪಡಿಸಿಕೊಂಡಿದ್ದು ಹೊಸ ವಿಷಯಗಳನ್ನು ಕಲಿತಿದ್ದಾರೆ. ವೃತ್ತಿಪರತೆಯಲ್ಲಿ ಪ್ರಗತಿಯನ್ನು ಕಾಣುವುದಲ್ಲದೆ ತಮ್ಮ ಸಂಕಲ್ಪವನ್ನು ನವೀಕರಿಸಿಕೊಂಡಿದ್ದಾರೆ. ವೃತ್ತಿವಲಯಗಳಲ್ಲಿ ಸಾಮಾನ್ಯವಾಗಿ, ಜನರು ಮನ್ನಣೆ, ಪ್ರಶಸ್ತಿಗಳ ಆಸೆಯಿಂದ ಕೆಲಸ ಮಾಡುವುದು ಸಹಜ. ಆದರೆ ಇಲ್ಲಿ, ಸರ್ಕಾರಿ ಶಾಲೆಗಳಲ್ಲಿ ಒಬ್ಬ ಶಿಕ್ಷಕರು ನಮಗೆ ಹೇಳಿದಂತೆ, "ನಾವು ಇದನ್ನೆಲ್ಲ ಮಾಡುತ್ತಿರುವುದು ಯಾರೋ ಹೇಳಿದ್ದಾರೆ ಎಂದೋ ಅಥವಾ ಯಾವುದೋ ಪ್ರಶಸ್ತಿಯ ನಿರೀಕ್ಷೆಯಿಂದಲೋ ಅಲ್ಲ."

ಇದು ಅಂತರಂಗದ ಕರೆ. ಇದನ್ನು ಬೇರೆ ಯಾರೂ ಕಾಣಲಾರರು, ಕೇಳಲಾರರು. ಈ ಕಾರಣಕ್ಕಾಗಿಯೆ ಈ ತಂಡಗಳು ಅಸಾಧಾರಣವಾದವುಗಳು.

---

## ಇದು ಕೇವಲ "ಸರ್ಕಾರಿ ನೌಕರಿಯಲ್ಲ", ನಾವು ಇಲ್ಲಿ ಇರುವುದು ಈ ಬ್ಲಾಕ್‌ನಲ್ಲಿಯೇ ಅತ್ಯುತ್ತಮ ಶಾಲೆಯನ್ನು ಸೃಷ್ಟಿಸಲೆಂದು

**ಸಂಜಯ್ ಕುಕ್ಸಾಲ್, ಮುಕೇಶ್ ನೌತಿಯಾಲ್, ಮೀನಾ ಭಟ್, ಬಿಂದು ಗೂಸಾಯಿ ಪಡಿಯಾರ್, ಮುರಾರಿ ರಾಣಾ, ಸುಶೀಲಾ ರಾವತ್**

ಆದರ್ಶ ಪ್ರಾಥಮಿಕ ಶಾಲೆ, ಬರೇಠಿ, ಚಿನ್ಯಾಲಿ ಬ್ಲಾಕ್, ಉತ್ತರಕಾಶಿ ಜಿಲ್ಲೆ, ಉತ್ತರಾಖಂಡ್

---

ಸರ್ಕಾರಿ ಶಾಲೆಯ ವಿದ್ಯಾರ್ಥಿಗಳಿಗೆ ಅತ್ಯುತ್ತಮ ಗುಣಮಟ್ಟದ ಶಿಕ್ಷಣವನ್ನು ನೀಡುವುದು ಹೇಗೆ ಎನ್ನುವುದಕ್ಕೆ ನಿದರ್ಶನಾತ್ಮಕವಾಗಿ, ಪ್ರತಿಯೊಂದು ಬ್ಲಾಕ್‌ನಲ್ಲಿಯೂ ಒಂದೆರಡು ಮಾದರಿ ಶಾಲೆಗಳನ್ನು ರೂಪಿಸಬೇಕೆನ್ನುವ ಸರ್ಕಾರದ ನೀತಿಯ ಬಗ್ಗೆ ವಿಭಿನ್ನ ರೀತಿಯ ಅಭಿಪ್ರಾಯಗಳು ಇರಲು ಸಾಧ್ಯ. ಇದನ್ನು ಸಾಧಿಸಲು ಶಿಕ್ಷಕರೂ ಸೇರಿದಂತೆ ವಿನಿಯೋಗಿಸಲು ಹೆಚ್ಚಿನ ಸಂಪನ್ಮೂಲಗಳು ಇವೆಯೇ ಅಥವಾ ಇನ್ಯಾವುದೇ ರೀತಿಯಲ್ಲಿ ವ್ಯವಸ್ಥಿತವಾಗಿ ಗುಣಮಟ್ಟವನ್ನು ಸುಧಾರಿಸುತ್ತವೆಯೇ ಅಥವಾ ಸುವ್ಯವಸ್ಥಿತ ಸಾಂಸ್ಥಿಕ ಕ್ರಿಯೆಗಳನ್ನು ಇವು ಹುಟ್ಟುಹಾಕುತ್ತವೆಯೇ ಎನ್ನುವುದರ ಬಗೆಗೂ ಚರ್ಚೆ

ಸಾಧ್ಯ. ಈ ವಿಶಾಲವಾದ ಪ್ರಶ್ನೆಗಳನ್ನು ಪಕ್ಕಕ್ಕಿರಿಸಿ, 2015ರಿಂದ ಉತ್ತರಕಾಶಿ ಜಿಲ್ಲೆಯಲ್ಲಿ ಈ ನೀತಿಯನ್ನು ಜಾರಿಗೊಳಿಸಿರುವುದನ್ನು ಮಾತ್ರವೇ ಪರಿಗಣನೆಗೆ ತೆಗೆದುಕೊಂಡರೆ ಇದರ ಬಗ್ಗೆ ಸರ್ಕಾರವು ಪ್ರಾಮಾಣಿಕವಾಗಿದೆ ಅನಿಸುತ್ತದೆ. ಗಂಗಾ ಕಣಿವೆಯಲ್ಲಿನ ಚಿನ್ಯಾಲಿ, ದುಂಡಾ ಮತ್ತು ಭಟ್‌ವಾರಿ ತಾಲ್ಲೂಕುಗಳಲ್ಲಿ, ಯಮುನಾ ಕಣಿವೆಯಲ್ಲಿನ ಪುರೋಲಾ ಹಾಗೂ ನೌಗಾಂವ್ ಬ್ಲಾಕ್‌ನಲ್ಲಿ ಮಾದರಿ ಶಾಲೆಗಳೆಂದು ಗುರುತಿಸಲಾದ ಶಾಲೆಗಳಿಗೆ ವಿಳಂಬವಿಲ್ಲದೆ ಎಚ್ಚರಿಕೆಯಿಂದ ಆಯ್ದ ಶಿಕ್ಷಕರನ್ನು ಒದಗಿಸಿರುವುದನ್ನು, ಈ ಯೋಜನೆಯು ಯಶಸ್ವಿಯಾಗುವ ಸಾಧ್ಯತೆ ಹೆಚ್ಚಾಗುವಂತೆ ನೋಡಿಕೊಂಡಿರುವುದನ್ನು ನಾವು ಗಮನಿಸಿದೆವು. ಇದು ಚಿನ್ಯಾಲಿ ಬ್ಲಾಕ್‌ನ, ಬರೇಠಿಯ ಮಾದರಿ ಪ್ರಾಥಮಿಕ ಶಾಲೆಯ ವಿಚಾರದಲ್ಲಿಯೂ ಸತ್ಯ.

ಐದು ತರಗತಿಗಳಲ್ಲಿ ಮೂವತ್ತೆಂಟು ಮಂದಿ ವಿದ್ಯಾರ್ಥಿಗಳಿರುವ ಈ ಶಾಲೆಯು ಕೆಲವೇ ವರ್ಷಗಳ ಹಿಂದೆ ಇತರ ಎಲ್ಲ ಗ್ರಾಮೀಣ ಶಾಲೆಗಳಂತೆಯೇ ಇತ್ತು. ಬರೇಠಿ ಗ್ರಾಮದ ಸುತ್ತಮುತ್ತಲಿನ ಬಹಳಷ್ಟು ಮಕ್ಕಳು ಖಾಸಗಿ ಶಾಲೆಗಳಿಗೆ ಹೋಗುತ್ತಿದ್ದರು. 2015ರಲ್ಲಿ ಇಲಾಖೆಯು ಇದನ್ನು ಮಾದರಿ ಶಾಲೆಯಾಗಿ ಆಯ್ಕೆ ಮಾಡಿತು. 2016ರಲ್ಲಿ ಗಂಗಾ ಕಣಿವೆಯ ಶಿಕ್ಷಕರಿಗೆ ಈ ಶಾಲೆಯನ್ನು ಸೇರಲು ವಿಷಯಾಧಾರಿತ ಪರೀಕ್ಷೆ ಬರೆಯಲು ಅರ್ಜಿ ಕರೆಯಲಾಯಿತು. ಇದರ ಮೂಲಕವೇ ಮುಖ್ಯೋಪಾಧ್ಯಾಯರಾದ ಸಂಜಯ್ ಕುಕ್ಸಾಲ್, ಗಣಿತ ಶಿಕ್ಷಕರಾದ ಮುಕೇಶ್ ನೌತಿಯಾಲ್, ಇಂಗ್ಲಿಷ್ ಶಿಕ್ಷಕಿ ಮೀನಾ ಭಟ್, ವಿಜ್ಞಾನ ಶಿಕ್ಷಕಿ ಬಿಂದು ಗೂಸಾಯಿ ಹಾಗೂ ಇವಿಎಸ್ ಶಿಕ್ಷಕರಾದ ಮುರಾರಿ ರಾಣಾ 2016ರಲ್ಲಿ ಬರೇಠಿಯಲ್ಲಿನ 'ಆದರ್ಶ ಪ್ರಾಥಮಿಕ ವಿದ್ಯಾಲಯ'ಕ್ಕೆ ಬಂದು ಸೇರಿದರು. ಸುಶೀಲಾ ರಾವತ್ ಎಂಬ ಹಿಂದಿ ಶಿಕ್ಷಕಿ ಮಾತ್ರ ಹಿಂದಿನಿಂದಲೂ ಅಲ್ಲೇ ಇದ್ದರು.

ಹೊಸದಾಗಿ ವಿನ್ಯಾಸಗೊಳಿಸಿದ ಮಾದರಿ ಶಾಲೆಗೆ ಹೊಸದಾಗಿ ಬಂದು ಸೇರಿದ ಶಿಕ್ಷಕರ ತಂಡದ ಕೆಲಸದಲ್ಲಿ ಒಂದು ಸ್ಥಿರವಾದ ಮಾದರಿ ಇರುತ್ತದೆ. ಇದನ್ನು ಒಂದು ಕ್ಲೀಷೆ ಬಳಸಿ ಹೇಳುವುದಾರೆ, ಅಲ್ಲಿ "ಸಮರೋತ್ಸಾಹ" ಇರುತ್ತದೆ. ಸಂಜಯ್ ಕುಕ್ಸಾಲ್‌ರವರ ನೇತೃತ್ವದಲ್ಲಿ ಈ ಆರು ಜನ ಶಿಕ್ಷಕರು ತಮ್ಮ ಶಾಲೆಯನ್ನು ಒಂದು ಸರ್ವೋತ್ಕೃಷ್ಟ ಶಾಲೆಯನ್ನಾಗಿ ಪರಿವರ್ತಿಸುತ್ತೇವೆಂದು ಪಣತೊಟ್ಟರು. ಉತ್ತರಕಾಶಿ ಜಿಲ್ಲೆಯಲ್ಲಿನ ಪ್ರತಿಯೊಂದು ಮಾದರಿ ಶಾಲಾ ತಂಡಕ್ಕೂ ತನ್ನದೇ ಆದ ಕಥೆ ಇದೆ. ಬರೇಠಿಯ ಈ ತಂಡವು ಕಳೆದ ಎರಡು ವರ್ಷಗಳಲ್ಲಿ ಒಂದು ದಿನವೂ ಸಾಂದರ್ಭಿಕ ರಜೆ ತೆಗೆದುಕೊಂಡಿಲ್ಲ. ಆರೂ ಜನ ಶಿಕ್ಷಕರೂ ತಮ್ಮ ತಂಡ ಸ್ಫೂರ್ತಿಯನ್ನು ತೋರಿಸಲು, ಸಮುದಾಯದ ಎದುರು ತಾವು ಬರೇಠಿ ಶಾಲೆಯ ಶಿಕ್ಷಕರೆಂದು ಹೇಳಿಕೊಳ್ಳಲು ಹೆಮ್ಮೆಪಡುತ್ತೇವೆಂಬುದನ್ನು ಪ್ರದರ್ಶಿಸಲು ಸಮವಸ್ತ್ರವನ್ನು ಧರಿಸುತ್ತಿದ್ದಾರೆ. "ನಾವು ಇದು ಸರ್ಕಾರಿ ನೌಕರಿ ಎಂದು ಬಂದಿಲ್ಲ. ಇಡೀ ಬ್ಲಾಕ್‌ನಲ್ಲಿ ಅತ್ಯುತ್ತಮ ಶಾಲೆಯೊಂದನ್ನು ನಿರ್ಮಿಸಲು ಇದೊಂದು ಅವಕಾಶ' ಎಂಬ ಕಾರಣಕ್ಕಾಗಿ ನಾವು ಪ್ರವೇಶ ಪರೀಕ್ಷೆಯನ್ನು ಬರೆದು ಇಲ್ಲಿಗೆ ಬಂದಿದ್ದೇವೆ" ಎಂದು ಒಬ್ಬ ಶಿಕ್ಷಕರು

ನಮ್ಮೊಡನೆ ಹೇಳಿದರು. ಶಾಲೆಗೆ ಸೇರಿದ ಕೆಲವೇ ತಿಂಗಳಲ್ಲಿ ಪ್ರತಿಯೊಬ್ಬ ಶಿಕ್ಷಕನೂ ಹಳ್ಳಿಯಲ್ಲಿ ಮನೆಯಿಂದ ಮನೆಗೆ ಹೋಗಿ ತಮ್ಮ ಶಾಲೆಯಲ್ಲಿ ತಾವು ತರುತ್ತಿರುವ ಬದಲಾವಣೆಯ ಕುರಿತೂ ಬರೇಠಿಗೆ ತಾವು ಅದೊಂದೇ ಧ್ಯೇಯದಿಂದ ಬಂದಿದ್ದೇವೆ ಎಂದೂ ತಿಳಿಸಿದರು. ಇದರಿಂದ ಪೋಷಕರ ಧೋರಣೆಗಳಲ್ಲಿ ಗಮನಾರ್ಹ ಬದಲಾವಣೆ ಆಯಿತು, ಉತ್ಸಾಹ ಮೂಡಿತು. "ನಾವು ತೋರಿದ ಅತೀವ ಉತ್ಸಾಹ ಹೇಗೋ ಏನೋ ಸಮುದಾಯಕ್ಕೂ ಹಬ್ಬಿತು. ನಮಗೆ ಸಮುದಾಯದ ವಿಶ್ವಾಸ ಪ್ರಾಪ್ತವಾಯಿತು. 2015–16ರಲ್ಲಿ 38 ಜನರಿದ್ದ ಶಾಲೆಯಲ್ಲಿ, 2017ಕ್ಕೆ ಶೇಕಡಾ ಮುನ್ನೂರರಷ್ಟು ಹೆಚ್ಚಳ ಕಂಡುಬಂದು ದಾಖಲಾತಿ 109 ಅನ್ನು ಮುಟ್ಟಿತು. ಒಟ್ಟು 70 ಮಕ್ಕಳು ಖಾಸಗಿ ಶಾಲೆಯಿಂದ ಬರೇಠಿಯ ಆದರ್ಶ ವಿದ್ಯಾಲಯಕ್ಕೆ ಬಂದರು" ಎಂದು ಶಿಕ್ಷಕರೊಬ್ಬರು ವಿವರಿಸಿದರು.

ಶಿಕ್ಷಕರು ಸಾಧಿಸಿದ ಈ ಸಂಪರ್ಕವೂ ಅದರಿಂದ ಉದ್ಭವವಾದ ನಂಬಿಕೆಯೂ ಸಮುದಾಯದವರಲ್ಲಿ ಶಾಲೆಯ ಕುರಿತು ಪ್ರೀತಿಯನ್ನು ಹುಟ್ಟಿಸಿತು. ಉತ್ಸಾಹಪೂರಿತರಾದ ಶಿಕ್ಷಕರು ತಾವು ಪ್ರತಿಯೊಬ್ಬರೂ 7,000 ರೂ.ಗಳ ಕಾಣಿಕೆ ನೀಡಿ ತರಗತಿ ಕೊಠಡಿಗಳಿಗೆ ಫ್ಯಾನ್‌ಗಳನ್ನು ಹಾಕಿಸುವ ಹಾಗೂ ಶಾಲಾ ವಾರ್ಷಿಕೋತ್ಸವವನ್ನು ನಡೆಸುವ ಕಾರ್ಯಕ್ರಮ ಇಟ್ಟುಕೊಂಡರು. 2017ರ ಮಾರ್ಚ್ 15ರಂದು ಪೋಷಕರು ಮತ್ತು ಗ್ರಾಮದ ಜನರು ನಾಟಕ, ಸಂಗೀತ, ಕಾವ್ಯ ವಾಚನ, ಭಾಷಣಗಳಿಂದ ತುಂಬಿದ ಮರೆಯಲಾಗದ ಸುಂದರವಾದ ಒಂದು ವಾರ್ಷಿಕೋತ್ಸವವನ್ನು ಕಣ್ತುಂಬ ನೋಡಿದರು. ಬೇರೆ ಶಾಲೆಯ ಶಿಕ್ಷಕರು ಹೇಗೆ ಒಂದು ಸ್ಪಷ್ಟವಾದ ಕಾಣ್ಕೆಯಿಂದ ಬೆಳಗಿನ ಸಾಮಾನ್ಯ ಸಭೆಗಳನ್ನು ನಡೆಸುತ್ತಿದ್ದರೋ ಅದೇ ರೀತಿ ಇಲ್ಲಿನ ಶಿಕ್ಷಕರೂ ಅದರ ಮಹತ್ವವನ್ನು ಗ್ರಹಿಸಿದರು. ಶಿಕ್ಷಕರು ಮಕ್ಕಳನ್ನು ಅಲಕನಂದಾ, ಮಂದಾಕಿನಿ ಮತ್ತು ಭಾಗೀರಥಿ ಎಂಬ ತಂಡಗಳಾಗಿ ರಚಿಸಿ ಅವರಿಗೆ ಬೆಳಗಿನ ಸಾಮಾನ್ಯ ಸಭೆಯನ್ನು ಸಂಘಟಿಸುವ ಜವಾಬ್ದಾರಿಯನ್ನು ವಹಿಸಿದರು. ಸಮುದಾಯದೊಂದಿಗೆ ಸಂವಹನ ನಡೆಸುವ ಆರಂಭದ ಕೆಲಸವನ್ನು, ಪೋಷಕ–ಶಿಕ್ಷಕ ಸಭೆ ಮತ್ತು ಎಸ್‌ಎಮ್‌ಡಿಸಿ ಸಭೆಗಳನ್ನು ನಿರ್ವಹಿಸುವುದು, ಅವಶ್ಯವಿದ್ದಾಗ ಸಮುದಾಯದಿಂದ ಚಂದಾ ಎತ್ತುವುದು ಮೊದಲಾದ ಜವಾಬ್ದಾರಿಗಳನ್ನು ಮುಖ್ಯೋಪಾಧ್ಯಾಯರು ನೋಡಿಕೊಂಡರೆ, ಶಿಕ್ಷಕರು ತಮ್ಮ ಎಲ್ಲಾ ಶಕ್ತಿಯನ್ನೂ ಮಕ್ಕಳ ಕಲಿಕೆಗೂ ಅವರ ಸರ್ವತೋಮುಖ ಅಭಿವೃದ್ಧಿಗೂ ವಿನಿಯೋಗಿಸಿದರು. ಪ್ರತಿಯೊಂದು ಮಗುವಿನ ಪ್ರಗತಿಯ ಬಗ್ಗೆ ಆಸ್ಥೆ ವಹಿಸುವುದಲ್ಲದೆ ಹೆಚ್ಚಿನ ಸಮಯ ಮತ್ತು ಗಮನ ನೀಡಬೇಕಾದ ಮಕ್ಕಳಿಗೆ ಅದನ್ನು ನೀಡುವ ಬದ್ಧತೆಯನ್ನು ಶಿಕ್ಷಕರ ಇಡೀ ತಂಡ ವಹಿಸಿಕೊಂಡಿತು.

ಬರೇಠಿಯ ಶಿಕ್ಷಕರ ಅತ್ಯುತ್ತಮ ಗುಣಗಳಿಗೆ ಗಣಿತದ ಶಿಕ್ಷಕರಾದ ಮುಕೇಶ್ ನೌತಿಯಾಲ್ ಅವರು ನಿದರ್ಶನ ಅನ್ನಬಹುದು. ಅವರು ಮಾಮೂಲು ಗಣಿತದ ಶಿಕ್ಷಕರಿಗಿಂತ ಹೆಚ್ಚಿನ ಸಾಮರ್ಥ್ಯ ಹಾಗೂ ಕೌಶಲವನ್ನು ಹೊಂದಿದ್ದರು. ಈ ಪಾತ್ರದಲ್ಲಿ ಅವರ ಉತ್ಕೃಷ್ಟತೆ ಸರ್ವವಿದಿತ. ನಾವು ಅವರ 'ಸ್ಥಾನಮೌಲ್ಯದ' ಕುರಿತಾದ

ತರಗತಿಯನ್ನು ಗಮನಿಸಿದೆವು. ಅದರಲ್ಲಿ ಅವರು ವಿಷಯವನ್ನು ಪರಿಚಯಿಸಿ, ಪರಿಕಲ್ಪನೆಯನ್ನು ಸ್ಥಾಪಿಸಿ, ಪ್ರತಿಯೊಂದು ಮಗುವಿಗೂ ಅದು ಅರ್ಥವಾಗುವಂತೆ ನೋಡಿಕೊಂಡರು. ಅರ್ಥವಾಗದಿದ್ದ ಮಕ್ಕಳಿಗೆ ವಿಶೇಷ ಗಮನ ನೀಡಿದರು.

ನೌತಿಯಾಲ್ ಅವರು, 'ಸ್ಥಾನಮೌಲ್ಯದ' ಪಾಠ ಮಾಡಿದ ರೀತಿ ಹೀಗಿತ್ತು. ಮೊದಲಿಗೆ ಅಂಕೆ ಮತ್ತು ಸಂಖ್ಯೆಯ ನಡುವಿನ ವ್ಯತ್ಯಾಸವನ್ನು ವಿವರಿಸುತ್ತಾ ಮಕ್ಕಳಿಗೆ ಒಂದಂಕಿ, ಎರಡಂಕಿ ಮತ್ತು ಮೂರಂಕಿಯ ಸಂಖ್ಯೆಗಳನ್ನು ಪರಿಚಯಿಸಿದರು. ಈ ಪರಿಕಲ್ಪನೆಯನ್ನು ಪರಿಚಯಿಸುವ ವೇಳೆ ಅವರು ಗ್ರಹಿಕೆಯ ಸಾಮರ್ಥ್ಯ ಕಡಿಮೆ ಇರುವ ಮಕ್ಕಳೂ ಅರ್ಥಮಾಡಿಕೊಳ್ಳಲು ಬೇಕಾದಷ್ಟು ಸಮಯವನ್ನು ನೀಡಿ ಮುಂದುವರಿಯುವುದನ್ನು ಗಮನಿಸಿದೆವು. ಬಿಡಿ, ಹತ್ತು ಮತ್ತು ನೂರರ ಪರಿಕಲ್ಪನೆಯನ್ನು ವಿವರಿಸುವಾಗ ಅವರು ಹಣದ ಸಂದರ್ಭದಲ್ಲಿ ಸಂಖ್ಯೆ ಮತ್ತು ಮೌಲ್ಯಗಳನ್ನು ಪರಿಚಯ ಮಾಡಿಸಿದರು. ತಮ್ಮ ಪರ್ಸ್‌ನಿಂದ ಬೇರೆ ಬೇರೆ ಮೊತ್ತಗಳ ನೋಟುಗಳನ್ನು ಹೊರತೆಗೆದು ತೋರಿಸುತ್ತಾ ವಿವರಿಸಿದರು. ಚರ್ಚೆಯ ನಡುವೆ ಗಾಂಧೀಜಿಯವರ ಚಿತ್ರವೂ ಸೇರಿಕೊಂಡಿತು. ಆಗಲೇ ಗಾಂಧೀಜಿ, ಭಾರತ ಮತ್ತು ಸ್ವಾತಂತ್ರ್ಯ ಸಂಗ್ರಾಮದ ಬಗ್ಗೆಯೂ ನಮ್ಮ ಸಮಾಜದ ಬಗ್ಗೆಯೂ ಗಾಂಧೀಜಿಯವರ ನಿಲುವುಗಳ ಬಗ್ಗೆಯೂ ಸಂಕ್ಷಿಪ್ತವಾದ ಚರ್ಚೆಯಾಯಿತು. ನಡೆದ ಚರ್ಚೆಯನ್ನು ಮಕ್ಕಳು ವಾರಕ್ಕೊಮ್ಮೆ ಭಾಗಿಯಾಗುವ ಸಾಮಾನ್ಯ ಜ್ಞಾನದ ತರಗತಿಯಲ್ಲಿ ಕಲಿತಿದ್ದರ ಜೊತೆಗೆ ಬೆಸೆದುಕೊಳ್ಳಬೇಕೆಂದು ಹೇಳಿ, ಎರಡು ವಿಭಿನ್ನ ವಿಷಯಗಳು ಹೇಗೆ ಒಂದಕ್ಕೊಂದು ಸಂಬಂಧ ಹೊಂದಿರುತ್ತವೆ ಎಂದು ವಿವರಿಸಿದರು. ಅನಂತರ ತರಗತಿಯು ನೋಟುಗಳ ಬಣ್ಣಗಳ ಬಗ್ಗೆ ಚರ್ಚಿಸಲಾರಂಭಿಸಿತು. ಕ್ರಮೇಣ ಮಾತುಕತೆಯನ್ನು ಮತ್ತೊಮ್ಮೆ ಸಂಖ್ಯೆಗಳ ರಚನೆಯತ್ತ ತಿರುಗಿಸಿದ ನೌತಿಯಾಲರು, ವಿಷಯವನ್ನು ಅರ್ಥಮಾಡಿಕೊಳ್ಳಲು ಅಥವಾ ಕುತೂಹಲವನ್ನು ತಣಿಸಿಕೊಳ್ಳಲು ಪ್ರಶ್ನೆ ಕೇಳುವಂತೆ ಮಕ್ಕಳನ್ನು ಉತ್ತೇಜಿಸಿದರು. ಮಕ್ಕಳಿಗೆ ನಾಲ್ಕು ಅಂಕಿಗಳ ಸಂಖ್ಯೆಯನ್ನು ಸೃಷ್ಟಿಸುವ ಸಾಮರ್ಥ್ಯ ಬಂದಿದೆ ಎನಿಸಿದಾಗ ಅವರು ಹೊಸ ಆಟವನ್ನು ಸೃಷ್ಟಿಸಿದರು. ಒಂದೇ ಅಂಕಿಯ ಹಾಜರಾತಿ ಸಂಖ್ಯೆಯವರು ಕೈ ಎತ್ತಿ ಎಂದರು. ನಂತರ ಎರಡು ಅಂಕಿಯವರು ಕೈ ಎತ್ತಿ ಎಂದರು. ಮಕ್ಕಳು ಸುಲಭವಾಗಿ ಇದರಲ್ಲಿ ತೊಡಗಿಕೊಂಡು ಯಶಸ್ವಿಯಾದ ಮೇಲೆ ಎರಡಂಕಿಯ ಹಾಜರಾತಿ ಸಂಖ್ಯೆಗಳನ್ನು ಸೇರಿಸಿ ಬಗೆ ಬಗೆಯ ನಾಲ್ಕಂಕಿ ಸಂಖ್ಯೆಗಳನ್ನು ರಚಿಸಲು ಹೇಳಿದರು. ಇದನ್ನು ಮಾಡುತ್ತಲೇ ಅವರು ಸ್ಥಳ ಮೌಲ್ಯಗಳನ್ನು ನಿಗದಿಪಡಿಸುತ್ತ ಬಿಡಿ, ಹತ್ತು, ನೂರು, ಸಾವಿರ ಎಂಬುದನ್ನು ಮತ್ತೆ ಮತ್ತೆ ಮನಸ್ಸಿಗೆ ನಾಟುವಂತೆ ಹೇಳುತ್ತಲೇ ಇದ್ದರು. ಕೆಲವರು ಇದನ್ನು ನಿಧಾನವಾಗಿ ಗ್ರಹಿಸುತ್ತಿದ್ದರು. ಅಷ್ಟರಲ್ಲಿ ಶಿಕ್ಷಕರು ಅರ್ಥವಾಗಿರುವವರನ್ನು ತೊಡಗಿಸಿಕೊಂಡು ಹಾಜರಿ ಸಂಖ್ಯೆಗಳನ್ನು ಸೇರಿಸಿ ಅತಿದೊಡ್ಡ ಸಂಖ್ಯೆಯನ್ನು ಸೃಷ್ಟಿಸುವ ಆಟವನ್ನು ಆರಂಭಿಸಿದರು. ತರಗತಿಯಲ್ಲಿನ ಉತ್ಸಾಹ ಏರುತ್ತಲೇ ಇತ್ತು. ಒಂದು ಹೊಸ ಪರಿಕಲ್ಪನೆಯನ್ನು ಗ್ರಹಿಸುವ ಉತ್ಕಟವಾದ ಆನಂದವು ಶಿಕ್ಷಕರಲ್ಲೂ ಮಕ್ಕಳಲ್ಲೂ ಕಾಣುತ್ತಿತ್ತು. ಚುರುಕಾಗಿ ಕಲಿಯಬಲ್ಲ

ಕೆಲವು ವಿದ್ಯಾರ್ಥಿಗಳು ತಾವಾಗಿಯೇ ವಿಭಿನ್ನ ರೀತಿಗಳಲ್ಲಿ ಹೊಸ ಸಂಖ್ಯೆಯನ್ನು ಸೃಷ್ಟಿಸಲಾರಂಭಿಸಿದರು. ತರಗತಿಯು ಮುಗಿಯುತ್ತಾ ಬಂದಂತೆ ಮುಕೇಶ್‌ರವರು, ದೈನಂದಿನ ಬದುಕಿನಲ್ಲಿ ಕಂಡುಬರುವ ಗಣಿತಕ್ಕೆ ಸಂಬಂಧಿಸಿದ ಯಾವುದೇ ವಿಷಯವನ್ನು ತಮ್ಮ ನೋಟ್ ಪುಸ್ತಕಗಳಲ್ಲಿ ಬರೆದಿಡಬೇಕೆಂದು ಹಿಂದಿನ ವಾರ ನೀಡಿದ್ದ ಮನೆ ಕೆಲಸವನ್ನು ಮಕ್ಕಳಿಗೆ ಮತ್ತೆ ನೆನಪಿಸಿದರು. ಮಕ್ಕಳ ಉತ್ಸಾಹದಿಂದ ಬದುಕಿನ ಗಣಿತಗಳನ್ನು ಹೇಳತೊಡಗಿದರು; ಅವರು ನೀಡುತ್ತಿದ್ದ ಎಲ್ಲ ಉತ್ತರಗಳನ್ನೂ ಬರೆಯಲು ನೌತಿಯಾಲರ ಕಪ್ಪುಹಲಗೆಯಲ್ಲಿ ಸ್ಥಳ ಇರಲಿಲ್ಲ. ಅವರು ನಗುತ್ತಾ ಮಕ್ಕಳಿಗೆ ನಿಧಾನವಾಗಿ ಎಲ್ಲರೂ ತಮ್ಮ ಬದುಕಿನ ಪ್ರತಿಕ್ಷಣದಲ್ಲೂ ಕಾಣಬಹುದಾದ ಗಣಿತದ ಅಂಶಗಳನ್ನು ಗುರುತಿಸಲು ಹೇಳಿದರು.

ಮೊದಲೇ ಹೇಳಿದಂತೆ ನೌತಿಯಾಲ್‌ರವರು ಒಬ್ಬ ಮಾಮೂಲಿ ಶಿಕ್ಷಕರಲ್ಲ. ತಮ್ಮ ಎಂ.ಎಸ್‌ಸಿ., ಬಿ.ಎಡ್., ಎಂ.ಫಿಲ್. ಪದವಿಗಳನ್ನು ಮುಗಿಸಿದ ಅವರು ಕೆಲವು ವರ್ಷಗಳ ಕಾಲ ಒಂದೆರಡು ಎಂಜಿನಿಯರಿಂಗ್ ಕಾಲೇಜುಗಳಲ್ಲಿ ಬೋಧನೆ ಮಾಡಿ, ಅದೇ ಸಮಯದಲ್ಲಿ ಡಾಕ್ಟರೇಟ್ ಪದವಿಯನ್ನು ಗಳಿಸಿಕೊಂಡರು. ಅಷ್ಟು ಹೊತ್ತಿಗೆ ಮದುವೆಯಾಗಿದ್ದರಿಂದ, ಕುಟುಂಬದಿಂದ ಸರ್ಕಾರಿ ನೌಕರಿಯನ್ನು ತೆಗೆದುಕೊಳ್ಳಬೇಕೆಂಬ ಒತ್ತಡ ಸೃಷ್ಟಿಯಾಗಿತ್ತು. ಹೀಗಾಗಿ ಅರ್ಜಿ ಹಾಕಿ ಉತ್ತರಕಾಶಿ ಜಿಲ್ಲಾ ಶಿಕ್ಷಣ ಇಲಾಖೆಯಲ್ಲಿ ಪ್ರಾಥಮಿಕ ಶಿಕ್ಷಕರಾಗಿ ಸೇರಿಕೊಂಡರು. ಆರು ತಿಂಗಳುಗಳ ಕಾಲ ಮೋರಿ ಬ್ಲಾಕ್‌ನಲ್ಲಿರುವ ದೂರದ ಹಳ್ಳಿಯೊಂದರಲ್ಲಿ ಸೇವೆ ಸಲ್ಲಿಸಿ ತರಬೇತಿ ಅವಧಿಯನ್ನು ಮುಗಿಸಿದರು. ನಂತರ ಚಿನ್ಯಾಲಿ ಬ್ಲಾಕಿನ ಕೋಟ್‌ಸಂತ್ರಾಲ್ ಎಂಬಲ್ಲಿನ ಸರ್ಕಾರಿ ಪ್ರಾಥಮಿಕ ಶಾಲೆಗೆ ವರ್ಗಾವಣೆಗೊಂಡರು. ಅಲ್ಲಿ ಅವರು ಮೂರು ವರ್ಷಗಳ ಕಾಲ ಶಾಲೆಯಿಂದ ಮನೆಗೆ ಪ್ರತಿದಿನ ನಾಲ್ಕೈದು ಕಿ.ಮೀ ನಡೆಯುತ್ತಾ ಹಿಂದುಳಿದ ಹಿನ್ನೆಲೆಯ 34 ಮಕ್ಕಳಿಗೆ ವಿದ್ಯೆ ನೀಡಿದರು.

ಮುಕೇಶ್ ನೌತಿಯಾಲ್‌ರವರು ನೇರ ಮತ್ತು ಬಿಚ್ಚುಮನಸ್ಸಿನ ಮಾತುಗಾರ; ತಾವು ಈ ಉದ್ಯೋಗಕ್ಕೆ ಬಂದಾಗ ತಮಗೆ ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳಿಗೆ ಪಾಠ ಮಾಡಲು ಸಾಧ್ಯವೆಂಬ ವಿಶ್ವಾಸವಿರಲಿಲ್ಲ ಎಂದು ಒಪ್ಪಿಕೊಳ್ಳುತ್ತಾರೆ. ಇಂಜಿನಿಯರಿಂಗ್ ಕಾಲೇಜಿನ ವಿದ್ಯಾರ್ಥಿಗಳಿಗೆ ಗಣಿತ ಹೇಳಿಕೊಡುತ್ತೇನೆ ಎಂದುಕೊಳ್ಳುವುದರಲ್ಲಿ ಅವರಿಗೊಂದು ಹೆಮ್ಮೆಯಿತ್ತು, ತೃಪ್ತಿಯಿತ್ತು. ಆದರೆ ಕ್ರಮೇಣ ಪ್ರಾಥಮಿಕ ಶಾಲೆಯ ಮಕ್ಕಳಿಗೆ ಅಂಕ ಗಣಿತವನ್ನು, ಸಂಖ್ಯಾಜ್ಞಾನವನ್ನು ಕಲಿಸುವುದರಲ್ಲಿ ಒಂದು ವಿಚಿತ್ರವಾದ ಸಾರ್ಥಕತೆಯನ್ನು ಕಂಡುಕೊಳ್ಳಲು ಆರಂಭಿಸಿದರು. ಸರ್ವಶಿಕ್ಷಾ ಅಭಿಯಾನವು ಅವರನ್ನು ತಾಲ್ಲೂಕಿಗೆ ಮಾಸ್ಟರ್ ಟ್ರೇನರ್ (ಮುಖ್ಯ ತರಬೇತುದಾರ) ಮಾಡಿದಾಗ ಅವರಿಗೆ ಹಿರಿಯ ವಿದ್ಯಾರ್ಥಿಗಳಿಗೆ ಬೋಧನೆ ಮಾಡುವುದಕ್ಕಿಂತ ಪ್ರಾಥಮಿಕ ಶಾಲೆಯ ಮಕ್ಕಳಿಗೆ ಕಲಿಸುವುದೇ ಕಷ್ಟ ಎನಿಸತೊಡಗಿತು. ಫೌಂಡೇಷನ್‌ಗೆ ಸೇರಿದ ಸಂಜಯ್ ನೌತಿಯಾಲ್ ಅವರನ್ನು ಭೇಟಿಯಾದದ್ದು, ಗಣಿತ ಸಾಮರ್ಥ್ಯ ನಿರ್ಮಾಣ ಕಾರ್ಯಾಗಾರಗಳಲ್ಲಿ ಭಾಗವಹಿಸಿದ್ದು, ತಮ್ಮ ಬದುಕಿನ ಮಹತ್ವದ ತಿರುವುಗಳಲ್ಲಿ ಒಂದು

ಎಂದು ಅವರು ಹೇಳುತ್ತಾರೆ. ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ಬೋಧಕ ಸಿಬ್ಬಂದಿ ನಡೆಸಿದ ಕಾರ್ಯಾಗಾರಕ್ಕೆ ಹಾಜರಾದ ಮುಕೇಶ್ ಅವರಿಗೆ ತಮ್ಮದೇ ಆದ ಬೋಧನಾ–ಕಲಿಕಾ ಸಾಮಗ್ರಿಗಳನ್ನು ಮಾಡಿಕೊಳ್ಳುವ ಶಕ್ತಿಯನ್ನು ಕಂಡುಕೊಂಡ ಕ್ಷಣವೇ ಉತ್ಕಟ ಆನಂದದ ಘಳಿಗೆ. ಇದ್ದಕ್ಕಿದ್ದಂತೆ ಅವರಿಗೆ 'ತಾವೇ' ಕಲಿಕಾ ಸಾಮಗ್ರಿಗಳನ್ನು ಕಟ್ಟಿಕೊಳ್ಳುವ ಪ್ರಕ್ರಿಯೆಯ ಮಹತ್ವ ಗೋಚರವಾಯಿತು. ಅನಂತರ ಅವರು ಈ ಸಾಮರ್ಥ್ಯವನ್ನು ಶಿಕ್ಷಕರಲ್ಲಿ ಬೆಳೆಸುವುದಕ್ಕೆ ತುಂಬಾ ಮಹತ್ವವನ್ನು ನೀಡಲಾರಂಭಿಸಿದರು.

ತಮಗೆ ಅಗತ್ಯವೆನಿಸಿದ್ದನ್ನೆಲ್ಲ ಮಾಡಲು ಬೇಕಾದ ಸೌಲಭ್ಯ ಮತ್ತು ಸ್ವಾತಂತ್ರ್ಯ ಈ ಶಾಲೆಯಲ್ಲಿದೆ ಎಂದು ಮುಕೇಶ್ ಭಾವಿಸಿದ್ದಾರೆ. ಅವರ ಮನಸ್ಸಿಗೆ ಮುದವನ್ನೂ ಪ್ರೇರಣೆಯನ್ನೂ ನೀಡಬಲ್ಲ ಹುಡುಗರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ತರಗತಿಯಲ್ಲಿ ಸದಾಕಾಲ ಉತ್ಸಾಹ ಬತ್ತದೇ ಇರುವುದಕ್ಕೆ ಕಾರಣವನ್ನು ಯಾರಾದರೂ ಮುಕೇಶ್‌ರನ್ನು ಕೇಳಿದರೆ, ಅವರು ಹೇಳುತ್ತಾರೆ, "ಪ್ರತಿಯೊಂದು ಮಗುವೂ ಕಲಿಯಲು ಸಾಧ್ಯ. ನಾವು ಅವರಿಗಾಗಿ ಸಮಯವನ್ನು ವ್ಯಯಮಾಡಬೇಕು ಅಷ್ಟೇ. ನಾನು ಕಲಿಸುವುದನ್ನು ಇಷ್ಟಪಡುವುದರಿಂದ, ಒಂದು ವೇಳೆ ಶಾಲೆಯು ಮುಗಿದ ಮೇಲೆ ಹತ್ತು ತಾಸು ಕಲಿಸಬೇಕು ಎಂದರೂ ನನಗೇನೂ ಆಯಾಸವಾಗುವುದಿಲ್ಲ. ನನಗೆ ಆಡಳಿತಾತ್ಮಕ ಕೆಲಸವೆಂದರೆ ಆಗುವುದಿಲ್ಲ. ಆದ್ದರಿಂದ ಮುಖ್ಯೋಪಾಧ್ಯಾಯರು ನನ್ನನ್ನು ಅದರಿಂದ ದೂರವೇ ಇರಿಸಿದ್ದಾರೆ. ಎಲ್ಲರೂ ಸಮವಸ್ತ್ರ ಧರಿಸಿ ಬನ್ನಿ ಎಂದು ಮುಖ್ಯೋಪಾಧ್ಯಾಯರು ಹೇಳಿದಾಗ ಮೊದಲಿಗೆ ನನ್ನ ಅಹಂ ಅದಕ್ಕೆ ಅಡ್ಡಿಯಾಗಿತ್ತು. ಆದರೆ ನಾನೀಗ ಇದನ್ನು ಒಂದು ಪ್ರಯೋಗ ಎಂಬಂತೆ ನೋಡುತ್ತಿದ್ದೇನೆ. ಯಾವುದು ಹೇಗೆ ಫಲ ನೀಡುತ್ತದೋ ನಮಗೆ ಹೇಳಲು ಸಾಧ್ಯವಿಲ್ಲ."

ನೌತಿಯಾಲ್‌ರವರು ಒಂದು ದೊಡ್ಡ, ಸುಶಿಕ್ಷಿತ ಕೂಡು ಕುಟುಂಬಕ್ಕೆ ಸೇರಿದವರು. ಅದರ ಅನೇಕ ಸದಸ್ಯರು ವಿವಿಧ ಸರ್ಕಾರಿ ಹುದ್ದೆಗಳಲ್ಲಿದ್ದಾರೆ. ಭಾರತದ ಕೂಡು ಕುಟುಂಬಗಳನ್ನು ಕಂಡವರಿಗೆ ಅದರಲ್ಲಿ ಎಂಥ ಒತ್ತಡಗಳು, ಎಳೆದಾಟಗಳು ಇರುತ್ತವೆ ಎಂಬುದು ಗೊತ್ತು. ಬಿಡಿ ಕುಟುಂಬದಲ್ಲಿ ಸ್ವತಂತ್ರವಾಗಿ ಬದುಕುವವರಿಗೆ ಈ ಅನುಭವವಿರುವುದಿಲ್ಲ. ನೌತಿಯಾಲರ ಅಣ್ಣ ನಯಿ ತಿಹಾರಿಯ ಸರ್ಕಾರಿ ಪದವಿ ಕಾಲೇಜೊಂದರಲ್ಲಿ ಸಹಾಯಕ ಪ್ರೊಫೆಸರ್ ಆಗಿದ್ದಾರೆ. ಇವರ ತಮ್ಮ ಕೇಂದ್ರೀಯ ವಿದ್ಯಾಲಯವೊಂದರಲ್ಲಿ ಪಿಜಿಟಿ ಗಣಿತದ ಶಿಕ್ಷಕನಾಗಿದ್ದಾರೆ. ತಂಗಿಯ ಗಂಡ ಸರ್ಕಾರಿ ಕಾಲೇಜೊಂದರಲ್ಲಿ ಸಹಾಯಕ ಪ್ರೊಫೆಸರ್ ಆಗಿದ್ದಾರೆ. ಮುಕೇಶ್ ನೌತಿಯಾಲರಿಗೆ ಈ ವಾಸ್ತವವು ಪ್ರತಿದಿನವೂ ಎಂಬಂತೆ ಮನಸ್ಸನ್ನು ಚುಚ್ಚುವ ವಿಷಯ ಆಗಿರಲಿಕ್ಕೂ ಸಾಕು. ಹೀಗಾಗಿ ಅವರಲ್ಲೂ ಸರ್ಕಾರದ ಉನ್ನತ ಶಿಕ್ಷಣ ಇಲಾಖೆಯ ಅರ್ಹತಾ ಪರೀಕ್ಷೆಯನ್ನು ಬರೆಯುವ ಹಂಬಲ ಮೂಡಿದರೆ ಆಶ್ಚರ್ಯವೇನಿಲ್ಲ. ಅದು ನಾವು ಅಂದುಕೊಂಡಿರುವುದಕ್ಕಿಂತಲೂ ಶೀಘ್ರವೇ ಆಗಬಹುದು.

# "ಈ ಪ್ರಶ್ನೆಗೆ ನಮಗೆ ಉತ್ತರ ಗೊತ್ತಿಲ್ಲ, ಆದರೆ ತಿಳಿದುಕೊಳ್ಳುತ್ತೇವೆ"

**ಧ್ಯಾನ್‌ಸಿಂಗ್ ರಾವತ್, ಪ್ರಭಾ, ಸೂರತ್ ಲಾಲ್**
**ಜಗಬೀರ್ ಸಿಂಗ್, ಬಚ್ಚನ್ ಲಾಲ್**
ಆದರ್ಶ ಹಿರಿಯ ಪ್ರಾಥಮಿಕ ಶಾಲೆ, ಗಂಗಾಣಿ, ನೌಗಾಂವ್ ಬ್ಲಾಕ್
ಉತ್ತರಕಾಶಿ ಜಿಲ್ಲೆ, ಉತ್ತರಾಖಂಡ್

ಉತ್ತರಕಾಶಿಯಿಂದ ಬಡಕೋಟ್‌ಗೆ, ಗಂಗಾನದಿ ಕಣಿವೆಯಿಂದ ಯಮುನಾ ನದಿ ಕಣಿವೆಗೆ ದೇವದಾರು ಮರಗಳ ಕಾಡುಗಳ ನಡುವೆ ವಾಹನದಲ್ಲಿ ಹೋಗುವುದೆಂದರೆ ಅದೊಂದು ರಮಣೀಯ ಅನುಭವ. ಬಡಕೋಟ್‌ನಿಂದ ಉತ್ತರಕ್ಕೆ, ಯಮುನಾ ನದಿಯನ್ನು ದಾಟಿ ಗಂಗಾಣಿ ಗ್ರಾಮವನ್ನು ತಲುಪಬೇಕು. ಶುಭ್ರವಾದ ಹಗಲಿನಲ್ಲಿ ಬಂಧಾರ್‌ಪೂಂಚ್ ಪರ್ವತ ಶ್ರೇಣಿಯು ದೇವರು ಕರುಣಿಸಿದ ವರದಂತೆ ಮನೋಹರ ಹಿನ್ನೆಲೆಯನ್ನು ಒದಗಿಸುತ್ತದೆ. 1970ರ ದಶಕದ ಕೊನೆಯ ವರೆಗೂ ಯಮುನೋತ್ರಿಗೆ ಹೋಗುವ ಕಾಲುದಾರಿಯು ಇದೇ ಹಳ್ಳಿಯಿಂದಲೇ ಆರಂಭವಾಗುತ್ತಿತ್ತು.

ಗಂಗಾಣಿಯಲ್ಲಿ ವಿಶಾಲವಾದ ಮೈದಾನದಲ್ಲಿ ಎರಡು ಶಾಲೆಗಳು, ಒಂದು ವಿದ್ಯಾರ್ಥಿ ನಿಲಯ ಮತ್ತು ಒಂದು ದೊಡ್ಡ ಕ್ರೀಡಾಂಗಣದ ಸಂಕೀರ್ಣವಿದೆ. ಒಂದರಿಂದ ಐದನೆಯ ತರಗತಿಯವರೆಗೂ ಇರುವ, 1972ರಲ್ಲಿ ಸ್ಥಾಪನೆಯಾದ ಪ್ರಾಥಮಿಕ ಶಾಲೆಯೊಂದು ಅಲ್ಲಿದೆ. ಅದರ ಮಗ್ಗುಲಲ್ಲಿಯೇ ಆರರಿಂದ ಎಂಟನೆಯ ತರಗತಿಯವರೆಗೆ ಇರುವ ಮಾದರಿ ಹಿರಿಯ ಪ್ರಾಥಮಿಕ ಶಾಲೆಯಿದೆ. ಮೈದಾನದ ಇನ್ನೊಂದು ಕಡೆ ಕಸ್ತೂರ ಬಾ ಗಾಂಧಿ ಬಾಲಿಕಾ ವಿದ್ಯಾಲಯ (ಕೆಜಿಬಿವಿ)ದ ವಿದ್ಯಾರ್ಥಿನಿಯರ ನಿಲಯವಿದೆ. ಗಂಗಾಣಿಯ ಮಾದರಿ ಶಾಲೆಯಲ್ಲಿ ತೊಂಬತ್ತೇಳು ಮಂದಿ ವಿದ್ಯಾರ್ಥಿಗಳು ನೋಂದಾವಣೆಗೊಂಡಿದ್ದು ಇಪ್ಪತ್ತೇಳು ಹುಡುಗರು ಮತ್ತು ಎಪ್ಪತ್ತು ಹುಡುಗಿಯರು ಇದ್ದಾರೆ. 2005ರಲ್ಲಿ ಆರಂಭವಾದ ಕೆಜಿಬಿವಿ ವಿದ್ಯಾರ್ಥಿನಿಯರ ನಿಲಯದಲ್ಲಿನ ಐವತ್ತು ಮಂದಿ ವಿದ್ಯಾರ್ಥಿನಿಯರು ಇಲ್ಲೇ ಓದುತ್ತಿರುವುದೂ ಇಲ್ಲಿ ವಿದ್ಯಾರ್ಥಿನಿಯರ ಸಂಖ್ಯೆ ಹೆಚ್ಚಿಗೆ ಇರುವುದಕ್ಕೆ ಕಾರಣ.

ರಾಜ್ಯದ ಬೇರೆ ಶಾಲೆಗಳಂತೆ ಈ ಹಿರಿಯ ಪ್ರಾಥಮಿಕ ಶಾಲೆಗೂ ಮಾದರಿ ಶಾಲೆಯ ಸ್ಥಾನಮಾನ ದೊರೆತದ್ದು 2016ರಲ್ಲಿ. ಅದರಿಂದಾಗಿಯೇ ಇದಕ್ಕೆ ತತ್‌ಕ್ಷಣವೇ ಹೆಚ್ಚಿನ ಸಂಪನ್ಮೂಲಗಳು, ಶಿಕ್ಷಕರು ದೊರೆತವು. ಹೀಗಾಗಿ ಧ್ಯಾನ್‌ಸಿಂಗ್ ರಾವತ್ ಮತ್ತು ಪ್ರಭಾ ಈ ಶಾಲೆಯನ್ನು ಸೇರಿದರು. ಮಾದರಿ ಶಾಲೆಗೆ ನೇಮಕಾತಿ ಆಗುವುದೆಂದರೆ ಒಂದು ಪ್ರತಿಷ್ಠೆಯ ವಿಷಯವಾಗಿದ್ದು ಅದು ಶಿಕ್ಷಕರ ಸಾಮರ್ಥ್ಯಕ್ಕೆ ದೊರೆತ ಮನ್ನಣೆ ಎಂದು ಪರಿಗಣಿಸಲಾಗಿದೆ, ಜೊತೆಗೆ ಅದನ್ನು ಸಾಬೀತು ಮಾಡಬೇಕಾದ ಜವಾಬ್ದಾರಿಯೂ ಇದೆ. ಹೀಗಾಗಿಯೇ ಈ ಶಿಕ್ಷಕರು ವಿಶೇಷ ಶ್ರಮವಹಿಸುತ್ತಾರೆ. ಇವರಿಬ್ಬರು ಶಿಕ್ಷಕರೂ 2001ರಿಂದಲೇ ಈ ಶಾಲೆಯಲ್ಲಿ ಮುಖ್ಯೋಪಾಧ್ಯಾಯರಾಗಿರುವ ಸೂರತ್ ಲಾಲ್‌ರನ್ನು

ಸೇರಿಕೊಂಡರು. ಸೂರತ್ ಲಾಲ್‌ರು 1976ರಲ್ಲಿ ಶಿಕ್ಷಣ ಇಲಾಖೆಯನ್ನು ಸೇರಿದ ಹಿರಿಯರು. ಇವರಿಬ್ಬರೂ ಅಲ್ಲಿಗೆ ಬಂದಾಗ ಶಾಲೆಯಲ್ಲಿ 2006ರಿಂದಲೂ ಸಮಾಜ ವಿಜ್ಞಾನದ ಶಿಕ್ಷಕರಾಗಿರುವ ಜಗ್‌ಬೀರ್ ಸಿಂಗ್‌ರೂ ಇದ್ದರು. ಜಗಬೀರ್ ಸಿಂಗ್‌ರು ಸುಮಾರು ಐವತ್ತು–ಐವತ್ತೈದು ವಯಸ್ಸಿನ, ಮೂವತ್ತೈದು ವರ್ಷಗಳ ಹಿಂದೆಯೇ ಇಲಾಖೆಗೆ ಸೇರಿದ ಹಿರಿಯರು.

ಒಂದು 'ಆದರ್ಶ ವಿದ್ಯಾಲಯ'ವನ್ನು ಸೃಷ್ಟಿಸುವ ಅವಕಾಶ ದೊರೆತ ಮೇಲೆ ಗಂಗಾಣಿಯ ಶಿಕ್ಷಕರ ತಂಡವು ಅದಕ್ಕೆ ಬದ್ಧವಾಗಿ, ಉತ್ಸಾಹದಿಂದ ಮುನ್ನಡೆಯುತ್ತಿದೆ, ಸಾಧ್ಯವಾದದ್ದನ್ನೆಲ್ಲಾ ಸಾಧಿಸುವ ಛಲದಲ್ಲಿದೆ ಎಂಬುದು ಸ್ಪಷ್ಟ. ಒಂದು ಶಾಲೆ ಚೆನ್ನಾಗಿ ಕೆಲಸ ಮಾಡುತ್ತಿದೆ ಎಂಬುದನ್ನು ಅರ್ಥಮಾಡಿಕೊಳ್ಳಲು ನಂಬಲರ್ಹವಾದ ಒಂದು ಮಾನದಂಡವೇ ಅಲ್ಲಿನ ಶಿಕ್ಷಕರಲ್ಲಿ ಇರುವ ಒಗ್ಗಟ್ಟು. ಗಂಗಾಣಿಗೆ ಭೇಟಿ ನೀಡುವ ಯಾರಿಗೇ ಆದರೂ ಮೊದಲು ಕಣ್ಣಿಗೆ ಬೀಳುವುದು ಈ ಶಿಕ್ಷಕರ ನಡುವೆ ಇರುವ ಸ್ನೇಹ–ವಿಶ್ವಾಸ. ನಾವು ಬಿಸಿಲು ಬೀಳುತ್ತಿದ್ದ ಜಗಲಿಯಲ್ಲಿ ಕುಳಿತು ಮಾತನಾಡುವಾಗ ಪ್ರತಿಯೊಬ್ಬ ಶಿಕ್ಷಕನೂ ಇನ್ನೊಬ್ಬರ ಬಗ್ಗೆ ಹೇಳುತ್ತಿದ್ದ ಸದಭಿಪ್ರಾಯಗಳು, ಅವರ ನಡುವೆ ಇರುವ ಪರಸ್ಪರ ನಂಬಿಕೆಯನ್ನೂ ಸ್ನೇಹವನ್ನೂ ಪ್ರತಿಬಿಂಬಿಸುತ್ತಿದ್ದವು. ಪ್ರತಿಯೊಬ್ಬ ಶಿಕ್ಷಕರೂ ಪ್ರತಿಯೊಬ್ಬ ವಿದ್ಯಾರ್ಥಿಯ ಸಾಮರ್ಥ್ಯವನ್ನೂ ದೌರ್ಬಲ್ಯಗಳನ್ನೂ ತಿಳಿದಿದ್ದರು ಎಂಬುದು ನಮಗೆ ಗೋಚರವಾಯಿತು. ಇಲ್ಲಿನ ಶಿಕ್ಷಕರು ನಿಯಮಿತವಾಗಿ ದಿನದ ಅಂತ್ಯದಲ್ಲಿ ಭೇಟಿಯಾಗಿ ತಾವು ಪರಿಹರಿಸಬೇಕಾದ ಸಮಸ್ಯೆಗಳು ಯಾವುವು ಎಂದು ಚರ್ಚಿಸುತ್ತಾರೆ. ಪ್ರಾಥಮಿಕ ಶಾಲೆಯಲ್ಲಿ ಹನ್ನೊಂದು ವರ್ಷಗಳಿಂದ ಮುಖ್ಯೋಪಾಧ್ಯಾಯರಾಗಿರುವ ಮನ್‌ಬೀರ್ ಸಿಂಗ್ ಹಿರಿಯ ಪ್ರಾಥಮಿಕ ಶಾಲೆಯ ಶಿಕ್ಷಕರ ಬಳಗದ ಸಹಜ ಹಾಗೂ ಅವಿಭಾಜ್ಯ ಅಂಗವೇ ಆಗಿಹೋಗಿರುವುದು ಸಹ ತಂಡದಲ್ಲಿನ ಒಗ್ಗಟ್ಟಿಗೆ ಸಾಕ್ಷಿಯಾಗಿದೆ. ಅದೇ ರೀತಿ ಹಿರಿಯ ಪ್ರಾಥಮಿಕ ಶಾಲೆಯ ಶಿಕ್ಷಕರೂ ಸಹ ಕಿರಿಯ ಪ್ರಾಥಮಿಕ ಶಾಲೆಯ ಪ್ರಗತಿಗೆ ಉತ್ಸುಕತೆಯಿಂದ ತಮ್ಮ ಸಲಹೆ, ಸೂಚನೆ ನೀಡುತ್ತಾರೆ. ನಾವು ಹೀಗೆ ಮಾತನಾಡುತ್ತಿದ್ದಾಗಲೇ ಮನ್‌ಬೀರ್ ಸಿಂಗ್ ಥಟ್ಟನೆ ಎದ್ದು ಗ್ರಂಥಾಲಯಕ್ಕೆ ಹೋಗಿ 'ರನ್‌ವಾಲ್ಟಿ ಕಿ ಅಖಾನ್' ಎಂಬ (ಸರಳ ಅನುವಾದದಲ್ಲಿ, 'ರನ್ವಾಲ್ಟಿಯ ಗಾದೆಗಳು') ರನ್ವಾಲ್ಟಿ ಭಾಷೆಯಲ್ಲಿರುವ (ಈ ಭಾಷೆಯು ಉತ್ತರಕಾಶಿಯ ಯಮುನಾ ಕಣಿವೆಯಲ್ಲಿನ ರನ್ವಾಲ್ಟಿಯಲ್ಲಿ ಆಡುವ ಒಂದು ಗಢ್‌ವಾಲಿ ಉಪಭಾಷೆ) ಧ್ಯಾನ್‌ಸಿಂಗ್ ರಾವತ್‌ರವರು ಬರೆದ ಒಂದು ಚಿಕ್ಕ, ದಪ್ಪ ಬೈಂಡ್ ಪುಸ್ತಕವನ್ನು ತಂದು ನಮಗೆಲ್ಲಾ ತೋರಿಸಿದರು.

ನಾವು ಧ್ಯಾನ್‌ಸಿಂಗ್‌ರನ್ನು ಸ್ವಲ್ಪ ಪುಸಲಾಯಿಸಿ ಆ ಪುಸ್ತಕದ ಹಿಂದಿನ ಕಥೆಯನ್ನು ಹೊರತೆಗೆಯಬೇಕಾಯಿತು. ಹಿಂದಿ ಭಾಷೆಯ ಪ್ರಾಬಲ್ಯದಡಿಯಲ್ಲಿ ರನ್ವಾಲ್ಟಿಯ ಸಿರಿವಂತ ಜಾನಪದ ಗಾದೆಗಳು, ನುಡಿಗಟ್ಟುಗಳು ಮಾಯವಾಗುತ್ತಿರುವುದನ್ನು ಕಂಡ ಧ್ಯಾನ್‌ಸಿಂಗ್ ಅದೆಲ್ಲವನ್ನೂ ದಾಖಲಿಸಿ ಇಡಬೇಕೆಂಬ ಪರಿಶ್ರಮದಾಯಕ ಯೋಜನೆಯನ್ನು ಕೈಗೆತ್ತಿಕೊಂಡರು. ಅವರು ತಮ್ಮ ವಿದ್ಯಾರ್ಥಿಗಳನ್ನೂ ಈ ಯೋಜನೆಯಲ್ಲಿ ಸೇರಿಸಿಕೊಂಡರು. ಎಲ್ಲರೂ ಒಟ್ಟಾಗಿ ಊರಿನ ಹಿರಿಯರು ಮತ್ತು ಅಜ್ಜ

ಅಜ್ಜಿಯರೊಂದಿಗೆ ಮಾತನಾಡಿ ಗಾದೆಗಳನ್ನು ಸಂಗ್ರಹಿಸಲಾರಂಭಿಸಿದರು. ಹೆಚ್ಚು ಕಡಿಮೆ ಎಲ್ಲ ಗಾದೆಗಳೂ ದಾಖಲಿತವಾದವು. ಯೋಜನೆಯ ವೈಶಾಲ್ಯ, ಮಕ್ಕಳ ತೊಡಗುವಿಕೆ, ಧ್ಯೇಯ ನಿಷ್ಠೆ, ಇವುಗಳನ್ನು ಉತ್ತೇಜಿಸಿದ ಧ್ಯಾನ್‌ಸಿಂಗ್‌ರ ಸಾಧನೆ ಎಲ್ಲವೂ ಅಮೂಲ್ಯವೇ.

ಈ ಕತೆಗೊಂದು ಅಡಿ ಟಿಪ್ಪಣಿ ರೂಪದ ಘಟನೆ ಅಂದು ಮಧ್ಯಾಹ್ನ ಜರುಗಿತು; ಧ್ಯಾನ್‌ಸಿಂಗ್ ನನ್ನನ್ನೂ ನನ್ನ ಸಹೋದ್ಯೋಗಿ ಆಶಿಷ್‌ರನ್ನೂ ದೂರದ ಗ್ರಾಮವಾದ ಮೋಲ್ಡಾಗೆ ಕರೆದೊಯ್ದು ಅಲ್ಲಿನ 92 ವರ್ಷ ವಯಸ್ಸಿನ ಸೀತಾರಾಮ್ ಬಹುಗುಣ ಅವರಿಗೆ ಪರಿಚಯಿಸಿದರು. ಆ ಹಿರಿಯರನ್ನು ಪ್ರೀತಿಯಿಂದ ಆಲಿಂಗಿಸಿದ ಧ್ಯಾನ್‌ಸಿಂಗ್ ತಮ್ಮ ಪುಸ್ತಕದಲ್ಲಿನ ಗಾದೆಗಳಲ್ಲಿನ ದೊಡ್ಡಪಾಲು ಈ ಹಿರಿಯರು ನೀಡಿದ ನಿಧಿ ಎಂದರು. ಬಡಕೋಟ್‌ನಿಂದ ಕೇವಲ 10 ಕಿ.ಮೀ. ದೂರದಲ್ಲಿರುವ ಮೋಲ್ಡಾಗೆ ಹೋಗುವಷ್ಟರಲ್ಲಿ ಮೈಯ ಮೂಳೆಗಳೆಲ್ಲಾ ಮುರಿದಂತೆ ಆಗಿರುತ್ತದೆ. ಬೆಟ್ಟವನ್ನು ಏರುತ್ತಾ ಹೋಗುವ ಈ ಮಣ್ಣಿನ ರಸ್ತೆಯ ತುಂಬಾ ಕಲ್ಲುಗಳು. 2006ರಿಂದ 2016ರವರೆಗಿನ ಹತ್ತು ವರ್ಷಗಳಲ್ಲಿ ಧ್ಯಾನ್‌ಸಿಂಗ್ ರಾವತ್ ಮತ್ತು ಅವರ ಸಹೋದ್ಯೋಗಿ ಇಲ್ಲಿ ಶಾಲೆ ನಡೆಸಿದ್ದರು. ಇಬ್ಬರೂ ತಮ್ಮ ಸಂಸಾರಗಳನ್ನು ಪಟ್ಟಣದಲ್ಲೇ ಬಿಟ್ಟು ಇಲ್ಲಿಯೇ ವಾಸ ಮಾಡಿಕೊಂಡಿದ್ದರು. ಧ್ಯಾನ್‌ಸಿಂಗ್ ಹಳ್ಳಿಯಲ್ಲಿ ಚಿರಪರಿಚಿತರು. ನಾಲ್ಕು ಹೆಜ್ಜೆ ಹಾಕುವಷ್ಟರಲ್ಲಿ ದೊಡ್ಡವರೋ ಚಿಕ್ಕವರೋ ಯಾರಾದರೂ ಬಂದು ಅವರಿಗೆ ವಂದನೆ ಹೇಳುವುದೋ ಕಾಲುಮುಟ್ಟಿ ನಮಸ್ಕಾರ ಮಾಡುವುದೋ ನಡೆಯುತ್ತದೆ. ಮೋಲ್ಡಾದಲ್ಲಿ ಧ್ಯಾನ್‌ಸಿಂಗ್ ಮಕ್ಕಳ ಕೈಯಲ್ಲಿ ವಿಜ್ಞಾನದ ಪ್ರಾಜೆಕ್ಟ್‌ಗಳನ್ನು ಮಾಡಿಸಿದ್ದರು. ಅದು ರಾಷ್ಟ್ರೀಯ ಬಾಲವಿಜ್ಞಾನ ಕಾಂಗ್ರೆಸ್‌ಗಾಗಿ. 2010ರಲ್ಲಿ ಮೊದಲಬಾರಿ ಸ್ಪರ್ಧಿಸಿದಾಗಲೇ ಮೋಲ್ಡಾದ ಶಾಲೆಯು ನೌಗಾಂವ್ ಬ್ಲಾಕ್‌ನ ಇಪ್ಪತ್ತು ಶಾಲೆಗಳು ಭಾಗವಹಿಸಿದ್ದ ಸ್ಪರ್ಧೆಯಲ್ಲಿ ಎರಡನೇ ಸ್ಥಾನವನ್ನು ಗಳಿಸಿತು. ಆಮೇಲೆ ಜಿಲ್ಲಾ ಮಟ್ಟದಲ್ಲಿ ಸ್ಪರ್ಧಿಸಿದಾಗ ಇಪ್ಪತ್ತನಾಲ್ಕು ತಂಡಗಳ ನಡುವೆ ಶ್ರೇಷ್ಠ ತಂಡ ಎಂದು ಆಯ್ಕೆಗೊಂಡು ಜೈಪುರದಲ್ಲಿ ನಡೆಯುವ ಕಾಂಗ್ರೆಸ್‌ನಲ್ಲಿ ಭಾಗವಹಿಸಲು ಅರ್ಹತೆಯನ್ನು ಗಳಿಸಿಕೊಂಡಿತು. ಆದರೆ ಮಕ್ಕಳನ್ನು ಜೈಪುರಕ್ಕೆ ಕರೆದೊಯ್ಯಲು ತಮ್ಮ ಮಕ್ಕಳ ಸಾಧನೆಯು ಎಷ್ಟು ಅಗಾಧವಾದದ್ದು ಎಂಬುದನ್ನು ಅರಿಯಲಾಗದ ಪೋಷಕರನ್ನು ಒಪ್ಪಿಸಲು ಧ್ಯಾನ್‌ಸಿಂಗ್ ಹೆಣಗಾಡಬೇಕಾಯಿತು. ಇಲ್ಲಿಗೂ ನಗರದ ಪರಿಸ್ಥಿತಿಗೂ ಎಂಥ ವ್ಯತ್ಯಾಸ! ನಗರದ ಶಾಲೆಗಳಲ್ಲಿ ಸ್ವತಃ ಪೋಷಕರೇ ಸ್ಪರ್ಧಾ ಮನೋಭಾವವನ್ನು ಹೊಂದಿದ್ದು, ಮಕ್ಕಳ ಹೋಂ ವರ್ಕ್ ಮುಗಿಸಲು ನೆರವು ನೀಡುವುದಲ್ಲದೆ ತಾವೇ ಮಾಡಿ ಮುಗಿಸುವುದೂ ಉಂಟು. ತಾವೇ ಪ್ರಾಜೆಕ್ಟ್‌ಗಳನ್ನು ಮಾಡುತ್ತಾರೆ; ಸಾಲದೆಂಬಂತೆ ಮಾರುಕಟ್ಟೆಯಿಂದ ಸಿದ್ಧವಾದ ಮಾದರಿಗಳನ್ನೇ ಬೇಕಿದ್ದರೆ ಕೊಂಡು ಕೊಡುತ್ತಾರೆ! ಮೋಲ್ಡಾದ ಮಕ್ಕಳು ಮಾತ್ರ ಪರಿಸರ ರಕ್ಷಣೆಯ ಬಗ್ಗೆ, ಕ್ಷೀಣವಾಗುತ್ತಿರುವ ಜಲಸಂಪನ್ಮೂಲಗಳ ಬಗ್ಗೆ ತಮ್ಮ ಬಹುಮಾನ ವಿಜೇತ ಪ್ರಾಜೆಕ್ಟ್‌ಗಳನ್ನು ತಾವೇ ಸಂಪೂರ್ಣವಾಗಿ ಕೈಯಾರೆ ಮಾಡಿದ್ದರು. ಉತ್ತರಾಖಂಡ್‌ದ ವಿಜ್ಞಾನ ನಕ್ಷೆಯ ಮೇಲೆ ಈ ಶಾಲೆಯನ್ನು ಸ್ಥಾಪಿಸಿದ ಶಿಕ್ಷಕರಾದರೋ ಸ್ವತಃ ಹಿಂದಿ ಎಂ.ಎ. ಅಷ್ಟೇ ಮಾಡಿದವರು. ಅವರ ಶಾಲೆಯಲ್ಲಿದ್ದದ್ದು ತೀರಾ ಮೂಲಸ್ವರೂಪದ ಪ್ರಾಥಮಿಕ ಪರಿಕರಗಳು.

ಧ್ಯಾನ್‌ಸಿಂಗ್ ತೆಳ್ಳಗೆ ಕಟ್ಟಿಗೆಯಂತಿರುವ, ದೃಢವಾದ ಶರೀರದ ನಲವತ್ತರ ಪ್ರಾಯದ ವ್ಯಕ್ತಿ. ಇವರು ಚಾರಣದ ಕಡು ವ್ಯಾಮೋಹಿ. ಖಡಕ್‌ವಾಸ್ಲಾದಲ್ಲಿನ ರಾಷ್ಟ್ರೀಯ ರಕ್ಷಣಾ ಅಕಾಡೆಮಿ(NDA)ಯಲ್ಲಿ ತರಬೇತಿಯಲ್ಲಿದ್ದು ಸದ್ಯದಲ್ಲೇ ಭಾರತೀಯ ಸೈನ್ಯದಲ್ಲಿ ಅಧಿಕಾರಿಯಾಗಲಿರುವ ಮಗನೊಂದಿಗೆ ಉತ್ತರಕಾಶಿಯ ಪರ್ವತ ಶ್ರೇಣಿಯಲ್ಲಿ ಚಾರಣ ಮಾಡುವುದು ಅವರಿಗೆ ಬಲು ಇಷ್ಟವಾದುದು. ಧ್ಯಾನ್‌ಸಿಂಗ್ ಫೌಂಡೇಷನ್‌ನೊಂದಿಗೆ ಸಂಬಂಧವನ್ನು ಬೆಳೆಸಿಕೊಂಡದ್ದು 2006ರಲ್ಲಿ. ಆಗ ಅವರು ಪ್ರಾಥಮಿಕ ಶಾಲೆಯಲ್ಲಿದ್ದರು. ಮುಂದಿನ ಹತ್ತು ವರ್ಷಗಳ ಕಾಲ ಅವರು ಹಿರಿಯ ಪ್ರಾಥಮಿಕ ಶಾಲೆಯಲ್ಲಿದ್ದರು. ಕಾಲ ಕಳೆದಂತೆ ಈ ಸಂಬಂಧ ಹೆಚ್ಚು ದೃಢವಾಗಿದೆ. ಶಿಕ್ಷಣದ ಧ್ಯೇಯಗಳ ಬಗೆಗಿನ ತಿಳಿವಳಿಕೆ ಮತ್ತು ಪಠ್ಯಕ್ರಮದ ಗುರಿಗಳನ್ನು ಪಾಠಗಳಿಗೂ ತರಗತಿಯ, ಅನುಭವಕ್ಕೂ ತಳುಕುಹಾಕಬಲ್ಲ ಶಕ್ತಿ – ಇವುಗಳನ್ನೆಲ್ಲ ಸಾಮರ್ಥ್ಯ ನಿರ್ಮಾಣ ಕಾರ್ಯಕ್ರಮಗಳಿಂದ ಹಾಗೂ ಬೇಸಿಗೆ ಮತ್ತು ಚಳಿಗಾಲದ ಕಾರ್ಯಾಗಾರಗಳಿಂದ ಪಡೆದುಕೊಳ್ಳಲು ಸಾಧ್ಯವಾಯಿತು ಎಂದು ಅವರು ಪದೇ ಪದೇ ಸ್ಮರಿಸುತ್ತಾರೆ. ಸಹೋದ್ಯೋಗಿಗಳಿಗೆ ಅವರ ಬಗ್ಗೆ ಅಪಾರ ಗೌರವವಿದೆ. ಅವರೆಲ್ಲ ಟಿಎಲ್‌ಸಿ ಮತ್ತು ವಿಟಿಎಫ್‌ಗಳಲ್ಲಿ ಧ್ಯಾನ್‌ಸಿಂಗ್‌ರ ಅಭಿಪ್ರಾಯಗಳನ್ನು ಗಮನವಿಟ್ಟು ಆಲಿಸುತ್ತಾರೆ.

ಮೋಲ್ಡಾ ಶಾಲೆಯ ಶ್ರೇಯಸ್ಸಿನ ಕಾರಣಕರ್ತರಾದ ಧ್ಯಾನ್‌ಸಿಂಗ್ ಸದ್ಯ ಗಂಗಾಣಿಯಲ್ಲಿ ಇರುವುದರಿಂದ ಅವರ ವ್ಯಕ್ತಿತ್ವ ಈ ಶಾಲೆಗೂ ಸ್ಫೂರ್ತಿಯಾಗಿದೆ. ಆದರೆ ವಿವೇಕಿಗಳಾದ ಧ್ಯಾನ್‌ಸಿಂಗ್ ಇಲ್ಲಿ ಬೇರೆಯವರನ್ನು ಮುಂದಕ್ಕೆ ಬಿಟ್ಟು ತಾವು ಅವರ ಬೆನ್ನಿಗೆ ನಿಂತಿದ್ದಾರೆ. ಹೊಸ ಶಿಕ್ಷಕಿಯಾದ ಪ್ರಭಾ ಅವರಿಗೆ ಮುಂದಾಳತ್ವ ನೀಡಿದ್ದಾರೆ. ವಿಜ್ಞಾನದಲ್ಲಿ ಸ್ನಾತಕೋತ್ತರ ಪದವೀಧರರಾಗಿರುವ ಪ್ರಭಾ ಇಲ್ಲಿ ವಿಜ್ಞಾನವನ್ನೂ ಗಣಿತವನ್ನೂ ಕಲಿಸುತ್ತಿದ್ದಾರೆ. ರಾಷ್ಟ್ರೀಯ ಬಾಲ ವಿಜ್ಞಾನ ಕಾಂಗ್ರೆಸ್‌ಗೆ ಮಕ್ಕಳನ್ನು ಆಕೆಯೇ ತಯಾರು ಮಾಡಲಿ ಎಂದು ಸಹೋದ್ಯೋಗಿಗಳು ಸಲಹೆ ನೀಡಿದ ಕೂಡಲೇ ಪ್ರಭಾ ಅದನ್ನು ಎರಡೂ ಕೈಗಳಿಂದ ಬಾಚಿಕೊಂಡರು. ನಾವು ಶಾಲೆಗೆ ಭೇಟಿ ನೀಡಿದಾಗ ಎರಡು ತಂಡಗಳು "ನಮ್ಮ ಬೆಟ್ಟಗಳಲ್ಲಿ ಕಂಡುಬರುವ ಔಷಧಿ ಸಸ್ಯಗಳು" ಮತ್ತು "ಸ್ಥಳೀಯ ಆಹಾರ ಮತ್ತು ಪೌಷ್ಟಿಕತೆ" ಎಂಬ ವಿಷಯಗಳ ಮೇಲೆ ಪ್ರಾಜೆಕ್ಟ್‌ಗಳನ್ನು ಮಾಡುತ್ತಿದ್ದವು. ಕಾಂಗ್ರೆಸ್ ಇನ್ನೂ ಮೂರು ತಿಂಗಳಷ್ಟು ದೂರದಲ್ಲಿತ್ತು. ಪ್ರಾಜೆಕ್ಟ್‌ಗಳ ಮೇಲೆ ಕಣ್ಣು ಹಾಯಿಸಿದಾಗ ನಮಗೆ ಮಕ್ಕಳ ಕಠಿಣವಾದ ಪರಿಶ್ರಮವೂ ಶಿಕ್ಷಕರ ಹಗುರವಾದ ಮಾರ್ಗದರ್ಶನದ ಸ್ಪರ್ಶವೂ ಗೋಚರವಾದವು. ಎಲ್ಲ ಸಾಮಗ್ರಿಗಳನ್ನೂ ಮಾಹಿತಿಗಳನ್ನೂ ಮಕ್ಕಳೇ ಸಂಗ್ರಹಿಸಿ ತಮ್ಮದೇ ಸ್ವಂತ ಮಾತುಗಳಲ್ಲಿ ಪ್ರಸ್ತುತಪಡಿಸುತ್ತಿದ್ದರು. ಹೀಗಾಗಿ ಈ ಮಕ್ಕಳು ಎಲ್ಲಿ ಬೇಕಾದರೂ, ಯಾವಾಗ ಬೇಕಾದರೂ ಆಶುಪ್ರದರ್ಶನ ನೀಡಲು ಅಲ್ಪಾವಧಿಯಲ್ಲೇ ತಯಾರಾಗುವಷ್ಟು ಸಮರ್ಥರಾಗಿದ್ದಾರೆ. ಯಾವುದೇ ಪ್ರಶ್ನೆಯನ್ನು ಅವರು ಆತ್ಮವಿಶ್ವಾಸದಿಂದ ಉತ್ತರಿಸುತ್ತಾರೆ. ಇನ್ನೂ ಮುಖ್ಯವಾದ ಸಂಗತಿಯೆಂದರೆ ಅವರಿಗೆ ಉತ್ತರಿಸಲು ಸಾಧ್ಯವಾಗದಿದ್ದರೆ "ಪತಾ ಕರೇಂಗೆ" (ಉತ್ತರ ಹುಡುಕುತ್ತೇವೆ) ಅನ್ನುತ್ತಾರೆ. ಈ ಮಕ್ಕಳ ಆತ್ಮವಿಶ್ವಾಸ ಅಂತಹುದು.

ಇದೆಲ್ಲಾ ನಡೆದಿರುವುದು ಕಳೆದ ಒಂದು ವರ್ಷದ ಅವಧಿಯಲ್ಲಿ. ತಮ್ಮ ಪ್ರತಿಯೊಬ್ಬ

ವಿದ್ಯಾರ್ಥಿಯೂ ವಿಜ್ಞಾನ ಮತ್ತು ಗಣಿತದಲ್ಲಿ ಒಳ್ಳೆಯ ತಿಳಿವಳಿಕೆ ಪಡೆದುಕೊಳ್ಳಬೇಕು ಎಂದು ಆಶಿಸುವ ಪ್ರಭಾ, ಇದೀಗ ಮಕ್ಕಳಲ್ಲಿ ಪ್ರಗತಿ ಕಾಣಿಸುತ್ತಿದೆ ಎನ್ನುತ್ತಾರೆ. ಓದುವುದು, ಬರೆಯುವುದು ಮತ್ತು ಗ್ರಹಿಕೆಯಲ್ಲಿ ಒಂದು ಮಟ್ಟದ ದಕ್ಷತೆ ಗೋಚರವಾಗುತ್ತಿದೆ. ಕೆ.ಜಿ.ಬಿ.ವಿಯಿಂದ ಬಂದ ವಿದ್ಯಾರ್ಥಿನಿಯರ ಮಟ್ಟವನ್ನು ಮೇಲಕ್ಕೆ ಎತ್ತುವುದೇ ಶಿಕ್ಷಕರ ಮುಂದೆ ಇರುವ ದೊಡ್ಡ ಸವಾಲು. ಏಕೆಂದರೆ ಈ ಹೆಣ್ಣುಮಕ್ಕಳು ಅತ್ಯಂತ ಹಿಂದುಳಿದ ಹಿನ್ನೆಲೆಗಳಿಂದ ಬಂದವರು. ಶಿಕ್ಷಕರು ಅವರಿಗೆ ವಿಶೇಷವಾದ, ವೈಯಕ್ತಿಕವಾದ ಗಮನ ನೀಡಲು ಬದ್ಧರಾಗಿದ್ದಾರೆ. ಈ ಮೊದಲು ಪೋಷಕರಿಗೆ ಶಾಲೆಯ ಬಗ್ಗೆ ಒಳ್ಳೆಯ ಅಭಿಪ್ರಾಯ ಇರಲಿಲ್ಲ, ಆದರೆ ಕಳೆದ ಒಂದು ವರ್ಷದಲ್ಲಿ ಆಗಿರುವ ಬದಲಾವಣೆಯನ್ನು ಅವರೂ ಗುರುತಿಸುತ್ತಾರೆ ಎಂದು ಮುಖ್ಯೋಪಾಧ್ಯಾಯ ಸೂರತ್‌ಲಾಲ್ ಅವರು ಹೇಳುತ್ತಾರೆ. ಪೋಷಕರೊಂದಿಗಿನ ತಿಂಗಳ ಸಭೆಯನ್ನು ತಪ್ಪದೆ ಅಚ್ಚುಕಟ್ಟಾಗಿ, ನಿಷ್ಠೆಯಿಂದ ನಡೆಸಲಾಗುತ್ತಿದೆ. ಈ ಮೊದಲು ಪೋಷಕರು ಸಭೆಗಳಿಗೆ ಬರುವುದನ್ನು ತಪ್ಪಿಸಿಕೊಳ್ಳುತ್ತಿದ್ದರು; ಆದರೆ ಈಗ ಪರಿಸ್ಥಿತಿ ಬದಲಾಗಿದೆ. ಮಾತು ಮುಂದುವರಿದಂತೆ ಎಲ್ಲಾ ಕಡೆಗಳಂತೆ ಇಲ್ಲಿನ ಶಿಕ್ಷಕರೂ ಶಿಕ್ಷಣದ ವಿಶಾಲ ಧ್ಯೇಯದ ಬಗ್ಗೆ, ಜವಾಬ್ದಾರಿಯುತ ನಾಗರಿಕರನ್ನು ಸೃಷ್ಟಿಸುವ ಬಗ್ಗೆ, ಜೀವನಪರ್ಯಂತ ಕಲಿಯಬಲ್ಲ ವಿದ್ಯಾರ್ಥಿಗಳನ್ನು ರೂಪಿಸುವ ಬಗ್ಗೆ, ಆತ್ಮವಿಶ್ವಾಸದ ನಿರ್ಮಾಣದ ಬಗ್ಗೆ ಮತ್ತು ಬೇರೆಯವರ ಬಗ್ಗೆ ಅನುಕಂಪ, ಹಂಚಿಕೊಳ್ಳುವ ಗುಣ ಇವುಗಳನ್ನು ಬೆಳೆಸುವ ಬಗ್ಗೆಯೂ ಪೂರಕ ಅಭಿಪ್ರಾಯ ವ್ಯಕ್ತಪಡಿಸಿದರು. ಗಂಗಾಣಿಯ ಆದರ್ಶ್ ಹಿರಿಯ ಪ್ರಾಥಮಿಕ ಶಾಲೆಯ ಹಜಾರದ ಗೋಡೆಯ ಮೇಲೆ ಬರೆಯಲಾದ ಭಾರತದ ಸಂವಿಧಾನದ ಪ್ರಸ್ತಾವನೆಯು ಅಂದವಾಗಿ ಈ ಸಂದರ್ಭಕ್ಕೆ ತಕ್ಕಂತೆ ಬಣ್ಣದಲ್ಲಿ ಕಂಗೊಳಿಸುತ್ತಿತ್ತು.

---

## "ನಮ್ಮ ಶಾಲೆ, ನಮ್ಮ ಮಕ್ಕಳು"

**ಶಾಂತಿಪ್ರಸಾದ್, ಮಾರ್ಕಂಡೇಯ ಪ್ರಸಾದ್**
**ಚರಣ್ ಸಿಂಗ್ ಅಸ್ವಾಲ್**
ಹಿರಿಯ ಪ್ರಾಥಮಿಕ ಶಾಲೆ, ಡೆರಿಕಾ, ಪುರೋಲಾ ಬ್ಲಾಕ್
ಉತ್ತರಕಾಶಿ ಜಿಲ್ಲೆ, ಉತ್ತರಾಖಂಡ್

---

ಡೆರಿಕಾದ ಹಿರಿಯ ಪ್ರಾಥಮಿಕ ಶಾಲೆಯ ಸ್ಥಾಪನೆ 1988ರಲ್ಲಿ. ಇಲ್ಲಿ ಆರು, ಏಳು ಮತ್ತು ಎಂಟನೇ ತರಗತಿಯಲ್ಲಿ ಒಟ್ಟು 34 ಮಕ್ಕಳು ವ್ಯಾಸಂಗ ಮಾಡುತ್ತಿದ್ದಾರೆ. ವರ್ಷವಿಡೀ ಹಾಜರಿ ಉತ್ತಮವಾಗಿದ್ದು, ಬಹುತೇಕ ದಿನಗಳಲ್ಲಿ ಸರಾಸರಿ ಮೂವತ್ತರಿಂದ ಮೂವತ್ತೆರಡು ಮಕ್ಕಳು ಹಾಜರಿರುತ್ತಾರೆ. ಬಹುತೇಕ ಮಕ್ಕಳು ಶಾಲೆಯಿಂದ ಮೂರು ಕಿಲೋಮೀಟರ್ ವ್ಯಾಪ್ತಿಯಲ್ಲಿರುವ ಅಕ್ಕಪಕ್ಕದ ಗ್ರಾಮಗಳಿಂದ ಬರುತ್ತಾರೆ. ಇದೊಂದು ಸ್ವಚ್ಛವಾಗಿರುವ ಶಾಲೆಯಾಗಿದ್ದರೂ ನವೀಕರಣದ ಅಗತ್ಯವಿದೆ. ಶಾಲೆಗೆ ಭೇಟಿ ನೀಡಿದವರಿಗೆ ಅಲ್ಲಿನ ಚೈತನ್ಯ ತುಂಬಿದ ಉಲ್ಲಾಸದ ವಾತಾವರಣ ತಕ್ಷಣ ಅರಿವಿಗೆ

ಬರುತ್ತದೆ. ಇದಕ್ಕೆ ಶಿಕ್ಷಕರು ಹಾಗೂ ಮಕ್ಕಳ ನಡುವಿನ ಸಹಜ ಸಂಬಂಧ ಮತ್ತು ಸೌಜನ್ಯಪೂರಿತ ಅನ್ಯೋನ್ಯತೆ ಕಾರಣ. 2004ರಿಂದ ಈ ಶಾಲೆಯಲ್ಲಿರುವ ಶಾಂತಿಪ್ರಸಾದ್ ಬಳಿ ಇಲ್ಲಿನ ಸ್ಫೂರ್ತಿದಾಯಕ ವಾತಾವರಣದ ಕುರಿತು ಸಾಕಷ್ಟು ಮಾಹಿತಿ ಇದೆ.

ಇದೇ ಬ್ಲಾಕ್‌ನ ಸ್ಥಳೀಯರಾದ ಶಾಂತಿ ಪ್ರಸಾದ್, ತಮ್ಮ ಮೂವತ್ತನೇ ವರ್ಷದ ಆರಂಭದಲ್ಲಿ, 2001ರಲ್ಲಿ ಶಿಕ್ಷಣ ಸೇವೆಯನ್ನು ಸೇರಿದರು. ವಿಜ್ಞಾನ ವಿಷಯದಲ್ಲಿ ಇಂಟರ್ ಮೀಡಿಯೇಟ್, ಬಳಿಕ ಬಿಟಿಸಿ ಮುಗಿಸಿದ ವೇಳೆಯಲ್ಲೇ ಮೋರಿ ಬ್ಲಾಕ್‌ಗೆ ನೇಮಕಗೊಂಡರು. ಇದಕ್ಕೆ ಮುನ್ನ ಲೋಕೋಪಯೋಗಿ ಇಲಾಖೆ(ಪಿಡಬ್ಲ್ಯುಡಿ)ಯಲ್ಲಿ ದಿನ ಗುತ್ತಿಗೆ ಆಧಾರದಲ್ಲಿ ಗುಮಾಸ್ತನಾಗಿ ಮತ್ತು ಆನಂತರ ಆರು ವರ್ಷ ಕಾಲ ಖಾಸಗಿ ಶಾಲೆಯಲ್ಲಿ ಗಣಿತಶಾಸ್ತ್ರ–ವಿಜ್ಞಾನ ಶಿಕ್ಷಕನಾಗಿ ಸೇವೆ ಸಲ್ಲಿಸಿದ್ದರು. ಮೋರಿ ಬ್ಲಾಕ್‌ನಲ್ಲಿನ ಕೆಲಸವು, ದೂರದ ಮೂಲೆಯೊಂದರಲ್ಲಿರುವ ಮಕ್ಕಳು ಎದುರಿಸುವ ಸಮಸ್ಯೆಗಳು ಹಾಗೂ ಸಂಕಷ್ಟಗಳ ಬಗ್ಗೆ ಶಾಂತಿಪ್ರಸಾದ್‌ಗೆ ಅರಿವನ್ನೂ ಅನುಭವವನ್ನೂ ನೀಡಿತು. ಇದರಿಂದಾಗಿಯೇ ಪುರೋಲಾದ ಡೆರಿಕಾ ಶಾಲೆಯಲ್ಲಿನ ಸಂಪನ್ಮೂಲ, ಸೌಲಭ್ಯ ಹಾಗೂ ಬದುಕಿನ ಸೌಕರ್ಯಗಳನ್ನು ಮೆಚ್ಚಲು ಅವರಿಗೆ ಸಾಧ್ಯವಾಯಿತು. ಬೇಗ ಮದುವೆಯಾದ ಶಾಂತಿಪ್ರಸಾದ್‌ಗೆ ನಾಲ್ವರು ಬೆಳೆದ ಮಕ್ಕಳಿದ್ದಾರೆ. ಒಬ್ಬ ಎಂಜಿನಿಯರ್, ಇನ್ನಿಬ್ಬರು ಎಂಎ ಮತ್ತು ಬಿಎಡ್ ಪೂರ್ಣಗೊಳಿಸಿದ್ದು, ಕಿರಿಯ ಮಗಳು ಬಿಎಸ್‌ಸಿ ಮುಗಿಸಿ ಬಿಇಡಿ ಮಾಡುತ್ತಿದ್ದಾಳೆ.

ಶಾಂತಿಪ್ರಸಾದ್ ಡೆರಿಕಾದಲ್ಲಿ ಕಳೆದ ಹದಿನಾಲ್ಕು ವರ್ಷಗಳನ್ನು ವೈಯಕ್ತಿಕ ಬೆಳವಣಿಗೆ ಹಾಗೂ ಪ್ರಗತಿಯ ಅದ್ಭುತ ಪ್ರಯಾಣವಾಗಿ ನೋಡುತ್ತಾರೆ. "ನಾನು ಇಲ್ಲಿಗೆ ಮೊದಲ ಬಾರಿ ಬಂದಾಗ, ನಮ್ಮೆಲ್ಲರದ್ದು ಹಳೆಯ ಕಾಲದ ಹಾಗೂ ಸಾಂಪ್ರದಾಯಿಕ ಚಿಂತನೆಯಾಗಿತ್ತು. ಮೊದಲು ನಾವು ಶಿಕ್ಷೆಯ ಬಗ್ಗೆಯೇ ಆಲೋಚಿಸುತ್ತಿದ್ದೆವು. ಶಿಕ್ಷೆಯು ಭಯಕ್ಕೂ ಅಸಮಾಧಾನಕ್ಕೂ ಕಾರಣವಾಗುತ್ತದೆ ಎನ್ನುವುದು ನಮಗೀಗ ಗೊತ್ತಾಗಿದೆ. ಈಗ ನಾವು "ಸಹಾಯ ಮಾಡು ಹಾಗೂ ಬೆಳೆಸು" ಎಂದು ಆಲೋಚಿಸುತ್ತೇವೆ." ಶಾಂತಿಪ್ರಸಾದ್ ಪ್ರಕಾರ, ಅವರಲ್ಲಿ ತಾಳ್ಮೆ ಮತ್ತು ಸಹಿಷ್ಣುತೆ ಹೆಚ್ಚಿತು. ಈಗ ಮಕ್ಕಳು ಅವರಲ್ಲಿ ಯಾವುದೇ ಪ್ರಶ್ನೆ ಕೇಳಲು, ತಮ್ಮ ಭಾವನೆಗಳನ್ನು ವ್ಯಕ್ತಪಡಿಸಲು ಭಯಪಡುವುದಿಲ್ಲ. ತರಗತಿಯಲ್ಲಿನ ಪ್ರಕ್ರಿಯೆಗಳು ಹಾಗೂ ಪರಸ್ಪರ ಕ್ರಿಯೆಗಳು ಕೂಡ ನಾಟಕೀಯವೆಂಬಂತೆ ಬದಲಾಗಿವೆ. "ಜನ ತರಗತಿಯಲ್ಲಿ ಚಟುವಟಿಕೆ ಇರಬೇಕೆಂದು ಪ್ರತಿಪಾದಿಸುತ್ತಾರೆ. ಆದರೆ, ನಮಗೆ ಬೋಧನಾ ಕಲೆ ಮತ್ತು ವಿಧಾನಗಳ ಸ್ಪಷ್ಟ ಕಲ್ಪನೆ ಇರಬೇಕು. ವೈಯಕ್ತಿಕವಾಗಿ ಹೇಳಬೇಕೆಂದರೆ, ಒಂದು ಪರಿಕಲ್ಪನೆ ಇಲ್ಲವೆ ವಿಷಯವನ್ನು ವಿವರಿಸುವಾಗ, ಕೆಲವು ಮಕ್ಕಳು ಅರ್ಥಮಾಡಿಕೊಳ್ಳುವುದರಲ್ಲಿ ಹಿಂದೆ ಉಳಿದರೆ ಆಗ ನಾನು ಚಟುವಟಿಕೆಯನ್ನು ಬಳಸುತ್ತೇನೆ. ನಾನು ನಿಜಜೀವನದ ಸನ್ನಿವೇಶಗಳನ್ನು– ಉದಾಹರಣೆಗೆ, ಮಾರುಕಟ್ಟೆಗೆ ಅವರ ಭೇಟಿಯನ್ನು– ಬಳಸಿಕೊಳ್ಳುತ್ತೇನೆ."

ಸಮಾಜ ವಿಜ್ಞಾನ ಮತ್ತು ಇಂಗ್ಲಿಷ್ ಕಲಿಸುವ ಶಾಂತಿಪ್ರಸಾದ್, ಶಿಕ್ಷಕರಿಗೋಸ್ಕರ ಏರ್ಪಡಿಸುವ ಬೆಂಬಲದ ಚಟುವಟಿಕೆಗಳೊಡನೆ ಸಂಪರ್ಕ ಹೊಂದಿದ್ದಾರೆ. ನಾನಾ ಕಾರ್ಯಾಗಾರಗಳು ಹಾಗೂ ಅಲ್ಪಾವಧಿಯ ತರಬೇತಿ ಕಾರ್ಯಕ್ರಮದಲ್ಲಿ ನಿಯಮಿತವಾಗಿ ಪಾಲ್ಗೊಳ್ಳುವ ಅವರು ಹೇಳುತ್ತಾರೆ, "ವಿಟಿಎಫ್ ಮತ್ತು ಟಿಎಲ್‌ಸಿಯಲ್ಲಿ ನಡೆಯುವ

ಕಾರ್ಯಾಗಾರಗಳು ಮತ್ತು ಚರ್ಚೆಗಳಿಂದ ಕೆಲವು ಪರಿಕಲ್ಪನೆಗಳು ನನಗೆ ಸ್ಪಷ್ಟವಾಗಿವೆ. ಅವುಗಳನ್ನು ಉತ್ತಮವಾಗಿ ಅಭಿವ್ಯಕ್ತಿಗೊಳಿಸುವುದು ಹೇಗೆ ಎನ್ನುವುದು ಗೊತ್ತಾಗಿದೆ. ಇವು ಕೇವಲ ಔಪಚಾರಿಕ ತರಬೇತಿಗಳಲ್ಲ. ಬದಲಿಗೆ, ಬಹಳ ಸಹಜವಾದ, ಸಂವಾದರೂಪದ ಕಾರ್ಯಕ್ರಮ". ಉತ್ತರಕಾಶಿಯ ತರಗತಿಯಲ್ಲಿನ ತಮ್ಮ ಅನುಭವಗಳನ್ನು ಹಾಗೂ ವಿಚಾರಗಳನ್ನು ದಿನಚರಿಯಲ್ಲಿ ದಾಖಲಿಸುವ ಶಿಕ್ಷಕರ ಪಟ್ಟಿ ದೀರ್ಘವಾಗುತ್ತಿದ್ದು, ಅವರಲ್ಲಿ ಶಾಂತಿಪ್ರಸಾದ್ ಕೂಡ ಒಬ್ಬರು. ಆದರೆ, "ತಿಂಗಳಲ್ಲಿ ಮೂರು, ನಾಲ್ಕು ಬಾರಿ ಮಾತ್ರ ಬರೆಯುತ್ತೇನೆ." ಎಂದು ಅವರು ಒಪ್ಪಿಕೊಳ್ಳುತ್ತಾರೆ. ಸರ್ಕಾರೇತರ ಸೇವಾ ಸಂಸ್ಥೆಯಾದ (ಎನ್‌ಜಿಓ) 'ಏಕಲವ್ಯ' ಪ್ರಕಟಿಸುವ 'ಚಕ್‌ಮಕ್' ಎಂಬ ವಿಜ್ಞಾನ ಮಕ್ಕಳ ಮಾಸಿಕವನ್ನು ಅಜೀಂ ಪ್ರೇಮ್‌ಜಿ ಫೌಂಡೇಷನ್, ಶಾಲೆಗಳಿಗೆ ವಿತರಿಸಿದಾಗ, ತಮ್ಮ ಶಾಲೆಯ ಮಕ್ಕಳಿಗೆ ಗುಣಮಟ್ಟದ ವಾಚನ ಸಾಮಗ್ರಿ ನೀಡಲು ಇದೊಂದು ಒಳ್ಳೆಯ ಅವಕಾಶ ಎಂದು ಶಾಂತಿಪ್ರಸಾದ್ ಕಂಡುಕೊಂಡರು. ಕಳೆದ ಮೂರು ವರ್ಷಗಳಲ್ಲಿ ಇದರಿಂದಾಗಿ ಮಕ್ಕಳ ಗ್ರಹಿಕೆಯಲ್ಲಿ ಗಮನಾರ್ಹ ಬದಲಾವಣೆ ಆಗಿರುವುದನ್ನು ಅವರು ಗಮನಿಸಿದ್ದಾರೆ. 'ಡೆರಿಕಾದ ಹಿರಿಯ ಪ್ರಾಥಮಿಕ ಶಾಲೆಯ ಮಕ್ಕಳು ಕವನ ಹಾಗೂ ಕತೆಗಳನ್ನೂ ಬರೆಯಲಾರಂಭಿಸಿದ್ದಾರೆ' ಎಂದು ಖುಷಿಯಿಂದ ಹೇಳುತ್ತಾರೆ.

ಅಂತರ್ಜಾಲ ಮತ್ತು ವಾಟ್ಸ್‌ಆ್ಯಪ್ ಕ್ರಾಂತಿಯು ಕಲಿಕೆ ಮತ್ತು ಪರಿವರ್ತನೆಗೆ ಕಾರಣವಾದ ಇನ್ನೊಂದು ಮುಖ್ಯ ಮೂಲವಾಗಿದೆ. "ಅಂತರ್ಜಾಲ ಬಂದ ಬಳಿಕ ನಮ್ಮ ಓದುವಿಕೆಯು ಗಮನಾರ್ಹವಾಗಿ ಹೆಚ್ಚಿದೆ. ಮೊಬೈಲ್ ಫೋನ್ ಬಹು ದೊಡ್ಡ ಬದಲಾವಣೆಗೆ ಕಾರಣವಾಗಿದೆ. ಅಲ್ಲಿ ನನಗೆ ತಕ್ಷಣ ಪರಿಹಾರ ದೊರೆಯುತ್ತದೆ. ತೆಹ್ರಿ ಮತ್ತು ಉತ್ತರ ಕಾಶಿಯ ಅಂದಾಜು ಐವತ್ತು ಶಿಕ್ಷಕರು ಒಂದು ವರ್ಷದ ಹಿಂದೆ ಈ ಸಂದರ್ಭಕ್ಕೆ ತಕ್ಕಂತೆ, 'ಪ್ರಾಜೆಕ್ಟ್ ಇಂಗ್ಲಿಷ್' ಎನ್ನುವ ವಾಟ್ಸ್‌ಆ್ಯಪ್ ಗುಂಪು ಮಾಡಿಕೊಂಡಿದ್ದೇವೆ. ನಮ್ಮ ಹೆಚ್ಚಿನ ಸಂವಾದ ಹಿಂದಿಯಲ್ಲಿ ನಡೆಯುವುದಾದರೂ ಇಂಗ್ಲಿಷ್ ಕಲಿಸುವಿಕೆ ಬಗ್ಗೆ ನಾವು ಸಾಕಷ್ಟು ಚರ್ಚೆ ಮಾಡುತ್ತೇವೆ. ಸಾಮಾನ್ಯವಾಗಿ ಇಂಗ್ಲಿಷ್ ಮಾತನ್ನಾಡಲು ನಮಗೆ ಅವಕಾಶ ಇಲ್ಲದೆ ಇರುವುದರಿಂದ, ಇಂಥ ವೇದಿಕೆ ನಮಗೆಷ್ಟು ಉಪಯುಕ್ತ ಎನ್ನುವುದನ್ನು ನೀವೇ ಊಹಿಸಬಹುದು."

ಮಾರ್ಕಂಡೇಯ ಪ್ರಸಾದ್ 2004ರಿಂದ ಈ ಶಾಲೆಯ ಮುಖ್ಯ ಶಿಕ್ಷಕ. ಹಿಂದಿ ಮತ್ತು ಸಂಸ್ಕೃತವನ್ನು ಕಲಿಸುತ್ತಾರೆ. ವಿಶಾಲ ಹೃದಯದ ಈತ ಯಶಸ್ಸಿನ ಹೆಚ್ಚಿನ ಪಾಲನ್ನು ಶಾಲೆಯಲ್ಲಿ ಈ ಹಿಂದೆ ಐದು ವರ್ಷ ಇದ್ದು, ಬಳಿಕ ಇಂಟರ್ ಕಾಲೇಜಿಗೆ ಬಡ್ತಿ ಹೊಂದಿದ ಸಹೋದ್ಯೋಗಿ ಮನ್ಬೀರ್ ಸಿಂಗ್ ರಾವತ್ ಅವರಿಗೆ ಕೊಡುತ್ತಾರೆ. ಯಾರಾದರೂ ಡೆರಿಕಾದ ಹಿರಿಯ ಪ್ರಾಥಮಿಕ ಶಾಲೆಯನ್ನು ಮಾರ್ಕಂಡೇಯ ಪ್ರಸಾದ್ ಎದುರು ಶ್ಲಾಘಿಸಿದರೆ, ಚಂಡೇಲಿ ಮತ್ತು ಸುನಾಲಿಯ ಹಿರಿಯ ಪ್ರಾಥಮಿಕ ಶಾಲೆಗಳು ಈ ಬ್ಲಾಕ್‌ನಲ್ಲಿನ ಉತ್ತಮ ಶಾಲೆಗಳು ಎಂದು ಸೌಜನ್ಯದಿಂದಲೇ ಹೇಳುತ್ತಾರೆ. ಅಷ್ಟು ಮಾತ್ರವಲ್ಲದೆ, ಹಲವು ವರ್ಷಗಳ ಹಿಂದೆ ಸುನಾಲಿ ಶಾಲೆಯಿಂದ ನಿವೃತ್ತರಾದ ಸತ್ಯಪಾಲ್ ಸಿಂಗ್ ಅವರು ಎಲ್ಲರೂ ಅನುಸರಿಸಬೇಕಾದ ಮಾದರಿ ಮುಖ್ಯ ಶಿಕ್ಷಕ ಎಂದು ಗೌರವದಿಂದ ಸ್ಮರಿಸಿಕೊಳ್ಳುತ್ತಾರೆ. ಆದರೆ, ಮಾರ್ಕಂಡೇಯ ಪ್ರಸಾದ್ ಅವರ

ಹಿಂದಿರುವ ಫಲಕದ ಮೇಲೆ ಕಣ್ಣು ಹಾಯಿಸಿದರೆ, ರಾಷ್ಟ್ರೀಯ ಸಾಧನೆ ಮತ್ತು ಪ್ರತಿಭಾ ಶಿಷ್ಯವೇತನ(ಎನ್ಎಂಎಂಎಸ್– ಇದು ಕೇಂದ್ರ ಸರ್ಕಾರದ ಪ್ರಾಯೋಜಿತ ಯೋಜನೆ. ಈ ಪರೀಕ್ಷೆ ಪ್ರತಿಭಾವಂತ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಿ, ಅವರ ಶೈಕ್ಷಣಿಕ ವೆಚ್ಚವನ್ನು ಭರಿಸಲು ನಡೆಯುತ್ತದೆ) ಪಡೆದ ವಿದ್ಯಾರ್ಥಿಗಳ ಹೆಸರುಗಳನ್ನು ನೋಡುತ್ತೀರಿ. ಜಿಲ್ಲೆಯಿಂದ 40–45 ವಿದ್ಯಾರ್ಥಿಗಳು ಈ ಶಿಷ್ಯವೇತನಕ್ಕೆ ಆಯ್ಕೆಯಾಗುತ್ತಿದ್ದು, ಪ್ರತಿ ವರ್ಷ ಒಬ್ಬರು ಇಲ್ಲವೇ ಇಬ್ಬರು ಡೆರಿಕಾದ ಹಿರಿಯ ಪ್ರಾಥಮಿಕ ಶಾಲೆಯ ಮಕ್ಕಳು ಇರುತ್ತಾರೆ. ಇದು ಈ ಶಾಲೆಯ ಕಲಿಕೆಯ ಗುಣಮಟ್ಟದ ಸೂಚನೆ.

ಸಮುದಾಯ ಹಾಗೂ ಶಾಲೆಯ ನಡುವಿನ ಸಂಬಂಧ ಉತ್ತಮವಾಗಿರುವುದಕ್ಕೆ ಮಾರ್ಕಂಡೇಯ ಪ್ರಸಾದ್ ಸಂತಸ ವ್ಯಕ್ತಪಡಿಸುತ್ತಾರೆ. ಎಸ್ಎಂಸಿ ಮಾಸಿಕ ಸಭೆಗೆ ಹೆಚ್ಚು ಜನ ಬರುತ್ತಿದ್ದಾರೆ, ಅದರ ಮಹತ್ವವನ್ನು ಎಲ್ಲರೂ ಅರ್ಥ ಮಾಡಿಕೊಂಡಿದ್ದಾರೆ. "ನಾವು ಮಕ್ಕಳ ಪ್ರಗತಿ ಬಗ್ಗೆ ಚರ್ಚಿಸುತ್ತೇವೆ, ಪೋಷಕರ ಅಭಿಪ್ರಾಯ ಹಾಗೂ ಸಲಹೆಯನ್ನು ಕೇಳುತ್ತೇವೆ. ಶಿಕ್ಷಕರು ಪ್ರತಿದಿನ ತಮ್ಮತಮ್ಮಲ್ಲೇ ಚರ್ಚೆ ನಡೆಸುತ್ತಾರೆ. ಸಮಸ್ಯೆಗಳನ್ನು ಗುರುತಿಸುತ್ತಾರೆ; ಅವುಗಳನ್ನು ಬಗೆಹರಿಸಲು ಯೋಜನೆಗಳನ್ನು ರೂಪಿಸುತ್ತಾರೆ. ಮನೆಕೆಲಸವನ್ನು ಗಂಭೀರವಾಗಿ ಪರಿಗಣಿಸುತ್ತೇವೆ, ಸೂಕ್ಷ್ಮವಿವರಗಳಿಗೆ ಗಮನ ನೀಡುತ್ತೇವೆ; ಎಲ್ಲ ಶಿಕ್ಷಕರೂ ಮಗುವಿಗೆ ಮಾಡಬೇಕಾದ ಕೆಲಸಗಳನ್ನು ತಿಳಿಸುತ್ತಾರೆ.. ಒಂದು ವೇಳೆ ಯಾವುದೋ ಕೆಲಸ ಬಾಕಿ ಉಳಿದುಕೊಂಡಿದ್ದರೆ, ಶಿಕ್ಷಕರು ಅದನ್ನು ಪ್ರತಿ ಶನಿವಾರದೊಳಗೆ ಮುಗಿಸಬೇಕು" ಎಂದು ಮುಖ್ಯ ಶಿಕ್ಷಕ ನಮಗೆ ಮಾಹಿತಿ ನೀಡಿದರು.

ಇದೊಂದು ಎಸ್ಎಸ್ಎ ಶಾಲೆಯಾಗಿದ್ದು, ಇದರ ವೆಚ್ಚ ರಾಜ್ಯ ಸರ್ಕಾರದ ಯೋಜನೆಯಡಿ ಬಾರದೆ ಯೋಜನೇತರ ವೆಚ್ಚದಡಿ ಬರುವುದರಿಂದ, ಮಾಸಿಕ ವೇತನ ನೀಡಿಕೆ ವಿಳಂಬದ ಸಮಸ್ಯೆ ಯಾವಾಗಲೂ ಇರುತ್ತದೆ. ಆದರೆ, ಶಿಕ್ಷಕರು ಇದಕ್ಕೆ ಹೊಂದಿಕೊಂಡು ಬಿಟ್ಟಿದ್ದಾರೆ. ವಾಸ್ತವವೆಂದರೆ, ಈ ವರ್ಷ ಪ್ರತಿಯೊಬ್ಬರೂ 5,000 ರೂ. ದೇಣಿಗೆ ನೀಡುವ ಮೂಲಕ ಶಾಲೆಯ ನವೀಕರಣ ಹಾಗೂ ಬೋಧನೆಗೆ ಅಗತ್ಯವಿರುವ ವಸ್ತುಗಳನ್ನು ಖರೀದಿಸಲು ನಿರ್ಧರಿಸಿದ್ದಾರೆ. ಮಾರ್ಕಂಡೇಯ ಪ್ರಸಾದ್ ತುಂಬಾ ಸರಳವಾಗಿ ಎಂಬಂತೆ ಹೇಳಿದರು: "ಇದು ನಮ್ಮ ಶಾಲೆ, ಇವರು ನಮ್ಮ ಮಕ್ಕಳು." ಮಾರ್ಕಂಡೇಯ ಪ್ರಸಾದ್ ಅವರ ಸ್ವಗ್ರಾಮ ಇಲ್ಲಿಂದ ನೂರು ಮೈಲು ದೂರದಲ್ಲಿದೆ. ಆದರೆ, ಪುರೋಲಾವೇ ಈಗ ಅವರ ಊರು. ವೈದ್ಯೆಯಾಗಬೇಕೆಂಬ ಹಂಬಲವುಳ್ಳ ಅವರ ಮಗಳು ಪುರೋಲಾದ ನವೋದಯ ವಿದ್ಯಾಶಾಲೆಯಲ್ಲಿ ವಿದ್ಯಾಭ್ಯಾಸ ಮಾಡಿದ್ದು, ಇತ್ತೀಚೆಗೆ ವೈದ್ಯಕೀಯ ಕಾಲೇಜಿನಲ್ಲಿ ಸ್ಥಾನ ಪಡೆದಿದ್ದಾಳೆ. ಡೆರಿಕಾ ಶಾಲೆಯ ಬಹಳಷ್ಟು ವಿದ್ಯಾರ್ಥಿಗಳು ಉತ್ತಮ ಸಾಧನೆ ಮಾಡಿದ್ದಾರೆ ಎಂದು ಅವರು ಹೇಳುತ್ತಾರೆ. ಕೆಲವರು ನರ್ಸಿಂಗ್, ಇನ್ನೊಬ್ಬರು ಬಿಐಎಂಎಸ್, ಮತ್ತೊಬ್ಬರು ಬಿಫಾರ್ಮ, ಮಗದೊಬ್ಬರು ಬಿಎಡ್ ವ್ಯಾಸಂಗ ಮಾಡಿದ್ದಾರೆ. ಹತ್ತನೇ ತರಗತಿಯ ಮಂಡಳಿ ಪರೀಕ್ಷೆಯಲ್ಲಿ ಶಾಲೆಯ ವಿದ್ಯಾರ್ಥಿಯೊಬ್ಬ ಮೊದಲಿಗನಾಗಿದ್ದ.

ಇತ್ತೀಚೆಗೆ ಶಾಲೆಗೆ ನೇಮಕಗೊಂಡ ಚರಣ್ ಸಿಂಗ್ ಅಸ್ವಾಲ್, ಇಂಟರ್ ಕಾಲೇಜಿಗೆ ತೆರಳಿದ ಮನ್ಬೀರ್ ಸಿಂಗ್ ರಾವತ್ ಅವರ ಬದಲಿಗೆ ಗಣಿತ ಮತ್ತು ವಿಜ್ಞಾನ

ಹೇಳಿಕೊಡುತ್ತಿದ್ದಾರೆ. ಈ ಹೊಸ ಶಿಕ್ಷಕನ ಮಾತಿನಲ್ಲಿ ಶಾಲೆಯ ಬಗೆಗಿರುವ ಸದ್ಭಾವನೆ ಹೀಗೆ ವ್ಯಕ್ತವಾಗಿದೆ: "ನಾನು ಇಲ್ಲಿಗೆ ಇತ್ತೀಚೆಗೆ ಬಂದಿದ್ದೇನೆ; ಇದೊಂದು ಅತ್ಯುತ್ತಮ ಶಾಲೆ ಎನ್ನುವುದರಲ್ಲಿ ಯಾವುದೇ ಸಂಶಯ ಇಲ್ಲ. ಇಲ್ಲಿ ಪಾಠ ಮಾಡಲು ನಾನು ಚೆನ್ನಾಗಿ ಸಿದ್ಧವಾಗಬೇಕಾಗುತ್ತದೆ."

---

## ಜಡತ್ವದಿಂದ ಕ್ರಿಯಾಶೀಲತೆಯ ಕಡೆಗೆ

**ಯಮುನಪ್ಪ, ಸೋಮಶೇಖರ್, ಶಾಖಾಂಬರಿ**
**ಮರಿಯಪ್ಪ, ಗೀತಾ, ಯಲ್ಲಗಿರಿಯಪ್ಪ**
ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಮಾರನಾಳ್
ಸುರಪುರ ಬ್ಲಾಕ್, ಯಾದಗಿರಿ ಜಿಲ್ಲೆ, ಕರ್ನಾಟಕ

---

ಶಾಲೆಗಳ ಸಾಧನೆಯ ಮೌಲ್ಯಮಾಪನಕ್ಕೆ ಭದ್ರವೂ ನಿಖರವೂ ಆದ ಚೌಕಟ್ಟುಗಳು ಸಾಕಷ್ಟು ಇರಬಹುದು. ಆದರೆ, ಪ್ರತಿ ಶಾಲೆಯೂ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದ್ದು, ಅದು ಆ ಶಾಲೆಯ ಗುಣಮಟ್ಟ ಏನು ಎಂಬುದರ ಸುಳಿವನ್ನು ನಮ್ಮ ಒಳನೋಟಕ್ಕೆ ಬಿಟ್ಟುಕೊಡುತ್ತದೆ. ನಾವು ಶಾಲೆ ಹಾಗೂ ಶಿಕ್ಷಕರ ಕುರಿತಾಗಿ ನಡೆಸಿದ ಅಧ್ಯಯನದಲ್ಲಿ ಕಠಿಣವಾದ ಮಾನದಂಡಗಳನ್ನು ಬಳಸಿ ಕಂಡುಕೊಂಡ ವಿಷಯಗಳು ನಿಜವೇ ಟೊಳ್ಳೇ ಎಂಬುದನ್ನು ಒರೆಹಚ್ಚುವುದರಲ್ಲಿ ಈ ಅಂತರ್‌ದೃಷ್ಟಿ ಮಹತ್ವದ ಪಾತ್ರ ವಹಿಸುತ್ತದೆ. ಗ್ರಾಮೀಣ ಪ್ರದೇಶದ ಸರ್ಕಾರಿ ಶಾಲೆಗಳ ನಿರ್ದಿಷ್ಟ ಸಾಮಾಜಿಕ ಪರಿಸ್ಥಿತಿ ಹಾಗೂ ಅವು ಸವಾಲುಗಳ ಸನ್ನಿವೇಶದಲ್ಲಂತೂ ಈ ವಿಚಾರ ಇನ್ನಷ್ಟು ಸಹಾಯಕವಾಗುತ್ತದೆ. ಈ ರೀತಿಯ ಅಂತರ್ದೃಷ್ಟಿಯ ಸಮರ್ಥನೆಗಳಿಗೆ ಉಪಪತ್ಯಗಳಿವೆ. ಉದಾಹರಣೆಗೆ, ಮಾರನಾಳ್ 'ಜಿಎಚ್‌ಪಿಎಸ್'ನಲ್ಲಿ ಶಿಕ್ಷಕರು ಬೆಳಗ್ಗೆ ಪ್ರಾರ್ಥನೆಗೆ ಮೊದಲು ಚರ್ಚೆಯಲ್ಲಿ ತೊಡಗಿದಂತೆ ಶಾಲೆ ಮುಚ್ಚುವ 4.30 ಗಂಟೆ ಸುಮಾರಿಗೆ ಕೂಡ ಸಂವಾದದಲ್ಲಿ ತೊಡಗಿದ್ದಾರೆ. ವಿಜ್ಞಾನದ ಶಿಕ್ಷಕರೂ ಸಮಾಜಶಾಸ್ತ್ರದ ಶಿಕ್ಷಕರೂ ಶಾಲೆಯ ಸಮಯ ಮೀರುತ್ತದೆ ಎನ್ನುವುದು ಗೊತ್ತಿದ್ದರೂ, ತರಗತಿಗಳಲ್ಲಿ ಕಲಿಕಾ ಸಾಧನಗಳನ್ನು ಬಳಸುತ್ತ ಬೋಧನೆಯಲ್ಲಿ ತಲ್ಲೀನರಾಗಿದ್ದಾರೆ. ಶಾಲೆಯ ಹಳೆಯ ವಿದ್ಯಾರ್ಥಿಗಳು ಮುಖ್ಯ ಶಿಕ್ಷಕರ ಅನುಮತಿ ಪಡೆದು, ಸಮುದಾಯದ ಕೆಲವರೊಂದಿಗೆ ಮೈದಾನದಲ್ಲಿ ಕ್ರಿಕೆಟ್ ಆಡುತ್ತಿದ್ದಾರೆ. ಶಾಲಾ ಕೊಠಡಿಯಲ್ಲಿದ್ದ ಮಕ್ಕಳ ಉತ್ಸಾಹ, ಆತ್ಮವಿಶ್ವಾಸ, ಕುತೂಹಲ ಮತ್ತು ತರಗತಿಯಲ್ಲಿ ತೊಡಗಿಸಿಕೊಳ್ಳುವಿಕೆ ಕೂಡ ಗಮನಾರ್ಹವಾಗಿದೆ. ಇದೆಲ್ಲದರ ಮೊತ್ತವು ಆ ಶಾಲೆಯ ಸಂತಸಕರ ವಾತಾವರಣವನ್ನು ಸೂಚಿಸುತ್ತದೆ. ನಾವು ಇದನ್ನು ಇನ್ನಷ್ಟು ಪರಿಶೀಲಿಸಿದರೆ, ಔಪಚಾರಿಕ ಚೌಕಟ್ಟುಗಳ ಮೂಲಕ ಕಾಣಿಸಿಕೊಂಡ ಸಕಾರಾತ್ಮಕ ಗುಣಮಟ್ಟದ ಲಕ್ಷಣಗಳು ಸುಸ್ಥಿರವಾದವುಗಳೇ ಆಗಿವೆ. ಏಕೆಂದರೆ, ಶಾಲೆಯಲ್ಲಿರುವ ಪೋಷಣಾತ್ಮಕ ಪರಿಸರವೂ ಪ್ರೋತ್ಸಾಹಕ ಸನ್ನಿವೇಶಗಳೂ ಇದಕ್ಕೆ ಕಾರಣ.

ಮಾರನಾಳ್ ಎಂಬ ಊರು ಮುಖ್ಯ ರಸ್ತೆಯಿಂದ ನಾಲ್ಕು ಕಿಲೋಮೀಟರ್ ಒಳಗೆ

ಇರುವ ಗ್ರಾಮ. ಜಮೀನಿಗೆ ನೀರಾವರಿ ಸೌಲಭ್ಯ ಇರುವುದರಿಂದ, ಅದು ಆರ್ಥಿಕವಾಗಿ ಭದ್ರವಾಗಿದೆ. ಆದರೆ, ಶೇ.50ರಷ್ಟು ಮಕ್ಕಳು ಮೊದಲನೇ ಪೀಳಿಗೆಯ ಕಲಿಕಾರ್ಥಿಗಳು. ಮಾರನಾಳ್ ಜಿಎಚ್‌ಪಿಎಸ್‌ನಲ್ಲಿ ಒಂದರಿಂದ ಎಂಟನೇ ತರಗತಿವರೆಗೆ ವ್ಯಾಸಂಗ ಮಾಡುತ್ತಿದ್ದ 205 ಮಕ್ಕಳು ಹಾಗೂ ಮುಖ್ಯ ಶಿಕ್ಷಕ ಯಮುನಪ್ಪ ಸೇರಿದಂತೆ ಆರು ಶಿಕ್ಷಕರು ಇದ್ದಾರೆ. ಸುಮಾರು 50 ವರ್ಷದ ಮಧ್ಯಭಾಗದಲ್ಲಿರುವ ಯಮುನಪ್ಪ, 1984ರಲ್ಲಿ ಶಿಕ್ಷಣ ಇಲಾಖೆ ಸೇರಿದವರು. ಮುಖ್ಯ ಶಿಕ್ಷಕರಾಗಿ 23 ವರ್ಷ ಅನುಭವವಿರುವ(1995ರಿಂದ) ಅವರು ಪಕ್ಕದ ನಾರಾಯಣಪುರದಲ್ಲಿ ದೀರ್ಘ ಕಾಲ ಸೇವೆ ಸಲ್ಲಿಸಿದ ಬಳಿಕ 2014ರಲ್ಲಿ ಮಾರನಾಳ್‌ಗೆ ಬಂದರು. ಎಲ್ಲರೂ ಒಂದು ತಂಡವಾಗಿ ಕೆಲಸ ಮಾಡಬೇಕೆಂಬುದನ್ನು ಸಕ್ರಿಯವಾಗಿ ಪ್ರೋತ್ಸಾಹಿಸುವ ಹಾಗೂ ಜೊತೆಗಾರರನ್ನು ಬೆಂಬಲಿಸುವ ಅವರ ಕೆಲಸದ ವೈಖರಿಯನ್ನು ಮಾರನಾಳ್‌ನಲ್ಲಿ ನೋಡಬಹುದು. ಅವರ ಜೊತೆಗಾರರಲ್ಲಿ ಹೆಚ್ಚಿನವರು ಕಿರಿಯ ವಯಸ್ಸಿನವರು; ಯಮುನಪ್ಪನವರ ಜೊತೆ ಕೆಲಸ ಮಾಡುವುದನ್ನು ಅವರೆಲ್ಲ ಇಷ್ಟಪಡುತ್ತಾರೆ.

18 ವರ್ಷ ಸೇವೆ ಸಲ್ಲಿಸಿರುವ ಸಮಾಜ ವಿಜ್ಞಾನದ ಶಿಕ್ಷಕಿ ಶಾಖಾಂಬರಿ, ಈ ತಂಡದಲ್ಲಿಯೇ ಅತಿ ಹೆಚ್ಚು ಅನುಭವಿ. ಇಲ್ಲಿಗೆ ಬರುವ ಮುನ್ನ ಅವರು ಕೆಲಸದ ವಾತಾವರಣದಲ್ಲಿ ಕಿರುಕುಳವನ್ನು ಅನುಭವಿಸಿ ನೊಂದಿದ್ದರು. 2015ರಲ್ಲಿ ಮಾರನಾಳ್‌ಗೆ ಬಂದ ಬಳಿಕ ಇವರು ಮನಶ್ಶಾಂತಿಯನ್ನೂ ವೃತ್ತಿಯಲ್ಲಿ ಸಂತೋಷವನ್ನೂ ಕಂಡುಕೊಂಡಿದ್ದಾರೆ. ಅತ್ಯುತ್ಸಾಹಿ ವಿಜ್ಞಾನ ಶಿಕ್ಷಕ ಸೋಮಶೇಖರ್, 2010ರಿಂದ ಈ ಶಾಲೆಯಲ್ಲಿದ್ದಾರೆ. ಇದು ಅವರ ಮೊದಲ ನೇಮಕ. ಮರಿಯಪ್ಪ ಇತ್ತೀಚೆಗೆ ಅಂದರೆ, 2016ರಲ್ಲಿ ಸೇರಿದವರು. ಗೀತಾ ಹಿಂದಿಯನ್ನು ಕಲಿಸುತ್ತಿದ್ದಾರೆ. ಯಲ್ಲಗಿರಿಯಪ್ಪ ಒಂದರಿಂದ ಮೂರನೇ ತರಗತಿಗೆ ಕಲಿಸುತ್ತಿದ್ದು ನಲಿ–ಕಲಿ ಬೋಧನೆಯಲ್ಲೂ ಪಳಗಿದ್ದಾರೆ.

ಯಮುನಪ್ಪ ಇಡೀ ಶಾಲೆಯ ಬೆನ್ನೆಲುಬು. 2014ರಲ್ಲಿ ಅವರು ಇಲ್ಲಿಗೆ ಬಂದಾಗ, ಸಮುದಾಯದ ಸಹಕಾರವಿರಲಿಲ್ಲ, ಜೊತೆಗೆ ಶಿಕ್ಷಕರುಗಳ ಮಧ್ಯೆ ಅಸಮಾಧಾನಗಳಿದ್ದವು. ಇದೇ ಹೊತ್ತಿನಲ್ಲಿ ಶಾಲೆಯಿಂದ ನಾಲ್ವರು ಶಿಕ್ಷಕರನ್ನು ವರ್ಗಾವಣೆ ಮಾಡಲಾಗಿತ್ತು. ಸಮಾಜಘಾತಕ ಶಕ್ತಿಗಳು ಸಂಜೆ ವೇಳೆ ಯಾವುದೇ ಎಗ್ಗಿಲ್ಲದೆ ಶಾಲೆಯನ್ನು ಮದ್ಯಪಾನ ಗೋಷ್ಠಿಗಳಿಗೆ ಬಳಸಿಕೊಳ್ಳುತ್ತಿದ್ದರು: ಶೌಚಾಲಯಗಳು ಉಪಯೋಗಿಸಬಹುದಾದ ಸ್ಥಿತಿಯಲ್ಲಿ ಇರಲಿಲ್ಲ. ಶಾಲೆಯಲ್ಲಿ ಹಾಜರಿ ಶೇ.30ಕ್ಕಿಂತ ಕಡಿಮೆಯಿತ್ತು. ಅವ್ಯವಸ್ಥೆಯ ಆಗರವಾಗಿರುವ ಶಾಲೆಗಳನ್ನು ಸರಿಪಡಿಸಲು ಮುಂದಾಗುವ ಎಲ್ಲ ಶಿಕ್ಷಕರಂತೆಯೇ ಯಮುನಪ್ಪ ಕೂಡ ಸಮುದಾಯದ ಜೊತೆ ಸಂಬಂಧ ಬೆಳೆಸಿದರು. ಮೂಲಸೌಕರ್ಯ ಗಳನ್ನು ನಿರ್ಮಿಸಿದರು. ಶಾಲೆಯಲ್ಲಿ ಶಿಕ್ಷಕಿಯರೂ ಇದ್ದುದರಿಂದ, ಮೊದಲು ಅವರು ಮಾಡಬೇಕಿದ್ದ ಕೆಲಸ ಸ್ವಚ್ಛ, ಉಪಯೋಗಿಸಲು ತಕ್ಕುದಾದ ಶೌಚಾಲಯದ ನಿರ್ಮಾಣ. ತಕ್ಷಣದ ಅಗತ್ಯಗಳನ್ನು ಪೂರೈಸಿಕೊಳ್ಳಲು ಎಸ್‌ಡಿಎಂಸಿಯ ನೆರವು ಪಡೆದುಕೊಂಡರು. ಬಾಗಿಲುಗಳನ್ನು ದುರಸ್ತಿಗೊಳಿಸಿ ಭದ್ರಪಡಿಸಲಾಯಿತು, ಶಾಲೆಯನ್ನು ನವೀಕರಣ ಮಾಡಿದರು. ಗೋಡೆಗಳಿಗೆ ಹೊಸ ಬಣ್ಣ ಹಚ್ಚಿದರು. ಆಧಾರ್ ಕಾರ್ಡ್ ಬಳಸಿಕೊಂಡು ವಿದ್ಯಾರ್ಥಿಗಳ

ಸುಳ್ಳು ನೋಂದಣಿಗಳನ್ನು ಹಾಜರಿ ಪುಸ್ತಕದಿಂದ ತೆಗೆದುಹಾಕಿದರು.

ಯಮುನಪ್ಪ ಅವರನ್ನು ಶಿಕ್ಷಕರು ಬೆಂಬಲಿಸಿದರು. ಸಮುದಾಯದವರೊಂದಿಗೆ ಮಾತನಾಡಲು ಎಸ್‌ಡಿಎಂಸಿ ಸದಸ್ಯರು ನೆರವಾದರು. ಯಮುನಪ್ಪ ಶಾಲೆಯನ್ನು ನವೀಕರಿಸಿದ ರೀತಿ ಗ್ರಾಮಸ್ಥರ ಹೃದಯವನ್ನು ತಟ್ಟಿತು. ವಿರೋಧ ಸಾಕಷ್ಟು ಕಡಿಮೆಯಾಯಿತು. ಶಾಲೆ ಸುತ್ತ ಗಲಾಟೆ ಇಲ್ಲವೇ ಹೇಸಿಗೆ ಮಾಡಬಾರದೆಂದು ಯಮುನಪ್ಪ ಜನರನ್ನು ಎಚ್ಚರಿಸಿದರು. “ಇದರಿಂದ ನಿಮ್ಮ ಮಕ್ಕಳ ವಿದ್ಯಾಭ್ಯಾಸಕ್ಕೆ ತೊಂದರೆ ಆಗುತ್ತದೆ,” ಎಂದರು. ಶಾಲೆಯೊಂದಿಗೆ ಉತ್ತಮ ಸಂಬಂಧ ಇರಿಸಿಕೊಳ್ಳಬೇಕೆಂದು ಗ್ರಾಮಸ್ಥರನ್ನು ಒಪ್ಪಿಸಿದರು. ಮಕ್ಕಳಿಗೆ ಉತ್ತಮ ಶಿಕ್ಷಣ ನೀಡಬೇಕೆಂಬುದು ತಮ್ಮ ಗುರಿ. ಇದರಿಂದ ಅವರು ಜೀವನದುದ್ದಕ್ಕೂ ಪ್ರಯೋಜನ ಪಡೆಯಲಿದ್ದಾರೆ ಎಂದು ಮನವರಿಕೆ ಮಾಡಿದರು. “ಇದು ಪ್ರಾಯಶಃ ನಮ್ಮ ಪ್ರಯತ್ನಗಳ ಪ್ರಮುಖ ಘಟ್ಟವಾಗಿತ್ತು. ಸಮುದಾಯದೊಂದಿಗೆ ಸಂಬಂಧ ಸ್ಥಾಪಿಸುವುದು ನಮಗೆ ಸಾಧ್ಯವಾಯಿತು. ಸಮುದಾಯ ಎನ್ನುವುದು ವಿಚಿತ್ರ – ಅದು ಉಗ್ರವಾಗಿ ವಿರೋಧಿಸಬಹುದು ಇಲ್ಲವೇ ಸಂಪೂರ್ಣ ಸಹಕಾರ ನೀಡಬಹುದು. ನಮ್ಮ ಕೆಲವು ಕೆಲಸಗಳಿಂದ ಶಾಲೆಯನ್ನು ಕುರಿತಾದ ಜನರ ಅಭಿಪ್ರಾಯ ಸಂಪೂರ್ಣ ಬದಲಾಯಿತು” ಎಂದು ಸಂತೋಷ, ಸಮಾಧಾನಗಳಿಂದ ನಿರಾಳರಾಗಿ ಯಮುನಪ್ಪ ಹೇಳುತ್ತಾರೆ.

ಅಷ್ಟರೊಳಗೆ ವರ್ಗಾವಣೆಯಾದ ಶಿಕ್ಷಕರ ಸ್ಥಾನವನ್ನು ಭರ್ತಿ ಮಾಡಿಸಿಕೊಳ್ಳುವಲ್ಲಿ ಯಮುನಪ್ಪ ಯಶಸ್ವಿಯಾಗಿದ್ದರು. ಅವರ ಅದೃಷ್ಟ ಚೆನ್ನಾಗಿತ್ತು. ಉತ್ಸಾಹಿ, ಆದರ್ಶವಾದಿ ಹಾಗೂ ಚೈತನ್ಯಶಾಲಿ ಯುವ ಶಿಕ್ಷಕರು ಸಿಕ್ಕಿದರು. ಒಟ್ಟಾಗಿ ಉತ್ತಮ ಶಾಲೆಯೊಂದನ್ನು ಸೃಷ್ಟಿಸುವ ಅವಕಾಶ ತಮ್ಮ ಮುಂದೆ ಇದೆ ಎನ್ನುವುದು ಅವರೆಲ್ಲರಿಗೂ ಗೊತ್ತಿತ್ತು. ಇದು ಶಿಕ್ಷಕರಲ್ಲಿ ಉತ್ಸಾಹವನ್ನೂ ಸಕಾರಾತ್ಮಕ ಭಾವನೆಯನ್ನೂ ತುಂಬಿತು. ಬೆಳಗಿನ ಪ್ರಾರ್ಥನೆ ಸಮಯವು ರೋಮಾಂಚಕರವಾದ ಶಾಲಾ ವಾತಾವರಣದ ಆರಂಭಕ್ಕೆ ಪ್ರತಿದಿನವೂ ನಾಂದಿಯಾಗತೊಡಗಿತು. ಶಾಲೆಯ ಪ್ರತಿ ಶಿಕ್ಷಕನೂ ವಿದ್ಯಾರ್ಥಿಗಳೂ ಸಮಯಕ್ಕೆ ಸರಿಯಾಗಿ ಆಗಮಿಸುತ್ತಿದ್ದರು. ಪ್ರಾರ್ಥನೆ ನಿಖರವಾಗಿ 9.30ಕ್ಕೆ ಆರಂಭವಾಗುತ್ತಿತ್ತು. ಮಾರನಾಳ್ ಶಾಲೆಯಲ್ಲಿ ನೀಡುವ ಬಿಸಿಯೂಟ ಅತ್ಯುತ್ತಮ ಗುಣಮಟ್ಟದ್ದು ಎಂದು ಅಕ್ಕಪಕ್ಕದ ಊರುಗಳಲ್ಲೂ ಹೆಸರು ಪಡೆದಿತ್ತು. ಯಮುನಪ್ಪ ಅವರ ಪ್ರಕಾರ, ಅಡುಗೆಯವರು ಹಾಗೂ ಸಹಾಯಕರು ಸ್ವಯಂಸ್ಫೂರ್ತಿಯಿಂದ ಕಾರ್ಯ ನಿರ್ವಹಿಸುತ್ತಿದ್ದರು. ತಮ್ಮ ಕೆಲಸಕ್ಕೆ ಶಿಕ್ಷಕರ ಕೆಲಸದಷ್ಟೇ ಗೌರವವಿದೆ ಎನ್ನುವುದು ಅವರಿಗೆ ಗೊತ್ತಿತ್ತು. ಶಾಲೆಯಲ್ಲಿ ನಾನಾ ಚಟುವಟಿಕೆಗಳನ್ನು ಹಮ್ಮಿಕೊಳ್ಳಲು ವಿದ್ಯಾರ್ಥಿಗಳ ಸಚಿವ ಸಂಪುಟವೊಂದನ್ನು ರಚಿಸಿ, ಜವಾಬ್ದಾರಿ ನೀಡಲಾಗಿತ್ತು. ಜಿಲ್ಲಾ ಮಟ್ಟದ ಸ್ಪರ್ಧೆಗೆ ಆಯ್ಕೆಯಾಗುವ ಗುರಿಯಿಂದ ಖೋಖೋ ಮತ್ತು ಕಬಡ್ಡಿ ತಂಡಗಳನ್ನು ಕಟ್ಟಿದ್ದರು. ಶಾಲೆಯು ತಮ್ಮ ಮಕ್ಕಳನ್ನು ಹೇಗೆ ಪೋಷಿಸಿದೆ ಮತ್ತು ಅವರ ಸಾಮರ್ಥ್ಯವನ್ನು ಎಷ್ಟು ಬೆಳೆಸಿದೆ ಎನ್ನುವುದನ್ನು ನೋಡುವ ಅವಕಾಶವನ್ನು ಫೆಬ್ರವರಿಯಲ್ಲಿ ನಡೆಯುವ ವಾರ್ಷಿಕೋತ್ಸವವು ಗ್ರಾಮಸ್ಥರಿಗೆ ಕಲ್ಪಿಸುತ್ತಿತ್ತು. ವೇದಿಕೆಯ ಮೇಲೆ “ತಮ್ಮ ಮಕ್ಕಳು” ಪ್ರದರ್ಶನ ನೀಡುವುದು ಪೋಷಕರಾದಿಯಾಗಿ ಊರಿನ

ಸಮಸ್ತ ಜನತೆಗೆ ಹೆಮ್ಮೆಯ ವಿಷಯವಾಗಿತ್ತು. ಪ್ರತಿ ಶನಿವಾರ ಶಿಕ್ಷಕರು ತಮ್ಮ ತರಗತಿಗಳಲ್ಲಿನ ಅನುಭವ, ಸಾಧಿಸಿದ ಪ್ರಗತಿ ಮತ್ತು ಎದುರಾದ ಸಮಸ್ಯೆಗಳನ್ನು ಕುರಿತು ಚರ್ಚಿಸುತ್ತಿದ್ದರು. ಈ ಸಭೆಗಳ ವಿವರವನ್ನು ಪುಸ್ತಕವೊಂದರಲ್ಲಿ ವ್ಯವಸ್ಥಿತವಾಗಿ ದಾಖಲಿಸುತ್ತಿದ್ದರು. ಯಮುನಪ್ಪ ತರಗತಿಗಳನ್ನು ಗಮನಿಸುತ್ತಿದ್ದರಲ್ಲದೆ ತಮ್ಮ ಅಭಿಪ್ರಾಯಗಳನ್ನು ದಿನಚರಿಯಲ್ಲಿ ಬರೆದಿಡುತ್ತಿದ್ದರು. ಮಕ್ಕಳ ಪ್ರಗತಿಯನ್ನು ಕುರಿತು ತಿಳಿಸಲು ಶಾಲೆಯಲ್ಲಿ ಪೋಷಕರೊಂದಿಗೆ ನಿಯತಕಾಲಿಕ ಸಭೆಗಳನ್ನು ಸಂಘಟಿಸಿದರು.

ಯಮುನಪ್ಪ ಸುರಪುರದಲ್ಲಿ ಮುಖ್ಯ ಶಿಕ್ಷಕರಾಗಿದ್ದ ಕಾಲದಿಂದಲೂ ಫೌಂಡೇಷನ್ ಹಮ್ಮಿಕೊಳ್ಳುತ್ತಿದ್ದ ನಾನಾ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುತ್ತಿದ್ದರು. 2004ರಲ್ಲಿ ಶಾಲೆಗಳ ನಿರ್ವಹಣೆಗೆ ಸಂಬಂಧಿಸಿದಂತೆ ಮುಖ್ಯ ಶಿಕ್ಷಕರಿಗೆ ಹಮ್ಮಿಕೊಂಡಿದ್ದ ಹತ್ತು ದಿನಗಳ ಕಾರ್ಯಕ್ರಮದಲ್ಲಿ ಹಾಗೂ ಅನಂತರ ಸಿಎಫ್ಎಸ್ಐ ಅಡಿ ನಡೆದ ಶಾಲೆಗಳ ಉತ್ತಮೀಕರಣ ಕುರಿತ ಕಾರ್ಯಾಗಾರಗಳಲ್ಲೂ ಅವರು ಭಾಗವಹಿಸಿದ್ದರು. 2011ರಲ್ಲಿ ಜಿಲ್ಲೆಯಲ್ಲಿ ಎಸ್ಎಲ್ಡಿಪಿ ಮತ್ತಿತರ ಸಾಮರ್ಥ್ಯ ನಿರ್ಮಾಣ ಕೋರ್ಸ್‌ಗಳನ್ನು ಆರಂಭಿಸಿದಾಗ ಅವುಗಳಲ್ಲಿ ಯಮುನಪ್ಪ ಸಕ್ರಿಯವಾಗಿ ಪಾಲ್ಗೊಂಡಿದ್ದರು. ಈ ಕೋರ್ಸ್‌ಗಳಿಂದ ಪ್ರಯೋಜನ ಪಡೆದಿದ್ದ ಯಮುನಪ್ಪ, ತಮ್ಮ ಶಾಲೆಯ ಶಿಕ್ಷಕರು ಇವುಗಳಲ್ಲಿ ಪಾಲುಗೊಳ್ಳುವಂತೆ ಪ್ರೋತ್ಸಾಹಿಸುತ್ತಿದ್ದರು. ಸೋಮಶೇಖರ್, ಶಾಖಾಂಬರಿ ಮತ್ತು ಮರಿಯಪ್ಪ ವಿಟಿಎಫ್‌ನಲ್ಲಿ ಖಾಯಂ ಆಗಿ ಪಾಲ್ಗೊಳ್ಳುತ್ತಿದ್ದರು. ಅವರೆಲ್ಲ ಟಿಎಲ್‌ಸಿಯಲ್ಲಿ ಲಭ್ಯವಿರುವ ಸಂಪನ್ಮೂಲ ಸಾಧನಗಳು ಮತ್ತು ಗ್ರಂಥಾಲಯವನ್ನು ಬಳಸಿಕೊಳ್ಳುತ್ತಿದ್ದರು.

ವೈಯಕ್ತಿಕವಾಗಿ, ಈ ಎಲ್ಲ ಶಿಕ್ಷಕರೂ ತಮ್ಮ ಬೋಧನಾ ವಿಷಯದ ಮೇಲೂ ತರಗತಿಯಲ್ಲಿನ ಬೋಧನೆಯ ಮೇಲೂ ಸಂಪೂರ್ಣ ಹಿಡಿತ ಹೊಂದಿದ್ದಾರೆ. ವಿಜ್ಞಾನ ಶಿಕ್ಷಕ ಸೋಮಶೇಖರ್ ಪಾಠ ಮಾಡುವುದನ್ನು ಕೇಳುವುದೇ ಒಂದು ಸೊಗಸು. ಇವರ ಬೋಧನೆಯನ್ನು ನೋಡಿದವರು "ಇವರು ಜಿಲ್ಲೆಯಲ್ಲೇ ಅತ್ಯುತ್ತಮ ಶಿಕ್ಷಕರಾಗುವುದು ಖಂಡಿತ" ಎಂದು ಯಾವ ಹಿಂಜರಿಕೆಯೂ ಇಲ್ಲದೆ ಭರವಸೆಯಿಂದ ಭವಿಷ್ಯ ನುಡಿಯುತ್ತಾರೆ. ಅವರಿಗೆ ಪಿಯುಸಿಯಲ್ಲಿ ಬಂದಿದ್ದು ಶೇ.42 ಅಂಕ ಮಾತ್ರ ಎಂದು ತಿಳಿದರೆ ಯಾರಿಗಾದರೂ ಅಚ್ಚರಿಯಾಗುವುದೂ ಅಷ್ಟೇ ನಿಜ. ಬಿಎಸ್‌ಸಿ ಪದವಿ ಮಾಡುತ್ತಿದ್ದಾಗ ವಿಜ್ಞಾನದಲ್ಲಿ ಆಸಕ್ತಿ ಬೆಳೆದು, ವಿಜ್ಞಾನ ಶಿಕ್ಷಕನಾಗಬೇಕು ಎಂದು ನಿರ್ಧರಿಸಿದೆ ಎನ್ನುತ್ತಾರೆ ಅವರು. ಎಂಎಸ್‌ಸಿ ಹಾಗೂ ಬಿಎಡ್ ಮಾಡಿರುವುದರಿಂದ, ಉನ್ನತ ತರಗತಿಗಳಿಗೆ ಪಾಠ ಮಾಡುವ ಅರ್ಹತೆ ಇದ್ದರೂ, ಇವರಂಥ ಅನೇಕ ಶಿಕ್ಷಕರಿಗೆ ಇದು ಹೆಚ್ಚು ಮಹತ್ವಾಕಾಂಕ್ಷೆಯ ಸ್ಥಾನ. ಆದರೆ, ಫೌಂಡೇಷನ್‌ನ ಸದಸ್ಯರ ಜತೆಗಿನ ಸಂಪರ್ಕದ ಪರಿಣಾಮ, "ಬೋಧನೆ ಕುರಿತ ನನ್ನ ಮನೋಭಾವ ಮತ್ತು ರೀತಿ ಬದಲಾಗಿದ್ದು, ನಾನು ಕಿರಿಯ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಪಾಠ ಮಾಡುವುದನ್ನು ಇಷ್ಟಪಡುತ್ತೇನೆ. ಅವರು ನನ್ನನ್ನು ಬೆಂಗಳೂರಿನ ಸೆಂಟರ್ ಫಾರ್ ಲರ್ನಿಂಗ್‌ಗೆ 5 ದಿನಗಳ ಮಟ್ಟಿಗೆ ಕಳಿಸಿದಾಗ, ಪಿಎಚ್‌ಡಿ ಮಾಡಿದವರು ನಾಲ್ಕು ಮತ್ತು ಐದನೇ ತರಗತಿಗೆ ಅತ್ಯಂತ ಉತ್ಸಾಹದಿಂದ ಪಾಠ ಮಾಡುತ್ತಿದ್ದುದನ್ನು ನೋಡಿದೆ. ಅದು

ನನ್ನನ್ನು ಸಂಪೂರ್ಣವಾಗಿ ಬದಲಿಸಿತು, ಪ್ರತಿ ತರಗತಿಯಲ್ಲೂ ಇದೇ ಉತ್ಸಾಹದಿಂದ ನಾನು ಬೋಧಿಸುವೆನೆಂದು ಅಂದೇ ಪ್ರತಿಜ್ಞೆ ಮಾಡಿದೆ" ಅನ್ನುತ್ತಾರೆ ಸೋಮಶೇಖರ್. ಅವರು ವಿಜ್ಞಾನ ಕಲಿಕೆಯಲ್ಲಿ ಆಸಕ್ತಿ ಹುಟ್ಟಿಸಲು ಚಟುವಟಿಕೆಗಳನ್ನು ಹಮ್ಮಿಕೊಳ್ಳುತ್ತಾರೆ; ವೈಜ್ಞಾನಿಕ ಪ್ರಕ್ರಿಯೆಗಳ ಬಗ್ಗೆ ಅರಿವು ಮೂಡಿಸಲು ಪ್ರಯೋಗಗಳನ್ನೂ ಯೋಜನೆಗಳನ್ನೂ ರೂಪಿಸುತ್ತಾರೆ. ಸಣ್ಣ ಕಲಿಕಾ ಘಟಕಗಳನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಕಾರ್ಯ ನಿರ್ವಹಣಾ ಗುಂಪುಗಳನ್ನು ಸೃಷ್ಟಿಸುತ್ತಾರೆ. ಟಿಎಲ್‌ಸಿ ಮತ್ತು ವಿಟಿಎಫ್‌ಗಳಲ್ಲಿ ನಿಯಮಿತವಾಗಿ ಪಾಲ್ಗೊಳ್ಳುವುದರಿಂದ, ಅಲ್ಲಿರುವ ಕಲಿಕಾ ಸಾಧನಗಳ ಬಳಕೆ ಹಾಗೂ ಅನುಭವಿ ಶಿಕ್ಷಕರ ಮುಖಾಮುಖಿಯಿಂದ ತಮಗೆ ಪ್ರಯೋಜನವಾಗಿದೆ; ಇದನ್ನು ತರಗತಿಗಳಲ್ಲಿ ಅನುಷ್ಠಾನಗೊಳಿಸುತ್ತಿದ್ದೇನೆ ಎಂದು ಹೇಳುತ್ತಾರೆ. ಅವರ ತರಗತಿಯನ್ನು ಗಮನಿಸಿದಾಗ ಎರಡು ವಿಷಯ ಗೊತ್ತಾಗುತ್ತದೆ – ಮೊದಲನೆಯದು – ಮಕ್ಕಳು ನಾನಾ ಸಾಧನಗಳನ್ನು ಯಾವುದೇ ಭಯವಿಲ್ಲದೆ ಬಳಸುತ್ತಾರೆ, ಜೊತೆಗೆ ಅವರು ಯಾವ ಅಳುಕೂ ಇಲ್ಲದೆ ಪರಸ್ಪರ ವಿಚಾರ ವಿನಿಮಯ ಮಾಡುತ್ತ, ಪರಸ್ಪರ ಸಹಕಾರದಿಂದ ಕೆಲಸ ಮಾಡುತ್ತಾರೆ. ಎರಡನೆಯದು – ಮಕ್ಕಳಲ್ಲಿ ಯೋಚನಾಶಕ್ತಿಯನ್ನು ಪ್ರಚೋದಿಸುವಂತಹ ಪ್ರಶ್ನೆಗಳನ್ನು ಸೋಮಶೇಖರ್ ಕೇಳುತ್ತಾರೆ. ಮಕ್ಕಳು ತಮ್ಮ ಕಲಿಕೆಯ ಸಾರಾಂಶವನ್ನು ಸಿದ್ಧಪಡಿಸುವುದಕ್ಕೆ ಮುನ್ನ ತಮ್ಮದೇ ವಾದಸರಣಿಯನ್ನೂ ವಿಚಾರಧಾರೆಯನ್ನೂ ಸಿದ್ಧಪಡಿಸುತ್ತಾರೆ. "ಉನ್ನತ ದರ್ಜೆಯ ಚಿಂತನೆಯನ್ನು ಉತ್ತೇಜಿಸುವುದು ಇದರ ಉದ್ದೇಶ" ಎನ್ನುತ್ತಾರೆ ಸೋಮಶೇಖರ್.

ನಾವು ಶಾಖಾಂಬರಿ ಅವರ ತರಗತಿಯಲ್ಲಿ ಕಾಲಿಟ್ಟಾಗ, ಶಿಕ್ಷಕಿ ಶೈಕ್ಷಣಿಕ ಸಾಧನಗಳ ಪರಿಣಾಮಕಾರಿ ಬಳಕೆಯಲ್ಲಿ ಬಹಳಷ್ಟು ಪಳಗಿರುವುದನ್ನು ಖುದ್ದಾಗಿ ಕಂಡೆವು. ಅವರು ಭೂಗೋಳ ಮತ್ತು ಭೂಪಟಗಳನ್ನು ಬಳಸಿಕೊಂಡು ಮಕ್ಕಳು ಕ್ಷಣಮಾತ್ರದಲ್ಲೇ ವಿಷಯದೊಡನೆ ಸಂಬಂಧವನ್ನು ಬೆಳೆಸುವಂತೆ ಮಾಡುತ್ತಿದ್ದರು. ಮಕ್ಕಳು ವಿಷಯದಲ್ಲಿ ಆಸಕ್ತಿ ಉಳಿಸಿಕೊಳ್ಳಬೇಕೆಂದರೆ, ಪ್ರಸ್ತುತ ಜ್ಞಾನದ ಮೂಲಕ ಹೊಸ ಕಲಿಕೆಯನ್ನು ಸಾಧ್ಯವಾಗಿಸಬೇಕು ಮಾರನಾಳ್ ಶಾಲೆಯ ಮುಖ್ಯ ಶಿಕ್ಷಕರನ್ನು ಹೊರತುಪಡಿಸಿದರೆ ಉಳಿದ ಎಲ್ಲ ಶಿಕ್ಷಕರೂ ಕಂಪ್ಯೂಟರ್ ಮತ್ತು ಅಂತರ್ಜಾಲ ಬಳಕೆಯಲ್ಲಿ ಪರಿಣತರಿದ್ದಾರೆ, ಇದು ಈ ಶಾಲೆಯ ಮಕ್ಕಳಿಗೆ ಇರುವ ಒಂದು ದೊಡ್ಡ ಅನುಕೂಲ. ಯಮುನಪ್ಪ ಅವರು ನಿರ್ಮಿಸಿದ ಹೆಚ್ಚುವರಿ ಕೊಠಡಿಗಳಲ್ಲಿ ಒಂದನ್ನು ಕಂಪ್ಯೂಟರ್ ಕೋಣೆಯಾಗಿ ಮಾಡಿಕೊಂಡು ಐದರಿಂದ ಆರು ಕಂಪ್ಯೂಟರ್ ಇರಿಸಿ, ಹಿರಿಯ ಪ್ರಾಥಮಿಕ ಶಾಲೆಯ ಮಕ್ಕಳಿಗೆ ಕಲಿಕೆ ಮತ್ತು ಬಳಕೆಗೆ ಅವಕಾಶ ಕಲ್ಪಿಸಲಾಗಿದೆ. ಅನೇಕ ಶಾಲೆಗಳಲ್ಲಿ ಇಂಥ ಸೌಲಭ್ಯವನ್ನು ಸಮರ್ಪಕವಾಗಿ ಬಳಸಿಕೊಳ್ಳುವುದಿಲ್ಲ. ಆದರೆ, ಮಾರನಾಳ್ ಶಾಲೆಯ ಮಕ್ಕಳು, ಶಿಕ್ಷಕರಿಂದ ಕಂಪ್ಯೂಟರ್ ಬಳಸುವುದನ್ನು ಕಲಿತಿದ್ದಾರೆ. ಶಿಕ್ಷಕರೂ ಮಕ್ಕಳೂ ಸೇರಿ ತಮ್ಮ ಪ್ರಾಜೆಕ್ಟ್‌ಗಳ ಪವರ್ ಪಾಯಿಂಟ್ ಪ್ರಾತ್ಯಕ್ಷಿಕೆಗಳನ್ನು ಸೃಷ್ಟಿಸಿದ್ದಾರೆ. ಜಡವಾಗಿದ್ದ ಶಾಲೆ ಕೇವಲ ಮೂರು ವರ್ಷಗಳಲ್ಲಿ ಜೀವಂತಿಕೆಯಿಂದ ನಳನಳಿಸತೊಡಗಿದೆ. ಅಲ್ಲಿ ಉತ್ಸಾಹವೂ ಸಂತಸವೂ ತುಂಬಿದ ಎಳೆಯ ಜೀವಗಳ

ಕಲಕಲ ನಿನಾದ ಹಬ್ಬಿದೆ. ಆ ಸಂಸ್ಥೆ ಮತ್ತೆ ಶ್ರೇಷ್ಠತೆಯನ್ನು ಸಾಧಿಸುವಂತೆ ಅಲ್ಲಿನ ಶಿಕ್ಷಕರು ನೋಡಿಕೊಳ್ಳುತ್ತಿದ್ದಾರೆ. ಮುಂದಿನ ಕೆಎಸ್‌ಕ್ಯುಎಎಸಿ ಮೌಲ್ಯಮಾಪನವು ತಮ್ಮ ಸಹೋದ್ಯೋಗಿಗಳ ಕಠಿಣ ಶ್ರಮವನ್ನು ಪ್ರತಿಫಲಿಸುತ್ತದೆ ಎನ್ನುವ ವಿಶ್ವಾಸವನ್ನು ಯಮುನಪ್ಪ ಹೊಂದಿದ್ದಾರೆ. ಅವರು ಸಮಚಿತ್ತದಿಂದ, ಆದರೆ ದೃಢವಾಗಿ ಹೇಳಿದ ಮಾತು: "ನಾವು ಉತ್ತಮ ಸಾಧನೆ ಮಾಡುತ್ತೇವೆ."

---

## "ಈ ಶಾಲೆಯಲ್ಲಿ ಓದಿದವರು ಎಂಜಿನಿಯರ್, ವೈದ್ಯರು, ಪೊಲೀಸ್ ಅಧಿಕಾರಿಗಳು ಹಾಗೂ ಲೆಕ್ಕಿಗರಾಗಿದ್ದಾರೆ"

**ಶಿವಪ್ಪ ಸಜ್ಜನ್, ಶಂಕರಗೌಡ ಪಾಟೀಲ್, ರಾಜೇಶ್ ಮುಜವರ್**
**ಶಿವಕುಮಾರ್, ಕಾಂತೇಶ್, ಶ್ರೀಧರ್ ಮಲ್ಜಿ, ಅಣ್ಣಪ್ಪ ಗೌಡರ್ ಪಾಟೀಲ್**

ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಮರಲಭಾವಿ
ಸುರಪುರ ಬ್ಲಾಕ್, ಯಾದಗಿರಿ ಜಿಲ್ಲೆ, ಕರ್ನಾಟಕ

---

ಮರಲಭಾವಿ 1,800 ಜನಸಂಖ್ಯೆ ಇರುವ ಗ್ರಾಮ. ಇದರಲ್ಲಿ ಶೇ. 80ಕ್ಕೂ ಅಧಿಕ ಕುರುಬ ಸಮುದಾಯದವರು, ಉಳಿದವರು ಪರಿಶಿಷ್ಟ ಜಾತಿಯವರು ಮತ್ತು ಬೆರಳೆಣಿಕೆಯ ಮರಾಠ ಕುಟುಂಬಗಳಿವೆ. ಸುರಪುರ ತಾಲೂಕಿನ ಹುಣಸಗಿ ಕ್ಷೇತ್ರದಲ್ಲಿರುವ ಈ ಗ್ರಾಮ, ಪಕ್ಕದ ವಿಜಯಪುರ ಜಿಲ್ಲೆಯಿಂದ ಹೆಚ್ಚೇನೂ ದೂರವಿಲ್ಲ. ಸ್ವಂತ ಭೂಮಿ ಹೊಂದಿರುವವರು ಕೃಷಿಯಲ್ಲಿ ತೊಡಗಿಸಿಕೊಂಡಿದ್ದು, ಉಳಿದವರು ಕೂಲಿ ಕಾರ್ಮಿಕರಾಗಿ ಜೀವನ ಸಾಗಿಸುತ್ತಾರೆ; ಇನ್ನು ಕೆಲವರು ಕೆಲಸ ಹುಡುಕಿಕೊಂಡು ವಲಸೆ ಹೋಗುತ್ತಾರೆ. 35 ವರ್ಷ ದಾಟಿದವರಲ್ಲಿ ಶೇ.60ರಷ್ಟು ಮಂದಿ ಅನಕ್ಷರಸ್ಥರಿದ್ದಾರೆ. ಶೇ.70ರಷ್ಟು ಮಂದಿ ಮನೆಯಲ್ಲೇ ಶೌಚಾಲಯ ನಿರ್ಮಿಸಿಕೊಂಡಿದ್ದರೂ ಬಯಲು ಶೌಚ ಮುಂದುವರಿದಿದೆ. ಈ ಗ್ರಾಮದ ಕಳಂಕವಾಗಿದ್ದ ಬಾಲ್ಯ ವಿವಾಹ ಈಗ ಬಹುತೇಕ ಕಣ್ಮರೆಯಾಗಿದೆ ಎಂಬುದು ಸಮಾಧಾನದ ಸಂಗತಿ.

ಇಂಥ ಸನ್ನಿವೇಶದಲ್ಲಿ ಮರಳಭಾವಿಯ ಜಿಪಿಎಚ್‌ಎಸ್ ಈ ಪ್ರದೇಶದ ಶ್ರೇಯಸ್ಕರವಾದ ತಾಣವಾಗಿದೆ. ಭೌತಿಕವಾಗಿ ಆಕರ್ಷಕವಾಗಿರುವ, ಸುವ್ಯವಸ್ಥಿತ ಮತ್ತು ಸ್ವಚ್ಛವಾದ ಶಾಲೆಯು ಪ್ರತಿಯೊಬ್ಬ ನೋಡುಗನನ್ನೂ ಕೈಬೀಸಿ ಕರೆಯುತ್ತದೆ. ಪರಸ್ಪರ ಹೊಂದಿಕೊಂಡು ಕೆಲಸ ಮಾಡುವ ಶಿಕ್ಷಕರ ತಂಡ ಇಲ್ಲಿದೆ. ಉತ್ತಮ ಕಲಿಕೆಯ ದಾಖಲೆಯಿದ್ದು, ತೇರ್ಗಡೆಯಾದ ಮಕ್ಕಳು ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಶಿಕ್ಷಣ ಪಡೆದು, ಜೀವನದಲ್ಲಿ ಉತ್ತಮ ಸಾಧನೆ ಮಾಡಿದ್ದಾರೆ. ಏಳು ಶಿಕ್ಷಕರ ನಿರಂತರ ಪ್ರಯತ್ನದಿಂದ ಇಂಥ ಶಾಲೆ ಸೃಷ್ಟಿಯಾಗಿದ್ದು, ಅದರ ಅಧ್ಯಯನ ಒಂದು ಆಸಕ್ತಿದಾಯಕ ವಿಷಯವೇ ಸರಿ.

1990ರಲ್ಲಿ ಶಿಕ್ಷಣ ಇಲಾಖೆಯನ್ನು ಸೇರಿದ ಶಿವಪ್ಪ ಸಜ್ಜನ್ 2007ರಿಂದ ಇಲ್ಲಿ ಮುಖ್ಯ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅವರಿಗಿಂತ ಆರು ವರ್ಷ ಕಿರಿಯರಾದ ಶಂಕರಗೌಡ ಪಾಟೀಲ್ ಸುಮಾರು ಅದೇ ಸಮಯದಲ್ಲಿ ಶಾಲೆಗೆ ಸೇರಿದರು. 20 ವರ್ಷ

ಬೋಧನೆ ಅನುಭವ ಇರುವ ರಾಜೇಶ್ ಮುಜವರ್ 2012ರಲ್ಲಿ ಬಂದರು. ಕಿರಿಯ ಶಿಕ್ಷಕಕರಲ್ಲಿ ಒಬ್ಬರಾದ ಶಿವಕುಮಾರ್ 2010ರಿಂದ ಇಲ್ಲಿದ್ದಾರೆ: ಸಮಾಜ ವಿಜ್ಞಾನ ಶಿಕ್ಷಕ ಕಾಂತೇಶ್ 2007ರಲ್ಲಿ ಈ ಶಾಲೆಯಲ್ಲಿ ತಮ್ಮ ಶೈಕ್ಷಣಿಕ ಜೀವನ ಆರಂಭಿಸಿದರು; ಇಂಗ್ಲಿಷ್ ಶಿಕ್ಷಕ ಶ್ರೀಧರ್ ಮಲ್ಜಿ ಅವರನ್ನು ಇತ್ತೀಚೆಗೆ ಮರಲಭಾವಿಗೆ ನೇಮಿಸಲಾಗಿದೆ. ಆಶ್ಚರ್ಯಕರ ಸಂಗತಿಯೆಂದರೆ, ಅಣ್ಣಪ್ಪಗೌಡ ಪಾಟೀಲ್ ನಲಿ-ಕಲಿ ಬೋಧನೆ ಕಲೆಯಲ್ಲಿ ತರಬೇತಿ ಪಡೆದವರು. 2003ರವರೆಗೆ ನಾಲ್ಕು ವರ್ಷ ಇಲ್ಲಿ ಕಾರ್ಯನಿರ್ವಹಿಸಿ, ಅನಂತರ ಸುರಪುರದ ಇನ್ನೊಂದು ಶಾಲೆಯಲ್ಲಿ 13 ವರ್ಷ ಕಲಿಸಿ, ಹಿಂದಿನ ವರ್ಷವಷ್ಟೇ ಮರಲಭಾವಿಗೆ ಮರಳಿದ್ದಾರೆ. ಈ ಎಲ್ಲ ಶಿಕ್ಷಕರು ಪಕ್ಕದ ಪಟ್ಟಣಗಳಾದ ಹುಣಸಗಿ ಇಲ್ಲವೇ ತಾಳಿಕೋಟೆಯಲ್ಲಿ ವಾಸ ಮಾಡುತ್ತಿದ್ದು, ಮೋಟಾರ್ ಬೈಕ್‌ನಲ್ಲಿ ಶಾಲೆಗೆ ಬರುತ್ತಾರೆ.

ಮುಖ್ಯ ಶಿಕ್ಷಕ ಶಿವಪ್ಪ ಸಜ್ಜನ್ ಮತ್ತು ಶಿಕ್ಷಕರಾದ ಕಾಂತೇಶ್ ಹಾಗೂ ಅಣ್ಣಪ್ಪ ಗೌಡರ್ ದೀರ್ಘ ಕಾಲದಿಂದ 'ಸಿಎಫ್‌ಎಸ್‌ಐ' ಜತೆಗೆ ಸಂಬಂಧ ಹೊಂದಿದ್ದು, ಕಾರ್ಯಕ್ರಮದ ಅಂಗವಾಗಿ ಹಲವು ಸಾಮರ್ಥ್ಯ ನಿರ್ಮಾಣ ಕೋರ್ಸ್‌ಗಳಲ್ಲಿ ಪಾಲ್ಗೊಂಡಿದ್ದಾರೆ. ಇನ್ನಿತರರು ಮರಲಭಾವಿಯ ಜೆಪಿಎಚ್‌ಎಸ್‌ಗೆ ಸೇರಿದ ಬಳಿಕ, ಇತ್ತೀಚೆಗೆ ಸಿಎಫ್‌ಎಸ್‌ಐನ ಸಂಪರ್ಕ ಬೆಳೆಸಿಕೊಂಡಿದ್ದಾರೆ. ಸಜ್ಜನ್ ನಲಿ-ಕಲಿಯಲ್ಲಿ ಬೋಧನೆ ಕಲೆಯಲ್ಲೂ ತರಬೇತಿ ಪಡೆದಿದ್ದು, ಉಳಿದವರು ವಿಷಯಕ್ಕೆ ಸಂಬಂಧಿಸಿದ ಕಾರ್ಯಗಾರಗಳು ಹಾಗೂ ಕೋರ್ಸ್‌ಗಳಲ್ಲಿ ಪಾಲ್ಗೊಂಡಿದ್ದಾರೆ. ಕೆಲವು ವರ್ಷಗಳ ಹಿಂದೆ ಈ ಶಾಲೆಯಲ್ಲಿ ಮಕ್ಕಳ ಪ್ರತಿಭೆಯನ್ನು ಸಮುದಾಯದ ಸದಸ್ಯರು ಹಾಗೂ ಪೋಷಕರಿಗೆ ಪ್ರದರ್ಶಿಸಲು, ಸಮಾಜಶಾಸ್ತ್ರಕ್ಕೆ ಸಂಬಂಧಿಸಿದ ಮೇಳವನ್ನು ಕೂಡಾ ಆಯೋಜಿಸಲಾಗಿತ್ತು. ಮಕ್ಕಳು ತಮ್ಮ ಗ್ರಾಮ-ಪ್ರಾಂತ್ಯದ ಚರಿತ್ರೆ ಕುರಿತು ಪ್ರಾಜೆಕ್ಟ್‌ಗಳನ್ನು ಪ್ರದರ್ಶಿಸಿದ್ದರು. ಗ್ರಾಮದ ಹಿರಿಯರ ಜೊತೆ ಮಾತನಾಡಿ, ಸ್ಥಳೀಯ ಸಂಶೋಧನೆಯಿಂದ ಸಾಕ್ಷ್ಯವನ್ನು ಸಂಗ್ರಹಿಸಿ ದಾಖಲಿಸಿದ್ದರು.

ಶಾಲೆಯಲ್ಲಿ 193 ಮಕ್ಕಳಿದ್ದು, ಹಾಜರಿ ಯಾವಾಗಲೂ ಶೇ.80-85ಕ್ಕಿಂತ ಹೆಚ್ಚು ಇರುತ್ತದೆ. ಕೆಲ ವರ್ಷಗಳ ಹಿಂದೆ ಹಾಜರಿ ತೀರ ಕಡಿಮೆ ಇತ್ತು. ಶಿಕ್ಷಕರು ಪೋಷಕರೊಂದಿಗೆ ನಡೆಸಿದ ನಿರಂತರ ಸಂಪರ್ಕ ಪರಿಣಾಮ ಬೀರಿದೆ. ಕಾಲಕ್ರಮೇಣ ಪೋಷಕರು ಶಾಲೆ ಮೇಲೆ ನಂಬಿಕೆಯನ್ನೂ ಮಕ್ಕಳಿಗೆ ಶಾಲೆಯಲ್ಲಿ ಉತ್ತಮ ವಿದ್ಯಾಭ್ಯಾಸ ದೊರೆಯುತ್ತದೆ ಎನ್ನುವ ವಿಶ್ವಾಸವನ್ನೂ ಬೆಳೆಸಿಕೊಂಡರು. ಈಗ ಪೋಷಕರು ವಲಸೆ ಹೋಗುವಾಗ ಮಕ್ಕಳಿಗೆ ಶಾಲೆ ತಪ್ಪಿಹೋಗದಂತೆ ನೋಡಿಕೊಳ್ಳಲು, ತಮ್ಮ ತಂದೆ-ತಾಯಿ ಬಳಿ ಬಿಟ್ಟುಹೋಗುತ್ತಾರೆ. ಊರಿನ ಯಾವುದೇ ಮಗು ಖಾಸಗಿ ಶಾಲೆಗೆ ಹೋಗುವುದಿಲ್ಲ, ಎಲ್ಲರೂ ಮರಳಭಾವಿಯ ಜಿಎಚ್‌ಪಿಎಸ್‌ಗೆ ದಾಖಲಾಗಿದ್ದಾರೆ.

ಈ ಶಾಲೆಯನ್ನು ಅದರ ಗುಣವಿಶೇಷಗಳ ಆಧಾರದಲ್ಲಿ ಮೌಲ್ಯಮಾಪನ ಮಾಡಬೇಕು ಎಂದಾದರೆ ಪಟ್ಟಿಯಲ್ಲಿನ ಅನೇಕ ಅಂಶಗಳಿಗೆ ಸರಿಯುತ್ತರವನ್ನು ಗುರುತು ಮಾಡಬಹುದು. ಮನಸೆಳೆಯುವ ಪರಿಸರ, ಶುಚಿಯಾದ ಮತ್ತು ಸುಸ್ಥಿತಿಯಲ್ಲಿರುವ ಶೌಚಾಲಯಗಳು, ಕುಡಿಯಲು ಮತ್ತು ಸ್ವಚ್ಛಗೊಳಿಸಲು, ಗಿಡಗಳಿಗೆ

ನೀರುಣಿಸಲು ಪ್ರತ್ಯೇಕ ವ್ಯವಸ್ಥೆ, ಸುಂದರವಾದ ಕೈತೋಟ, ಪ್ರಾರ್ಥನೆ ಹಾಗೂ ಇನ್ನಿತರ ಚಟುವಟಿಕೆಗಳಿಗೆ ಸಾಕಷ್ಟು ಸ್ಥಳಾವಕಾಶ ಇವೆಲ್ಲವೂ ಇದೆ. ಎಲ್ಲ ಶಿಕ್ಷಕರೂ ಶಾಲೆ ಆರಂಭಕ್ಕೆ ಒಂದು ಗಂಟೆ ಮುನ್ನ, ಬೆಳಗ್ಗೆ 8.30ಕ್ಕೆ ಬರುತ್ತಾರೆ. ಆಗ ಅವರು, ಹೆಚ್ಚು ನೆರವು ಅಗತ್ಯವಿರುವ ಮಕ್ಕಳಿಗೆ ವಿಶೇಷ ತರಗತಿಗಳನ್ನು ತೆಗೆದುಕೊಳ್ಳುತ್ತಾರೆ. ಆರ್‌ಟಿಇ (2009ರಿಂದ) ಪ್ರಕಾರ, ಮಕ್ಕಳನ್ನು ದಂಡಿಸುವುದು ಶಿಕ್ಷಾರ್ಹ ಅಪರಾಧ. ಆದರೆ, ಮರಲಭಾವಿ ಶಾಲೆಯಲ್ಲಿ ಯಾವತ್ತೂ ದಂಡನೆ ಪದ್ಧತಿಯೇ ಇರಲಿಲ್ಲ. ಇಲ್ಲಿನ ಶಿಕ್ಷಕರು ಮಕ್ಕಳಲ್ಲಿ ಸ್ವಾತಂತ್ರ್ಯ, ಜವಾಬ್ದಾರಿ ಹಾಗೂ ಸ್ವಾವಲಂಬನೆಯ ಸಂಸ್ಕೃತಿಯೊಂದನ್ನು ಭದ್ರವಾಗಿ ಸ್ಥಾಪನೆಗೊಂಡಿರುವ ಪದ್ಧತಿ ಹಾಗೂ ಪ್ರಕ್ರಿಯೆಗಳ ಮೂಲಕ ಸೃಷ್ಟಿಸಿದ್ದಾರೆ. ಮೂರು ಮತ್ತು ನಂತರದ ತರಗತಿಗಳ ವಿದ್ಯಾರ್ಥಿಗಳು ಆಯ್ಕೆ ಮಾಡಿದ ಮಕ್ಕಳ ಸಚಿವ ಸಂಪುಟವಿದೆ. ಬಲು ವ್ಯವಸ್ಥಿತವಾಗಿ ಆಯೋಜಿಸಿದ ಬೆಳಗಿನ ಪ್ರಾರ್ಥನೆ ವೇಳೆ ವಿದ್ಯಾರ್ಥಿಗಳು ಸುದ್ದಿ ವಾಚನ, ಪ್ರಶ್ನಾವಳಿ(ಕ್ವಿಜ್) ಮತ್ತು ವಚನ ಗಾಯನ ನಡೆಸಿ ಕೊಡುತ್ತಾರೆ. ಮಕ್ಕಳ ಬ್ಯಾಂಕ್ ಸ್ಥಾಪಿಸಿ ಪಾಸ್‌ಬುಕ್ ವಿತರಿಸುವ ಮೂಲಕ ಸ್ವಂತ ನಿರ್ಧಾರ ಕೈಗೊಳ್ಳುವ ಹಾಗೂ ಅಗತ್ಯ ವಸ್ತುಗಳನ್ನು ಖರೀದಿಸುವ ಸಾಮರ್ಥ್ಯವನ್ನು ಮಕ್ಕಳಲ್ಲಿ ಬೆಳೆಸಲಾಗುತ್ತದೆ. ಗ್ರಂಥಾಲಯದ ಸಕ್ರಿಯ ಬಳಕೆಯನ್ನು ಪ್ರೋತ್ಸಾಹಿಸಲಾಗುತ್ತಿದೆ. ಅಲ್ಲಿ ಇರಿಸಿರುವ ರಿಜಿಸ್ಟರ್ ವಾಚಕರ ಆಸಕ್ತಿ ಹಾಗೂ ಯಾರು ಪುಸ್ತಕ ಓದುತ್ತಾರೆ ಎನ್ನುವುದನ್ನು ತೋರಿಸುತ್ತದೆ. ವಾಚನಾಭಿರುಚಿ ಉಂಟುಮಾಡಲು ಹಾಗೂ ಹೆಚ್ಚುಹೆಚ್ಚು ಮಕ್ಕಳು ಪುಸ್ತಕ ಕೊಂಡೊಯ್ಯುವುದನ್ನು ಉತ್ತೇಜಿಸಲು, ಪ್ರತಿದಿನ ಬೆಳಗ್ಗೆ ಪ್ರಾರ್ಥನೆ ವೇಳೆ 6 ಮತ್ತು 7ನೇ ತರಗತಿ ವಿದ್ಯಾರ್ಥಿಗಳು ಹೊಸ ಪುಸ್ತಕವೊಂದನ್ನು ಪರಿಚಯಿಸುತ್ತಾರೆ.

ಮಕ್ಕಳ ಸಂಪುಟ ಪ್ರತಿ ಶುಕ್ರವಾರ ಮಧ್ಯಾಹ್ನ 3.30 ರಿಂದ 4.30ರ ಅವಧಿಯಲ್ಲಿ ಗಾಯನ, ನೃತ್ಯ, ನಾಟಕ, ಮಿಮಿಕ್ರಿ ಹಾಗೂ ವಚನ ಗಾಯನ ಒಳಗೊಂಡ ಸಾಂಸ್ಕೃತಿಕ ಕಾರ್ಯಕ್ರಮವನ್ನು ನಡೆಸಿಕೊಡುತ್ತದೆ. ಶಾಲೆಯ ಖೋಖೋ ಮತ್ತು ಕಬಡ್ಡಿ ತಂಡ ಬ್ಲಾಕ್‌ನ ಹಂತಕ್ಕೆ ಆಯ್ಕೆಯಾಗಿದ್ದು, ಶಾಲೆಯ ಮಕ್ಕಳು ಇಲಾಖೆ ನಡೆಸುವ ಕಲಿಕೋತ್ಸವದಲ್ಲಿ ಕಂಠಪಾಟ, ಚರ್ಚಾಕೂಟ ಮತ್ತು ಬರಹ ಸ್ಪರ್ಧೆಯಲ್ಲಿ ಜಿಲ್ಲಾ ಮಟ್ಟದಲ್ಲಿ ಬಹುಮಾನ ಗಳಿಸಿದ್ದಾರೆ. ಪಠ್ಯಕ್ರಮದ ಸಾಕಷ್ಟು ಭಾಗ ಶೋಧನೆ ಮತ್ತು ಪ್ರಶ್ನಿಸುವಿಕೆಯನ್ನು ಉತ್ತೇಜಿಸುವ ಪ್ರಾಜೆಕ್ಟ್‌ಗಳನ್ನು ಒಳಗೊಂಡಿದೆ. ವಿದ್ಯಾರ್ಥಿಗಳು ಸ್ಥಳೀಯ ಚರಿತ್ರೆಯಿಂದ ಹಿಡಿದು ಪಕ್ಕದ ತಿಂಥಿಣಿಯಲ್ಲಿ ಇರುವ ಜೈವಿಕ ಉದ್ಯಾನದ ಅಧ್ಯಯನ ಅಥವಾ, ಕೃಷಿ ಕಾಲೇಜಿನ ಸಂಶೋಧನಾ ಕೇಂದ್ರಕ್ಕೆ ಭೇಟಿ ಅಥವಾ ಗ್ರಾಮದ ಸಂತೆ ವೀಕ್ಷಣೆಯಂಥ ನಾನಾ ಆಸಕ್ತಿಕರ ಚಟುವಟಿಕೆಗಳನ್ನು ಕೈಗೆತ್ತಿಕೊಳ್ಳುತ್ತಾರೆ.

ಮಕ್ಕಳಿಗೆ ಎಳವೆಯಿಂದಲೇ ಶಿಕ್ಷಣ ನೀಡಬೇಕೆಂಬ ತೀವ್ರ ಕಾಳಜಿ ಹೊಂದಿರುವ ಮುಖ್ಯ ಶಿಕ್ಷಕ ಸಜ್ಜನ್, ಒಂದರಿಂದ ನಾಲ್ಕನೇ ತರಗತಿ ಮಕ್ಕಳ ಉಸ್ತುವಾರಿಯನ್ನು ತಾವೇ ನೋಡಿಕೊಂಡು ಆ ತರಗತಿಗಳ ಪಾಠಗಳನ್ನೂ ತಾವೇ ಮಾಡುತ್ತಾರೆ. ನಲಿ–ಕಲಿ ಬೋಧನಾ ಕ್ರಮದಲ್ಲಿ ತರಬೇತಿ ಪಡೆದಿರುವ ಅವರು, ರಾಜ್ಯದಲ್ಲಿ ಆ ಶಿಕ್ಷಣ ಕ್ರಮದ ಅತ್ಯುತ್ತಮ ಶಿಕ್ಷಕರಲ್ಲಿ ಒಬ್ಬರು ಎಂದು ಪರಿಗಣಿತರಾಗಿದ್ದಾರೆ. ಕನ್ನಡ ಟಿವಿ ಚಾನೆಲ್

‘ಚಂದನ’ದಿಂದ ಉತ್ತಮ ಶಿಕ್ಷಕ ಎಂಬ ಮನ್ನಣೆಯನ್ನೂ ಪಡೆದಿದ್ದಾರೆ. ಮಕ್ಕಳೊಡನೆ ಕೆಲವು ನಿಮಿಷ ಕಾಲ ಕಳೆದರೆ, ಅವರನ್ನು ಅರ್ಥ ಮಾಡಿಕೊಳ್ಳುವುದಲ್ಲದೆ, ಪಠ್ಯಪುಸ್ತಕವನ್ನೂ ಮೀರಿ ಅವರ ಕಲಿಯುವ ಸಾಮರ್ಥ್ಯ ಎಷ್ಟಿದೆ ಎನ್ನುವುದು ಗೊತ್ತಾಗಲಿದೆ. ಮಕ್ಕಳಿಗೆ ಮೂಲಭೂತ ಪರಿಕಲ್ಪನೆಗಳನ್ನು ಸರಿಯಾಗಿ ಅರ್ಥ ಮಾಡಿಸಲು ಒತ್ತು ನೀಡುವುದರಿಂದ, ಹೈಸ್ಕೂಲ್‌ನಲ್ಲಿ ಮಕ್ಕಳು ಉತ್ತಮ ಸಾಧನೆ ಮಾಡಲು ಸಹಾಯಕವಾಗುವುದು ಎಂದು ಸಜ್ಜನ್ ನಂಬುತ್ತಾರೆ. ಇತ್ತೀಚೆಗೆ ‘ಕೆಎಸ್‌ಕ್ಯುಎಎಸಿ’ ಮೌಲ್ಯಮಾಪನದಲ್ಲಿ ನೀಡಲಾಗಿರುವ ಉತ್ತಮ ರ್‍ಯಾಂಕ್, ವಿದ್ಯಾರ್ಥಿಗಳ ಕಲಿಕಾ ಸಾಧನೆಗೆ ಮತ್ತು ಮರಲಭಾವಿ ಶಾಲೆ ನೀಡುತ್ತಿರುವ ಗುಣಮಟ್ಟದ ಶಿಕ್ಷಣಕ್ಕೆ ಹಿಡಿದ ಕನ್ನಡಿಯಾಗಿದೆ. ವಿಜ್ಞಾನ ಶಿಕ್ಷಕ ಕಾಂತೇಶ್ ಪ್ರತಿ ಬುಧವಾರ ವಿಜ್ಞಾನದ ಪ್ರಯೋಗವೊಂದನ್ನು ನಡೆಸುತ್ತಾರೆ. ವಿದ್ಯಾರ್ಥಿಗಳಲ್ಲಿ ವಿಷಯದ ಕುರಿತು ಆಸಕ್ತಿ ಹುಟ್ಟಿಸುವುದು ಮತ್ತು ಶೋಧಕ ಮನೋಭಾವವನ್ನು ಉತ್ತೇಜಿಸುವುದು ಈ ಆಸಕ್ತಿಕರ ಉಪಕ್ರಮದ ಉದ್ದೇಶ. ಕಾಂತೇಶ್ ಟಿಎಲ್‌ಸಿಗೆ ನಿಯಮಿತವಾಗಿ ಭೇಟಿ ನೀಡುತ್ತಿದ್ದು, ಶಾಲೆಯಲ್ಲಿ ವಾರದ ಪ್ರಯೋಗ ನಡೆಸಲು ಅಲ್ಲಿಂದ ಸಾಧನಗಳನ್ನು ತರುತ್ತಾರೆ.

ಮರಲಭಾವಿಯ ಜಿಎಚ್‌ಪಿಎಸ್‌ನಿಂದ ತೇರ್ಗಡೆ ಹೊಂದುವ ಹೆಚ್ಚಿನ ಮಕ್ಕಳು ನಂತರ ಪಕ್ಕದ ಜಿಲ್ಲೆಯಾದ ವಿಜಯಪುರದ ಸಾಲೋದಗಿಯ ಸರ್ಕಾರಿ ಹೈಸ್ಕೂಲ್‌ಗೆ ಹೋಗುತ್ತಾರೆ. ಸಜ್ಜನ್ ತಾವೇ ಮಕ್ಕಳನ್ನು ಹೈಸ್ಕೂಲ್‌ಗೆ ಕರೆದೊಯ್ದು ಪ್ರವೇಶ ಪ್ರಕ್ರಿಯೆಯನ್ನು ಪೂರೈಸಲು ನೆರವಾಗುತ್ತಾರೆ. ಸಾಲೋದಗಿಯ ವರದಿಗಳ ಪ್ರಕಾರ, ಈ ವಿದ್ಯಾರ್ಥಿಗಳು ಎಸ್‌ಎಸ್‌ಎಲ್‌ಸಿ ಮಂಡಳಿ ಪರೀಕ್ಷೆಯಲ್ಲಿ ಕೂಡ ಉತ್ತಮ ಸಾಧನೆ ಮಾಡುತ್ತಾರೆ. 2017ರ ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ತಾಲೂಕಿನಲ್ಲಿ ಅತಿ ಹೆಚ್ಚು ಅಂಕ ಗಳಿಸಿದ್ದು ಮರಲಭಾವಿಯ ವಿದ್ಯಾರ್ಥಿ. ಆತ ಬಳಿಕ ಸರ್ಕಾರಿ ಆದರ್ಶ ಹೈಸ್ಕೂಲ್‌ಗೆ ಸೇರಿಕೊಂಡ. ಪಿಯುಸಿ ಪರೀಕ್ಷೆಯಲ್ಲೂ ಈ ಮಕ್ಕಳ ಸಾಧನೆ ಉತ್ತಮವಾಗಿದೆ. “ಜಿಲ್ಲೆಯಲ್ಲಿ ಮೊದಲ ಸ್ಥಾನ ಪಡೆದಿದ್ದು ನಮ್ಮ ಶಾಲೆಯ ವಿದ್ಯಾರ್ಥಿ. ಆತ ಆಮೇಲೆ ತಾಳಿಕೋಟೆಯ ಕಾಲೇಜಿನಲ್ಲಿ ಅಧ್ಯಯನ ನಡೆಸಿದ. ಮರಲಭಾವಿ ಜಿಎಚ್‌ಪಿಎಸ್‌ನಲ್ಲಿ ಓದಿದವರು ವೈದ್ಯರು, ಎಂಜಿನಿಯರ್‌ಗಳು, ಪೊಲೀಸ್ ಅಧಿಕಾರಿಗಳು ಹಾಗೂ ಗ್ರಾಮಲೆಕ್ಕಿಗರಾಗಿ ಸೇವೆ ಸಲ್ಲಿಸುತ್ತಿದ್ದಾರೆ,” ಎನ್ನುತ್ತಾರೆ ಸಜ್ಜನ್. ಶಾಲೆ ಮತ್ತು ಹಳೆಯ ವಿದ್ಯಾರ್ಥಿಗಳ ನಡುವಿನ ಬಾಂಧವ್ಯ ಬಲಿಷ್ಠವಾಗಿದೆ ಎನ್ನುವುದಕ್ಕೆ ಇವೆಲ್ಲವೂ ಸೂಚನೆ. ಕಾಂತೇಶ್ ಸೇರಿಸುತ್ತಾರೆ, “ಹಳೆಯ ವಿದ್ಯಾರ್ಥಿಗಳು ವಾರ್ಷಿಕೋತ್ಸವ, ಸ್ವಾತಂತ್ರ್ಯ ದಿನಾಚರಣೆ ಹಾಗೂ ನಾವು ಆಯೋಜಿಸುವ ನಾನಾ ವಿಜ್ಞಾನ ಇಲ್ಲವೇ ಗಣಿತಶಾಸ್ತ್ರದ ಮೇಳದ ಸಂದರ್ಭದಲ್ಲಿ ನೆರವಾಗುತ್ತಾರೆ.” ಪ್ರತಿವರ್ಷ ಕೊನೆಯ ಶಾಲಾ ದಿನದಂದು ಶಾಲಾ ವಾರ್ಷಿಕೋತ್ಸವವನ್ನು ನಡೆಸಲಾಗುತ್ತದೆ. ಸಮುದಾಯದ ಮಂದಿ ಈ ಕಾರ್ಯಕ್ರಮವನ್ನು ಸಂಭ್ರಮದಿಂದ ವೀಕ್ಷಿಸುತ್ತಾರೆ. ಶಾಲೆಯು ಸಮುದಾಯದವರೊಡನೆ ಸಂಬಂಧವನ್ನು ಜತನದಿಂದ ಕಾಪಾಡುತ್ತಿದೆ. “ನಾವು ನಗರಗಳಿಂದ ದೂರ ಇರುವುದರಿಂದ ಇಲ್ಲಿ ಎಲ್ಲವೂ ಸರಳವಾಗಿಯೇ ನಡೆಯುತ್ತದೆ. ಸ್ಥಳೀಯ

ರಾಜಕೀಯವು ಶಾಲೆಯನ್ನು ಪ್ರವೇಶಿಸಲು ನಾವು ಬಿಟ್ಟಿಲ್ಲ, ಎಸ್‌ಡಿಎಂಸಿಯನ್ನು ನೈಜ ಪ್ರಜಾಪ್ರಭುತ್ವ ಮಾದರಿಯಿಂದಲೇ ಚುನಾಯಿಸಲಾಗುತ್ತದೆ" ಎನ್ನುತ್ತಾರೆ ಸಜ್ಜನ್.

ಆದರೆ, ಕೆಲವು ವಿಷಯಗಳು ಶಿಕ್ಷಕರ ಆತಂಕಕ್ಕೆ ಕಾರಣವಾಗಿವೆ. ನೀರಿನಲ್ಲಿರುವ ಅಧಿಕ ಫ್ಲೋರೈಡ್ ಅಂಶ ಹೆಚ್ಚು ಆತಂಕ ಉಂಟುಮಾಡಿದ್ದು, ಆದಷ್ಟು ಬೇಗ ಜಲಶುದ್ಧೀಕರಣ ಘಟಕವನ್ನು ಅಳವಡಿಸಬೇಕು ಎಂದುಕೊಂಡಿದ್ದಾರೆ. ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಕಾಳಜಿ ಉಳ್ಳವರಾದ್ದರಿಂದ, ಆ ಕೆಲಸ ಆದಷ್ಟು ಬೇಗ ಆಗಲಿದೆ ಎನ್ನುವ ಭರವಸೆ ಅವರಿಗಿದೆ. ಮಕ್ಕಳು ಬೆಳಗ್ಗೆ ಶಾಲೆಗೆ ಬರುವ ಮುನ್ನ ಮನೆಯಲ್ಲಿ ಸೇವಿಸುವ ಆಹಾರ ಅಷ್ಟೇನೂ ಪೌಷ್ಟಿಕವಲ್ಲದೇ ಇರುವುದರಿಂದ ಲಭ್ಯ ದವಸಧಾನ್ಯ ಬಳಸಿಕೊಂಡು ಅತ್ಯುತ್ತಮ ಗುಣಮಟ್ಟದ ಬಿಸಿಯೂಟ ನೀಡಬೇಕೆನ್ನುವುದು ಶಿಕ್ಷಕರ ಆಶಯವಾಗಿದೆ. ಆಡಳಿತಾತ್ಮಕ ಕೆಲಸದ ಕಾಗದಪತ್ರಗಳ ನಿರ್ವಹಣೆ ಒತ್ತಡ, ಮಾಹಿತಿಯನ್ನು ಜಾಲತಾಣಕ್ಕೆ ಅಪ್‌ಲೋಡ್ ಮಾಡುವುದು ಕಿರಿಕಿರಿಯ ಕೆಲಸವೇ ಸರಿ. ಮುಖ್ಯ ಶಿಕ್ಷಕರು ಮಾಡಬೇಕಿರುವ ಮಾಹಿತಿಯ ಅಪ್‌ಲೋಡ್ ಸೇರಿದಂತೆ ಆಡಳಿತಾತ್ಮಕ ಕೆಲಸದ ಹೆಚ್ಚಿನ ಪಾಲನ್ನು ಕಾಂತೇಶ್ ಟಿಎಲ್‌ಸಿಯಲ್ಲಿರುವ ಕಂಪ್ಯೂಟರ್‌ನಲ್ಲಿ ಮಾಡುತ್ತಾರೆ. ಉತ್ತಮ ಶಾಲೆಗಳ ಕುರಿತ ಬಹುತೇಕ ಕಥನಗಳು ಒಬ್ಬ ವ್ಯಕ್ತಿ ಇಲ್ಲವೇ ಮುಖ್ಯ ಶಿಕ್ಷಕನ ಸಾಧನೆಯೇ ಆಗಿರುತ್ತದೆ. ಆದರೆ, ಮರಲಭಾವಿಯಲ್ಲಿ ಇಡೀ ತಂಡ ಒಟ್ಟಾಗಿ ಮುನ್ನಡೆಯುತ್ತಿರುವುದೇ ಆ ಶಾಲೆಯ ವೈಶಿಷ್ಟ್ಯವಾಗಿದೆ.

---

## ಭಿವಂಡಿಯ ವಿದ್ಯುತ್ ಮಗ್ಗದಲ್ಲಿ ಕಳೆದುಹೋಗಲಿದ್ದ, ಬೆರಗು ಮೂಡಿಸುವ ಶಿಕ್ಷಕ

**ಶಂಕರ್, ಕಮಲೇಶ್**

ಸರ್ಕಾರಿ ಪ್ರಾಥಮಿಕ ಶಾಲೆ, ಕೋಟಿಯಫಲಿ, ಸಿರೋಹಿ ಬ್ಲಾಕ್, ರಾಜಸ್ಥಾನ

---

ಇದು ತೀರ ಆಕಸ್ಮಿಕವಾಗಿ ಅಧ್ಯಾಪನ ವೃತ್ತಿಗೆ ಬಂದ ಉತ್ತಮ ಶಿಕ್ಷಕನೊಬ್ಬನ ಕತೆ. ಶಿಕ್ಷಕನಾಗಬೇಕೆಂಬುದು ಅವರ ಹರೆಯದ, ಜ್ವಲಂತವಾದ ಆಶಯ ಕೂಡ ಆಗಿರಲಿಲ್ಲ. ಶಂಕರ್, ವಿದ್ಯುತ್ ಮಗ್ಗ ಹಾಗೂ ವಸ್ತ್ರ ವಿನ್ಯಾಸದಲ್ಲಿ ತರಬೇತಿ ಪಡೆದವರು. ರಾಜಸ್ಥಾನದ ಪಾಲಿ ಜಿಲ್ಲೆಯ ಒಬ್ಬರು 'ಸೇಟು' ಈ ಯುವಕನನ್ನು ವಸ್ತ್ರ ಉತ್ಪಾದನೆಯ ಪ್ರಮುಖ ಕೇಂದ್ರವಾದ ಮುಂಬೈ ಹೊರ ವಲಯದ ಭಿವಂಡಿಗೆ ಕರೆದೊಯ್ದರು. ಭಿವಂಡಿಯ ವಿದ್ಯುತ್ ಮಗ್ಗಗಳಲ್ಲಿ ಈತ ಹಲವು ವರ್ಷ ಕೆಲಸ ಮಾಡಿದರು. ಸ್ವಗ್ರಾಮ ದೇಲ್‌ದರ್‌ಗೆ ಭೇಟಿ ನೀಡಿದಾಗ, ಇವರ ಬಾಲ್ಯದ ಸ್ನೇಹಿತ ಓಂಪ್ರಕಾಶ್‌ನನ್ನು ಭೇಟಿಯಾದರು. ಓಂಪ್ರಕಾಶ್ ರಾಜಸ್ಥಾನ ಶಿಕ್ಷಣ ಇಲಾಖೆಯ ನೌಕರನಾಗಿದ್ದು ಅಬು ರೋಡ್ ಬ್ಲಾಕ್‌ನ ಕ್ಲಸ್ಟರ್ ಸಂಪನ್ಮೂಲ ಸಮನ್ವಯಕಾರನೂ ಆಗಿದ್ದ. ದೇಲ್‌ದರ್‌ನಿಂದ 2 ಕಿ.ಮೀ. ದೂರದ ಗ್ರಾಮವಾದ ಕೋಟಿಯಫಲಿಯಲ್ಲಿ ಸರ್ಕಾರ ಶಾಲೆಯೊಂದನ್ನು ಆರಂಭಿಸುತ್ತಿದೆ ಎಂಬ ಮಾಹಿತಿಯಿದ್ದ ಓಂಪ್ರಕಾಶ್, ಅರೆಕಾಲಿಕ(ಪ್ಯಾರಾ) ಶಿಕ್ಷಕನ ಹುದ್ದೆಗೆ ಅರ್ಜಿ ಹಾಕು ಎಂದು

ಗೆಳೆಯನಿಗೆ ಹೇಳಿದರು. "ಅದು ನನ್ನ ಬದುಕಿಗೆ ತಿರುವು ನೀಡಿದ ಘಟ್ಟ. ನಾನು ತರಬೇತಿ ಪಡೆದ ಶಿಕ್ಷಕನಲ್ಲ. ಆದರೆ, ಶಿಕ್ಷಕ ವೃತ್ತಿ ಒಂದು ಅತ್ಯುತ್ತಮ ಕೆಲಸ ಎಂದು ಭಾವಿಸಿದ್ದೆ. ಆಕಸ್ಮಿಕವಾಗಿ ನನಗೊಂದು ಅವಕಾಶ ದೊರೆಯಿತು; ನಾನು ಅರ್ಜಿ ಸಲ್ಲಿಸಿದೆ," ಅನ್ನುತ್ತಾರೆ ಶಂಕರ್. ವಿಶಾಲ ಹೃದಯಿ ಗ್ರಾಮಸ್ಥ ನರ್ಸಾಭ್ಯಾ ಅವರ ಮನೆಯ ಒಂದು ಕೊಠಡಿಯಲ್ಲಿ 2002ರಲ್ಲಿ ಕೋಟಿಯಫಲಿಯ ಸರ್ಕಾರಿ ಪ್ರಾಥಮಿಕ ಶಾಲೆ ಆರಂಭವಾಯಿತು. ಶಂಕರ್ ಒಬ್ಬರೇ ಶಿಕ್ಷಕರು. ಶಂಕರ್ ಶಿಕ್ಷಕ ವೃತ್ತಿಯನ್ನು ಆರಂಭಿಸಿದಾಗ ಮೂವತ್ತರ ಮಧ್ಯ ವಯಸ್ಸಿನಲ್ಲಿದ್ದರು. ತಾನು ಹುಟ್ಟಿದ್ದೇ ಶಿಕ್ಷಕನಾಗುವುದಕ್ಕೆ ಎಂದು ಅರಿವಾಗಲು ಅವರಿಗೆ ಹೆಚ್ಚು ಕಾಲ ಬೇಕಾಗಲಿಲ್ಲ.

ತಮ್ಮೆಲ್ಲ ಶಕ್ತಿ-ಸಾಮರ್ಥ್ಯದೊಂದಿಗೆ ರಂಗಕ್ಕೆ ನುಗ್ಗಿದರು, ಗ್ರಾಮದ ಹಾಗೂ ಸುತ್ತಮುತ್ತಲಿನ ಹಲವು ಮಕ್ಕಳು ಶಾಲೆಗೆ ದಾಖಲಾದರು. ನರ್ಸಾಭ್ಯಾ ಅವರ ಮನೆ 36 ಮಕ್ಕಳನ್ನು ತುಂಬಿಕೊಳ್ಳುವಷ್ಟು ದೊಡ್ಡದಾಗಿರಲಿಲ್ಲ! ಒಂದೇ ವರ್ಷದ ಒಳಗೆ ಪಂಚಾಯಿತಿಗೆ ಸೇರಿದ ಜಾಗದಲ್ಲಿ 2003ರಲ್ಲಿ ಶಾಲೆಯ ಮೊದಲ ಕೊಠಡಿ ನಿರ್ಮಾಣಗೊಂಡಿತು. ಎರಡು ವರ್ಷಗಳ ಬಳಿಕ ಸರ್ಕಾರ ಈ 'ಹಂಗಾಮಿ/ ಪರ್ಯಾಯ' ಶಾಲೆಯನ್ನು ಕ್ರಮಬದ್ಧಗೊಳಿಸಿತು. ಕಟ್ಟಡಕ್ಕೂ ಕೆಲವು ಮೂಲಸೌಕರ್ಯ ಗಳಿಗೂ ಅನುದಾನ ಬಂತು. 2009ರಲ್ಲಿ ಇನ್ನೊಂದು ಕಟ್ಟಡ ಕಟ್ಟಲಾಯಿತು. ಈಗ ಶಾಲೆಯಲ್ಲಿ ಮೂರು ಕೊಠಡಿಗಳು, ಆಟದ ಮೈದಾನ/ಪ್ರಾರ್ಥನಾ ಸ್ಥಳ ಮತ್ತು ಬಾಲಕ/ ಬಾಲಕಿಯರಿಗೆ ಪ್ರತ್ಯೇಕವಾದ ತಲಾ ಒಂದು ಸ್ವಚ್ಛವಾದ ಶೌಚಾಲಯಗಳಿವೆ.

ಮೊದಲ ಐದು ವರ್ಷಗಳಲ್ಲಿ ಶಂಕರ್ ಶಾಲೆಯ ಆವರಣದಲ್ಲಿ ಬೇವು, ಅರಳಿ, ಪೇರಲ ಮತ್ತು ನೆಲ್ಲಿಕಾಯಿ ಗಿಡಗಳನ್ನು ನೆಟ್ಟು, ಬೆಳೆಸಿದರು. ಬೇಸಿಗೆ ರಜೆಯಲ್ಲೂ ಎರಡು ದಿನಕ್ಕೊಮ್ಮೆ ಬಂದು ಗಿಡಗಳು ಸುಡುವ ಬಿಸಿಲಿಗೆ ಒಣಗಿ ಸಾಯಬಾರದೆಂದು ನೀರುಣಿಸುತ್ತಿದ್ದರು. ಶಂಕರ್ ಅವರ ಕೆಲಸವನ್ನು ಸಮುದಾಯ ಗಮನಿಸುತ್ತಿತ್ತು. ಈ ಕಾರ್ಯದಲ್ಲಿ ಮಕ್ಕಳು ಅವರೊಂದಿಗೆ ಕೈಜೋಡಿಸಿದರು. ಇಂದು ಆ ಮರ-ಗಿಡಗಳನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ಮಕ್ಕಳು ವಹಿಸಿಕೊಂಡಿದ್ದಾರೆ. ಶಂಕರ್ ಕೆಲವು ವರ್ಷಗಳ ಹಿಂದೆ ಶಾಲೆಯ ಸುತ್ತ ರಕ್ಷಣಾ ಬೇಲಿ ಇರಲೆಂದು ಮುಳ್ಳಿನ ಪೊದೆಗಳನ್ನು ನೆಟ್ಟಿದ್ದರು. ಇಂದು ಶಾಲೆಗೆ ಆವರಣಗೋಡೆ ನಿರ್ಮಿಸಲಾಗಿದೆ.

ಕೋಟಿಯಫಲಿ ಜಿಪಿಎಸ್‌ಯಲ್ಲಿ ಈಗ 44 ಮಕ್ಕಳು ವ್ಯಾಸಂಗ ಮಾಡುತ್ತಿದ್ದಾರೆ. ಪ್ರತಿದಿನ ಅಂದಾಜು ಶೇ.80ರಷ್ಟು ಹಾಜರಿ ಇರುತ್ತದೆ. ಬಹುತೇಕ ಮಕ್ಕಳು ಕಡು ಬಡ ಕುಟುಂಬದಿಂದ ಬಂದವರು. ಕೋಟಿಯಫಲಿಯ ಇಡೀ ಸಮುದಾಯ ಗಿರಾಸಿಯಾ ಬುಡಕಟ್ಟಿಗೆ ಸೇರಿದ್ದು, ಇವರೆಲ್ಲರೂ ಬಹಳ ಕಡಿಮೆ ಹಿಡುವಳಿ ಇರುವ ಬಡ ಹಾಗೂ ಅನಕ್ಷರಸ್ಥ ರೈತರು. ಇವರ ದೊಡ್ಡ ಕುಟುಂಬಗಳಲ್ಲಿ ಆರರಿಂದ ಏಳು ಮಕ್ಕಳು ಇರುವುದು ಸಾಮಾನ್ಯ. ಮಕ್ಕಳಿಗೆ ತೀರ ಅಗತ್ಯವಾದ ಪೆನ್ಸಿಲ್, ನೋಟ್ ಪುಸ್ತಕ ಇತ್ಯಾದಿ ಕೂಡ ಕೊಳ್ಳಲಾಗದದು ಸ್ಥಿತಿ. ಸಮುದಾಯದ ಕೆಲ ವಿಶಾಲ ಹೃದಯಿಗಳು ರಾಜಸ್ಥಾನದ ಅಬು ರಸ್ತೆಯಿಂದ ಸುಮಾರು 50 ಕಿಲೋಮೀಟರ್ ದೂರದಲ್ಲಿರುವ ಗುಜರಾತ್‌ನ ಪಾಲನ್‌ಪುರದಿಂದ ಸಗಟು ಲೆಕ್ಕದಲ್ಲಿ ಲೇಖನ ಸಾಮಗ್ರಿಗಳನ್ನು ಖರೀದಿಸಿ, ಮಕ್ಕಳಿಗೆ

ಹಂಚುತ್ತಾರೆ. ಈ ಉಪಕಾರಿಗಳು ಅಥವಾ 'ಭಾಮಾಶಾ'ಗಳು (ರಾಜಸ್ಥಾನದಲ್ಲಿ ಇಂತಹ ಪರೋಪಕಾರಿಗಳಿಗೆ ರಾಜ್ಯ ಸರ್ಕಾರ ಮಾನ್ಯಮಾಡಿರುವ ಹೆಸರು) ಕಳೆದ ಐದು ವರ್ಷಗಳಲ್ಲಿ ಮೂರು ಬಾರಿ ಮಕ್ಕಳಿಗೆ ಸ್ವೆಟರ್ ಹಂಚಿದ್ದಾರೆ. ಅಗತ್ಯ ಬಿದ್ದಾಗ ಅವರನ್ನು ಸಂಪರ್ಕಿಸಲು ಶಂಕರ್ ಹಿಂದೆಮುಂದೆ ನೋಡುವುದಿಲ್ಲ; ಅವರೂ ಈ ಶಿಕ್ಷಕನ ಕೋರಿಕೆಗೆ ಕೂಡಲೇ ಸ್ಪಂದಿಸುತ್ತಾರೆ. ಮಕ್ಕಳು ಶಾಲೆಗೆ ಸಂತಸದಿಂದ ಬರುವುದನ್ನು ಅವರು ನೋಡಿದ್ದಾರೆ: ಉತ್ತಮವಾಗಿ ಕಲಿಯುತ್ತಿರುವುದನ್ನು, ಎಲ್ಲರೊಡನೆ ಒಡನಾಡುವುದನ್ನು ಚುರುಕಿನ ಮಕ್ಕಳಾಗಿ ಬೆಳೆಯುತ್ತಿರುವುದನ್ನೂ ಅವರು ಗಮನಿಸಿರುವುದು ಇದಕ್ಕೆ ಕಾರಣ. ಇದು ಶಾಲೆಯ ಮೇಲೆ ಸಮುದಾಯ ಇರಿಸಿರುವ ನಂಬಿಕೆಗೆ ಸಿಕ್ಕ ಪ್ರತಿಫಲ. ಭಾಮಾಶಾಗಳು ಮಕ್ಕಳಿಗೆ ವಸ್ತುಗಳನ್ನು ತಾವೇ ತಂದು ವಿತರಿಸುವಂತೆ ಪ್ರಾಮಾಣಿಕರೂ ದಕ್ಷರೂ ಆಗಿರುವ ಶಂಕರ್ ನೋಡಿಕೊಳ್ಳುತ್ತಾರೆ.

ಕಳೆದ 15 ವರ್ಷಗಳಲ್ಲಿ ಈ ಶಾಲೆಯಲ್ಲಿ ಸಿಕ್ಕ ಉತ್ತಮ ಪ್ರಾಥಮಿಕ ಶಿಕ್ಷಣದಿಂದಾಗಿ ಸಮುದಾಯದ ಸಾಕಷ್ಟು ಯುವಜನರು ವಿದ್ಯಾವಂತರಾಗಿದ್ದಾರೆ. ಎಲ್ಲ ವಿದ್ಯಾರ್ಥಿಗಳ ಪ್ರಗತಿಯ ದಾಖಲೆ ಇರಿಸಿಕೊಂಡಿರುವ ಶಂಕರ್, ಶಾಲೆಯಲ್ಲಿ ಐದನೇ ತರಗತಿ ಮುಗಿಸಿದವರು ಖಂಡಿತವಾಗಿಯೂ ಹೈಸ್ಕೂಲ್ ಶಿಕ್ಷಣ ಮುಗಿಸುತ್ತಾರೆ ಎಂದು ಭರವಸೆ ಹೊಂದಿದ್ದಾರೆ. ಇವರಲ್ಲಿ ಶೇ.60ಕ್ಕೂ ಅಧಿಕ ಯುವಜನರು ಸ್ಥಳೀಯ ಐಟಿಐನಲ್ಲಿ ತಾಂತ್ರಿಕ ಶಿಕ್ಷಣ ಪಡೆಯುತ್ತಿದ್ದು, ಇನ್ನು ಕೆಲವರು ಬಿಎ ವ್ಯಾಸಂಗವನ್ನು ಆಯ್ದುಕೊಂಡಿದ್ದಾರೆ. ಕೋಟಿಯ ಫಲಿಯಲ್ಲಿ ಪ್ರಾಥಮಿಕ ಶಿಕ್ಷಣ ಮುಗಿಸಿದ ಕೆಲವು ಹೆಣ್ಣುಮಕ್ಕಳು ವಸತಿ ಶಾಲೆಗೋ ಪರಿಶಿಷ್ಟ ಪಂಗಡದ ಮಕ್ಕಳ ಶಾಲೆಗೋ ಸೇರಿಕೊಂಡಿದ್ದಾರೆ. ಇಷ್ಟೆಲ್ಲ ಕೆಲಸದ ಜತೆಗೆ, ಶಾಲೆಗೆ ನಿಯಮಿತವಾಗಿ ಹಾಜರಾಗದ ಮಕ್ಕಳಿಗೆ ಪ್ರತಿದಿನ ಶಾಲೆಗೆ ಬರಬೇಕೆಂದು ಮನವರಿಕೆ ಮಾಡಿಕೊಡುವ ಕಾರ್ಯವನ್ನೂ ಶಂಕರ್ ಮಾಡುತ್ತಾರೆ. ಸಣ್ಣ ಮಕ್ಕಳನ್ನು ನೋಡಿಕೊಳ್ಳುತ್ತಿರುವವರನ್ನೂ ಮೇಕೆಗಳನ್ನು ಮೇಯಿಸುತ್ತಿರುವವರನ್ನೂ ಶಾಲೆಗೆ ಎಳೆದು ತರುವ ಕೆಲಸವನ್ನು ಮಾಡುತ್ತಾರೆ.

ಶಂಕರ್ ಅವರ ಅಭಿಪ್ರಾಯದಲ್ಲಿ ಆದರ್ಶವಾದಿ ಶಿಕ್ಷಕ ಕಮಲೇಶ್ 2012ರಲ್ಲಿ ಶಾಲೆಗೆ ನೇಮಕಗೊಂಡಿದ್ದು ಒಂದು ಅತ್ಯುತ್ತಮ ಬೆಳವಣಿಗೆ. ಆಶ್ಚರ್ಯಕರ ಸಂಗತಿಯೆಂದರೆ, ಕಮಲೇಶ್ ಕೇವರ್ಲಿ ಎನ್ನುವ ಗ್ರಾಮದವರಾಗಿದ್ದು, ಈ ಗ್ರಾಮವು ಅತಿ ಹೆಚ್ಚು ಶಿಕ್ಷಕರನ್ನು ಸೃಷ್ಟಿಸಿದ ಖ್ಯಾತಿಯನ್ನು ಪಡೆದಿದೆ. ಐದು ಸಾವಿರ ಜನಸಂಖ್ಯೆಯ ಈ ಊರಿನಲ್ಲಿ ಅಂದಾಜು ನೂರು ಮಂದಿ ಶಿಕ್ಷಕರಿದ್ದಾರೆ. 27 ವರ್ಷದ ಕಮಲೇಶ್‌ಗೆ ಶಂಕರ್ ಅವರು ಪಿತೃ ಸಮಾನರು. ಶಂಕರ್ ಅವರ ಸರಳತೆ, ಬದ್ಧತೆ ಹಾಗೂ ಭಾವುಕತೆ ಕಮಲೇಶ್‌ಗೆ ಅಚ್ಚುಮೆಚ್ಚು. ಕಮಲೇಶ್ ಶಾಲೆಗೆ ಬಂದ ಮೊದಲ ದಿನವೇ ಶಂಕರ್‌ಗೆ ಇಷ್ಟವಾದರು. ಇಬ್ಬರೂ ಸೇರಿ ಒಂದು ಉತ್ತಮ ತಂಡವಾಗಿ ಯೋಜನೆ ಮತ್ತು ಕಾರ್ಯಾಚರಣೆ, ಜವಾಬ್ದಾರಿ ಹಾಗೂ ಕೆಲಸ – ಎಲ್ಲವನ್ನೂ ಹಂಚಿಕೊಂಡು ಸೌಹಾರ್ದದಿಂದ ಕೆಲಸ ಮಾಡುತ್ತಿದ್ದಾರೆ. ಕಮಲೇಶ್ ಗಣಿತ ಮತ್ತು ಇಂಗ್ಲಿಷ್ ಕಲಿಸಿದರೆ ಶಂಕರ್ ಹಿಂದಿ ಮತ್ತು ಪರಿಸರ ಪಾಠಗಳನ್ನು ಕಲಿಸುತ್ತಾರೆ. ಶಾಲೆಯ ಪ್ರಾರ್ಥನಾ ಸ್ಥಳ ಅವರ ಯೋಜನೆ ಹಾಗೂ ಕಾರ್ಯಾಚರಣೆಯ ಕ್ಷಮತೆಗೆ ಒಂದು ಉದಾಹರಣೆ.

ವಿದ್ಯಾರ್ಥಿಗಳು ಅಭಿವ್ಯಕ್ತಿಸಲು, ಕೌಶಲಗಳನ್ನು ಪ್ರದರ್ಶಿಸಲು ಹಾಗೂ ಸಾಮರ್ಥ್ಯಗಳನ್ನು ಸಾಣೆ ಹಿಡಿಯಲು, ಸೌಹಾರ್ದದಿಂದ ಕಲಿಯಲು ಬೆಳಗಿನ ಸಭೆ ಅತ್ಯಂತ ಪ್ರಶಸ್ತವಾಗಿದೆ ಎಂದು ಇಬ್ಬರೂ ಏಕಕಂಠದಿಂದ ಹೇಳಿದರು. ಬೆಳಗ್ಗೆ ಪ್ರಾರ್ಥನಾ ಸ್ಥಳದಲ್ಲಿ ಮಕ್ಕಳು ಮಗ್ಗಿ ಹೇಳುವುದು, ಎಣಿಸುವುದು, ಶಿಶುಗೀತೆ, ಕವನ ಮತ್ತು ಕಥೆ ಹೇಳುವುದು ಸೇರಿದಂತೆ ನಾನಾ ಮೌಖಿಕ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದು ಕಂಡುಬಂತು. ಬಹಳಷ್ಟು ಗುಂಪು ಚಟುವಟಿಕೆಗಳು ಇದ್ದವು. ಎಲ್ಲ ಮಕ್ಕಳಿಗೂ ಪಾಲ್ಗೊಳ್ಳಲು ಅವಕಾಶ ಕಲ್ಪಿಸಲಾಗಿತ್ತು. "ಮಕ್ಕಳ ಮನೆಗಳಲ್ಲಿ ಕಲಿಕೆಯ ವಾತಾವರಣವಿಲ್ಲ. ಇದರಿಂದ, ಎಲ್ಲವನ್ನೂ ಇಲ್ಲಿಯೇ ಮಾಡಬೇಕಾಗುತ್ತದೆ. ಹೀಗಾಗಿ, ಬೆಳಗಿನ ಸಭೆ ಕಲಿಕೆಯ ಮುಖ್ಯ ಸ್ಥಳವಾಗಲಿದೆ. ಹಿಂದಿ ಮಕ್ಕಳ ಮನೆ ಭಾಷೆಯಲ್ಲ. ಅವರು ಹಿಂದಿ ಮಾತನ್ನಾಡಲು ಇಲ್ಲೇ ಕಲಿಯಬೇಕಾಗುತ್ತದೆ. ಪಠ್ಯಕ್ರಮ ಹಿಂದಿಯಲ್ಲಿರುವುದರಿಂದ, ಮಾತನ್ನಾಡಲು ಹಾಗೂ ಬರೆಯಲು ಕಲಿಯುವುದು ಮುಖ್ಯವಾಗಲಿದೆ" ಎನ್ನುತ್ತಾರೆ ಕಮಲೇಶ್. ಕೋಟಿಯಫಲಿ ಶಾಲೆಯ ಮಕ್ಕಳು ಆಟದಲ್ಲಿ ಮುಂದಿದ್ದು, ಐದನೇ ತರಗತಿ ಮಕ್ಕಳು ಕುಸ್ತಿಯಲ್ಲಿ ಜಿಲ್ಲಾ ಮಟ್ಟದಲ್ಲಿ ಅಂತಿಮ ಸುತ್ತು ತಲಪಿದ್ದಾರೆ. ಮಕ್ಕಳು ಅತ್ಯಂತ ಪ್ರಾಮಾಣಿಕರು ಎಂದು ಶಂಕರ್ ಹೇಳುತ್ತಾರೆ. "ಒಂದು ಪೆನ್ಸಿಲ್ ಅಥವಾ ನಾಣ್ಯ ಸಿಕ್ಕಿದರೂ, ಮಕ್ಕಳು ಅದನ್ನು ನನಗೆ ಇಲ್ಲವೇ ಕಮಲೇಶ್‌ಗೆ ಕೊಡುತ್ತಾರೆ. ಮಕ್ಕಳು ಸಹಜವಾಗಿಯೇ ವಿನಯಶೀಲರೂ ಸುಸಂಸ್ಕೃತರೂ ಆಗಿದ್ದಾರೆ" ಎನ್ನುತ್ತಾರೆ ಅವರು.

ಶಂಕರ್ ಮಕ್ಕಳಿಗೆ ಇವಿಎಸ್‌ನ ಅಧ್ಯಾಯವೊಂದನ್ನು ವಿವರಿಸುತ್ತಿದ್ದುದನ್ನು ತರಗತಿಯ ಕೊನೆಯ ಸಾಲಿನಲ್ಲಿ ಸದ್ದು ಮಾಡದೆ ಕುಳಿತು ಗಮನಿಸಿದೆವು. ನೀರಿನ ಗುಣವನ್ನು ವಿವರಿಸುತ್ತಿದ್ದ ಅವರ ಮುಂದೆ ಹಲವು ನೀರಿನ ಲೋಟಗಳು ಇದ್ದವು. ಅಲ್ಲಿ ಪಾಠವೆಂಬುದು ಉದ್ದಕ್ಕೂ ಮೇಷ್ಟ್ರು-ಮಕ್ಕಳ ಸಂವಾದರೂಪದಲ್ಲಿ ನಡೆಯುತ್ತಿತ್ತು. ಚಮಚದಲ್ಲಿ ಸಕ್ಕರೆ ಹಿಡಿದುಕೊಂಡು, "ಇದು ಕರಗುವುದೇ?" ಎಂದು ಮಕ್ಕಳನ್ನು ಕೇಳುತ್ತಲೇ ನೀರಿಗೆ ಸೇರಿಸಿದರು. ಬಳಿಕ ಉಪ್ಪು ಹಾಗೂ ಅನಂತರ ಕೆಲವು ಬಣ್ಣಗಳನ್ನು ಸೇರಿಸಿ, ನೀರು ತನಗೆ ಸೇರಿಸಿದ ವಸ್ತುವಿನ ಗುಣಲಕ್ಷಣವನ್ನು ಪಡೆದುಕೊಳ್ಳುತ್ತದೆ ಎಂದು ತೋರಿಸಿಕೊಟ್ಟರು. ಯಾವುದು ನೀರಿನಲ್ಲಿ ತೇಲುತ್ತದೆ ಹಾಗೂ ಯಾವುದು ಮುಳುಗುತ್ತದೆ ಎಂಬುದನ್ನು ಹಾಗೂ ನೀರಿನ ಮೇಲೆ ಎಣ್ಣೆ ಹೇಗೆ ಹರಡಿಕೊಳ್ಳುತ್ತದೆ ಎಂಬುದನ್ನು ತಿಳಿಸಿಕೊಟ್ಟರು. ರಸ್ತೆಯ ನೀರಿನ ಗುಂಡಿಯಲ್ಲಿ ಚೆಲ್ಲಿದ ತೈಲದಲ್ಲಿ ಯಾಕೆ ಕಾಮನಬಿಲ್ಲು ಕಾಣಿಸಿಕೊಳ್ಳುತ್ತದೆ ಎಂದು ತಟ್ಟನೆ ಮಗುವೊಂದು ಕೇಳಿತು. ಮೂರು, ನಾಲ್ಕು ಹಾಗೂ ಐದನೇ ತರಗತಿ ಮಕ್ಕಳಿದ್ದ ಮಿಶ್ರ ಗುಂಪು ಅದಾಗಿತ್ತು. ಕೆಲವು ಮಕ್ಕಳು ತಮ್ಮಲ್ಲೇ ಚರ್ಚೆ ಮಾಡುತ್ತಿದ್ದವು. ಶಂಕರ್ ಅದನ್ನು ಆಕ್ಷೇಪಿಸಲಿಲ್ಲ. ಇದರಿಂದ ತರಗತಿಯ ಶಿಸ್ತಿಗೆ ಧಕ್ಕೆ ಬರುತ್ತದೆ ಎಂದು ಅವರಿಗೆ ಅನಿಸಲಿಲ್ಲ. ಅವರ ಪಾಠದಲ್ಲಿ ತಮ್ಮ ವಾದ ಮಂಡಿಸಲು ಮಕ್ಕಳಿಗೆ ಅವಕಾಶ ಇತ್ತು. ಮಕ್ಕಳ ಮುಕ್ತ ಅಭಿವ್ಯಕ್ತಿಯನ್ನೂ ಅವರಿಗೆ ನೀರಿನ ಕುರಿತು ಅನಿಸಿದ್ದನ್ನು ಕರಿಹಲಗೆಯಲ್ಲಿ ಬರೆಯಲು ಶಿಕ್ಷಕ ಅನುಮತಿ ನೀಡಿರುವುದನ್ನೂ ನೋಡಿದಾಗ, ಮಕ್ಕಳಿಗೆ ಬರೆಯುವ ಹಾಗೂ ಓದುವ ಸಾಮರ್ಥ್ಯ

ಅಭಿವೃದ್ಧಿಪಡಿಸಿಕೊಳ್ಳಲು ಶಿಕ್ಷಕ ಒತ್ತು ನೀಡುತ್ತಿರುವುದು ಸ್ಪಷ್ಟವಾಯಿತು. ಅಷ್ಟರಲ್ಲಿ ಬಿಸಿಯೂಟದ ಸಮಯವಾಯಿತು. ಮಕ್ಕಳು ಬೋಧನೆಯ ಪ್ರಕ್ರಿಯೆಯಲ್ಲಿ ಸಕ್ರಿಯವಾಗಿ ಪಾಲ್ಗೊಂಡದ್ದರ ಬಗ್ಗೆಯೂ ಕೆಲವು ಉತ್ತಮ ವಾಕ್ಯಗಳನ್ನು ರಚಿಸಿದ್ದರ ಬಗ್ಗೆಯೂ ಶಂಕರ್ ಅವರನ್ನು ಮಕ್ಕಳು ಚದರಿಹೋದ ಮೇಲೆ ಪ್ರಶ್ನಿಸಿದೆ. ಅವರು ಅಳುಕಿಲ್ಲದೆ "ನಮ್ಮ ಶಾಲೆಯ ಐದನೇ ತರಗತಿ ಮಕ್ಕಳ ಗ್ರಹಣಶಕ್ತಿಯೂ ಕಲಿಕೆಯ ಸಾಮರ್ಥ್ಯವೂ ಖಾಸಗಿ ಶಾಲೆ ಮಕ್ಕಳಿಗಿಂತ ಉತ್ತಮವಾಗಿದೆ" ಎಂದರು ಹೆಮ್ಮೆಯಿಂದ.

ಆನಂತರ, ತಾವು ಹೇಗೆ ಮಗುವೊಂದರ ವೈಯಕ್ತಿಕ ಕಲಿಕೆಯ ವಿವರಗಳನ್ನು ದಾಖಲಿಸಿಕೊಳ್ಳುತ್ತೇವೆ ಎನ್ನುವುದನ್ನು ಶಂಕರ್ ಹಾಗೂ ಕಮಲೇಶ್ ನಮಗೆ ತೋರಿಸಿದರು. "ನಮಗೆ ನಿರಂತರ ಮೌಲ್ಯಮಾಪನ (ಸಿಸಿಇ) ಬಹಳ ಸುಲಭದ ಕೆಲಸ. ಯಾವುದೇ ಸಮಸ್ಯೆಯಿಲ್ಲದೆ ಎಲ್ಲ ದಾಖಲೆಗಳನ್ನು ಕರಾರುವಾಕ್ಕಾಗಿ ನಿರ್ವಹಿಸಿದ್ದೇವೆ. ಪ್ರತಿ ವಿಷಯದಲ್ಲೂ ಪ್ರತಿಯೊಂದು ಮಗುವಿನ ಕಲಿಕೆಯ ಮಟ್ಟವೇನು ಎನ್ನುವುದು ಹಾಗೂ ಯಾವ ಮಗು ಸಮಸ್ಯೆ ಎದುರಿಸುತ್ತಿದೆ ಎಂಬುದು ನಮ್ಮಿಬ್ಬರಿಗೂ ಗೊತ್ತಿದೆ." ಎಂದು ಕಮಲೇಶ್ ವಿವರಿಸಿದರು. ಇದಕ್ಕೆ ನಾವು ಶ್ಲಾಘನೆಯ ಮಾತುಗಳನ್ನು ಆಡಿದಾಗ ಕಮಲೇಶರು 'ಇವನ್ನು ಸಂಘಟಿಸುವಲ್ಲಿ ಶಂಕರ್ ಅವರ ಪಾತ್ರ ನಿರ್ಣಾಯಕವಾದುದು' ಎಂದರು. "ಆಡಳಿತಾತ್ಮಕ ಕೆಲಸದಲ್ಲಿ ಅವರ ನೆರವು ಅಪರಿಮಿತವಾದುದು. ಸ್ವಭಾವತಃ ವಿಚಾರಶೀಲ ವ್ಯಕ್ತಿಯಾಗಿರುವುದರಿಂದ, ತಾವೇ ಮುಂದಾಗಿ ಬಂದು ಹೊರೆಯನ್ನು ಹಂಚಿಕೊಳ್ಳುತ್ತಾರೆ."

ಇಬ್ಬರೂ ವೈಯಕ್ತಿಕ ಕಲಿಕೆಗೂ ಸ್ವಯಂ ವ್ಯಕ್ತಿತ್ವ ವಿಕಸನಕ್ಕೂ ಬದ್ಧರಾಗಿದ್ದಾರೆ. ಶಂಕರ್ 'ವಿಟಿಎಫ್'ಗೆ ನಿಯಮಿತವಾಗಿ ಹೋಗುವುದಲ್ಲದೆ ಆ ವೇದಿಕೆಯಲ್ಲಿ ನಡೆಯುವ ಶೈಕ್ಷಣಿಕ ಚರ್ಚೆಗಳು ಅವರಿಗೆ ಬಹಳ ಉಪಯುಕ್ತವಾಗಿವೆ. ಅವರು ಹೇಳುತ್ತಾರೆ, "ಮೂರು ಗಂಟೆಗಳ ಚರ್ಚೆ ನಮಗೆ ಬಹಳ ಉಪಯುಕ್ತ. ಉದಾಹರಣೆಗೆ, ಮೂರು ಸಭೆಗಳ ಪೈಕಿ ಎರಡರಲ್ಲಿ ನಾವು ಭಾಗಾಕಾರ ಮತ್ತು ಭೂಗೋಳದ ಒಂದು ಅಧ್ಯಾಯವಾದ ಪ್ರಾಂತೀಯ ಲಕ್ಷಣಗಳನ್ನು ವಿವರಿಸುವ ವಿಧಾನದ ಕುರಿತು ಚರ್ಚಿಸಿದೆವು. ಈ ಚರ್ಚೆಗಳು ನಮ್ಮ ಆಲೋಚನೆಗಳನ್ನು ಪರಿಷ್ಕರಿಸಿಕೊಳ್ಳಲು ಹಾಗೂ ಪರ್ಯಾಯ ತರಗತಿ ಕೊಠಡಿ ವಿಧಾನಗಳನ್ನು ಶೋಧಿಸಲು ನೆರವಾಗಲಿವೆ."

2002ರಲ್ಲಿ ಅರೆಕಾಲಿಕ ಶಿಕ್ಷಕ ಎಂದು ನೇಮಕಗೊಂಡ ಈ ವಸ್ತ್ರ ವಿನ್ಯಾಸಕಾರ, ಈಗ ಬಹುದೂರ ಸಾಗಿ ಬಂದಿದ್ದಾರೆ. 2008ರಲ್ಲಿ ಪೂರ್ಣಾವಧಿ ಶಿಕ್ಷಕ (ಪ್ರಬೋಧಕ್)ರಾಗಿ ನೇಮಕಗೊಂಡ ಅವರು ಈಗ ಮುಖ್ಯ ಶಿಕ್ಷಕರು. ಈ ಪಯಣದಲ್ಲಿ ಅಬು ರೋಡ್‌ನ ಡಯೆಟ್ (ಡಿಐಇಟಿ) ನಿಂದ ಎಸ್‌ಟಿಸಿ ಹಾಗೂ ಬಿಎಸ್‌ಟಿಸಿ ಶಿಕ್ಷಕ ಪ್ರಮಾಣ ಪತ್ರ ಪಡೆದಿದ್ದಾರೆ. ವಿಟಿಎಫ್ ಸ್ವಯಂ ಸಂಘಟಿತ ಉಪಕ್ರಮವಾಗಿರುವುದರಿಂದ ಶಿಕ್ಷಕರಿಗೆ ಉಪಯುಕ್ತವೂ ಪ್ರಸ್ತುತವೂ ಆದ ವಿಷಯಗಳನ್ನು ಆಯ್ಕೆ ಮಾಡಿ ನಿಯಮಿತವಾಗಿ ಸಭೆಗಳನ್ನು ಸಂಘಟಿಸಿ ಚಟುವಟಿಕೆಯನ್ನು ಮುನ್ನಡೆಸಲು ಆಸಕ್ತ ಶಿಕ್ಷಕರನ್ನೇ ಬಹಳವಾಗಿ ಅವಲಂಬಿಸಿದೆ. ಹೀಗೆ ಅಬು ರೋಡ್ ಬ್ಲಾಕ್‌ನಲ್ಲಿ ವಿಟಿಎಫ್ ಅನ್ನು ಸಂಘಟಿಸುವ ಹಾಗೂ ಮುನ್ನಡೆಸುವ ಮುಂದಾಳ್ತನದ ಜವಾಬ್ದಾರಿಯನ್ನು

ಹೊತ್ತುಕೊಂಡವರಲ್ಲಿ ಶಂಕರ್ ಒಬ್ಬರು. ಕಮಲೇಶ್ ಕೇವರ್ಲಿಯ ಎಲ್ಆರ್‌ಸಿಗೆ ನಿಯಮಿತವಾಗಿ ಹೋಗುತ್ತಾರೆ. ಇಲ್ಲಿ ಹಮ್ಮಿಕೊಳ್ಳುವ ಗಣಿತಶಾಸ್ತ್ರದ ಕಾರ್ಯಾಗಾರಗಳಲ್ಲಿ ಕೇವರ್ಲಿಯ ಸುತ್ತಮುತ್ತಲಿನ ಶಿಕ್ಷಕರು ಸ್ವಯಂಪ್ರೇರಿತರಾಗಿ ಭಾಗವಹಿಸುತ್ತಾರೆ. ಈ ಕಾರ್ಯಾಗಾರಗಳಲ್ಲಿ ಭಾಗವಹಿಸಲು ಕಮಲೇಶ್‌ಗೆ ತುಂಬಾ ಆಸಕ್ತಿಯಿದೆ. "ನನ್ನ ಮಕ್ಕಳು ವೇಗವಾಗಿ ಬೆಳೆಯುತ್ತಿದ್ದಾರೆ" ಎಂದು ಕಮಲೇಶ್ ನಗುತ್ತಲೇ ಹೇಳಿದರು. ಮೂವರು ಮಕ್ಕಳಲ್ಲಿ ದೊಡ್ಡವಳು ಎಂಸಿಎ, ಮಧ್ಯದವಳು 12ನೆಯ ಹಾಗೂ ಕೊನೆಯವ ಎಂಟನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ.

ಕೋಟಿಯಫಲಿ ಬಲು ಶಾಂತವಾದ ಊರು. ಇದು ತಮ್ಮ ಮಕ್ಕಳು ಸುರಕ್ಷಿತವಾಗಿದ್ದಾರೆ, ಚೆನ್ನಾಗಿ ಕಲಿಯುತ್ತಿದ್ದಾರೆ ಎನ್ನುವ ಭರವಸೆಯಿಂದ ನೆಲೆಸಿರುವ ಶಾಂತಿ. ಆವೇಗವಿಲ್ಲದ ಲಯಬದ್ಧತೆ ಈ ಸ್ಥಳದ ವಿಶಿಷ್ಟ ಗುಣಲಕ್ಷಣ. ಬಿಸಿಯೂಟದ ಜತೆಗೆ ಮಕ್ಕಳಿಗೆ ಹಣ್ಣು ಕೂಡಾ ನೀಡಿದ್ದನ್ನು ಗಮನಿಸಿದ ನಾವು ಶಂಕರ್ ಅವರನ್ನು ಈ ಬಗ್ಗೆ ಕೇಳಿದೆವು. ನಮ್ಮನ್ನು ಬೀಳ್ಕೊಡಲು ಮುಂಬಾಗಿಲವರೆಗೆ ಬಂದ ಅವರು, ಮಕ್ಕಳಿಗೆ ಪ್ರತಿ ಗುರುವಾರ ಸ್ಥಳೀಯ ಸ್ವಯಂಸೇವಾ ಸಂಘಟನೆಯೊಂದು ಹಣ್ಣು ನೀಡುತ್ತಿದೆ, ಆದರೆ ತಾವು ಇದಕ್ಕಾಗಿ ಸಂಘಟನೆಯವರನ್ನು ಕೇಳಿರಲಿಲ್ಲ ಎಂದರು. ಇದು ಕೋಟಿಯಫಲಿಯ ಸರ್ಕಾರಿ ಪ್ರಾಥಮಿಕ ಶಾಲೆಯು ಜನಮನದಲ್ಲಿ ಉಂಟುಮಾಡಿರುವ ಸದ್ಭಾವನೆಯ ಒಸರು.

# 5

## ಅಡೆತಡೆಗಳನ್ನು ಲೆಕ್ಕಿಸದ ಧೀರರು

ಈ ಸಂಕಲನದಲ್ಲಿನ ಎಲ್ಲ ಶಿಕ್ಷಕರೂ ಧೀರರೇ – ವೈಯಕ್ತಿಕ ಸಾಧಕರಾಗಿ, ಒಂದು ತಂಡವಾಗಿ ಇಲ್ಲವೇ ತಂಡದ ನಾಯಕರಾಗಿ ಧೀರರೇ. ಹೀಗಿದ್ದರೂ ಇಂಥ ಕೆಲವರನ್ನು ಮಾತ್ರ ಗುರುತಿಸಲು ಪ್ರತ್ಯೇಕವಾದ ಒಂದು ವಿಭಾಗವನ್ನು ನಾನೇಕೆ ಸೃಷ್ಟಿಸಬೇಕಿತ್ತು? ಪ್ರಾಮಾಣಿಕವಾಗಿ ಹೇಳಬೇಕೆಂದರೆ, ನಾನು ಕಥನಗಳನ್ನು ನನಗನ್ನಿಸಿದ ಹಲವು ವಿಭಾಗಗಳಲ್ಲಿ ಸೂಕ್ತ ಎಂದು ಸೇರಿಸುತ್ತಿರುವಾಗ, ಕೆಲವು ಶಿಕ್ಷಕರು ಮತ್ತು ಅವರ ಕಥೆಗಳನ್ನು ಗಮನಿಸಿದರೆ, ಅವರನ್ನು ಹಾಗೆ ಸೇರಿಸಲು ಆಗಲಿಲ್ಲ. ಈ ವಿಭಾಗದಲ್ಲಿ ಅವರಿಗೆ ಜಾಗ ಸಿಕ್ಕಿತು ಎಂದು ಯೋಚಿಸುತ್ತಿರುವಾಗಲೇ, ಕೆಲವು ವಿಶಿಷ್ಟತೆಗಳಿಂದಾಗಿ ಇದು ಸರಿಯಿಲ್ಲ ಎನ್ನಿಸಿಬಿಡುತ್ತಿತ್ತು: ಯಾವುದೋ ಒಂದು ವಿಭಾಗದಲ್ಲಿ ಕಟ್ಟಿ ಹಾಕುವುದು ಸಾಧ್ಯವಾಗಲಿಲ್ಲ. ವೈಯಕ್ತಿಕ ಅಪಾಯಗಳನ್ನು ಎದುರು ಹಾಕಿಕೊಂಡ ಶಿಕ್ಷಕರನ್ನು, ವಲಸಿಗ ಪೋಷಕರ ಮಕ್ಕಳಿಗೋಸ್ಕರ ರಾತ್ರಿ ವೇಳೆ ಶಾಲಾ ಕೊಠಡಿಯನ್ನು ಛತ್ರವಾಗಿ ಪರಿವರ್ತಿಸಿ ಅವರ ಶಿಕ್ಷಣಕ್ಕೆ ತೊಂದರೆಯಾಗದಂತೆ ನೋಡಿಕೊಂಡ ಶಿಕ್ಷಕರನ್ನು ಯಾವ ವಿಭಾಗದಲ್ಲಿ ಸೇರಿಸುವುದು? ಸೋದರರನ್ನು ನೋಡಿಕೊಳ್ಳಲೆಂದು ಪೋಷಕರು ಗ್ರಾಮಕ್ಕೆ ಕಳಿಸಿದ ಹೆಣ್ಣುಮಕ್ಕಳನ್ನು ಜಿಲ್ಲಾ ಕಬಡ್ಡಿ ಸ್ಪರ್ಧೆಯಲ್ಲಿ ಛಾಂಪಿಯನ್‌ಗಳಾಗಿಸಿದ ಹೆಣ್ಣು ಮಕ್ಕಳ ಶಾಲೆಯ ಮುಖ್ಯ ಶಿಕ್ಷಕ ಯಾವ ವಿಭಾಗಕ್ಕೆ ಸೇರುತ್ತಾರೆ? ಶೂನ್ಯದಿಂದ ಶೇ. 100ರಷ್ಟು ಹಾಜರಿ ಸಾಧಿಸಿದ ಶಿಕ್ಷಕನನ್ನು, ಮಕ್ಕಳ ಕಲಿಕೆಗೆ ಸಂಬಂಧಿಸಿದಂತೆ ಬಾಹ್ಯ ಮೌಲ್ಯಮಾಪಕರಿಂದ ಜಿಲ್ಲೆಯಲ್ಲೇ ಅತ್ಯುತ್ತಮ ಶಾಲೆ ಎನಿಸಿಕೊಂಡ ಮುಖ್ಯ ಶಿಕ್ಷಕನನ್ನು ಎಲ್ಲಿ ಸೇರಿಸೋಣ? ಕಳೆದ 17 ವರ್ಷಗಳಿಂದ ಗ್ರಾಮದ ಪ್ರತಿಯೊಂದು ಮಗುವೂ ಹೈಸ್ಕೂಲ್ ಶಿಕ್ಷಣ ಪೂರ್ತಿಗೊಳಿಸುವಂತೆ ನೋಡಿಕೊಂಡ ಶಿಕ್ಷಕನನ್ನು ಯಾವ ವಿಭಾಗಕ್ಕೆ ಸೇರಿಸಬೇಕು?

ಹಲವು ವರ್ಷಗಳ ಹಿಂದೆ ನಾವು ಪ್ರಾರಂಭಿಸಿದ ಕಲಿಕಾ ಖಾತ್ರಿ ಕಾರ್ಯಕ್ರಮ (ಎಲ್‌ಜಿಪಿ) ಎಂಬ ಚಿಂತನೆಗೆ ಪ್ರೇರಣೆ ದೊರಕಿದ್ದು ಗ್ರಾಮೀಣ ಶಾಲೆಗಳ ಭೇಟಿಯಲ್ಲಿ ನೋಡಿದ ವಿದ್ಯಮಾನಗಳು. ಭಾರಿ ಅಡೆತಡೆಗಳನ್ನು ದಾಟಿ ಮಾದರಿಯಾಗಿ ಕೆಲಸ ಮಾಡಿದ ಕೆಲವು ಶಾಲೆಗಳನ್ನೂ ಕೆಲವು ಶಿಕ್ಷಕರನ್ನೂ ನಾವು ನೋಡಿದೆವು. ಒಂದೇ ರೀತಿಯ ಪರಿಸರವೂ ಒಂದೇ ರೀತಿಯ ಸವಾಲುಗಳೂ ಇದ್ದಾಗ ಒಂದು ಮೈಲಿಗಿಂತ ಕಡಿಮೆ ಅಂತರದಲ್ಲಿರುವ ಎರಡು ಶಾಲೆಗಳಲ್ಲಿ ಒಂದು ಶಾಲೆ ಅಸಾಧಾರಣ ಸಾಧನೆ

ಮಾಡಿದರೆ, ಇನ್ನೊಂದು ಶಾಲೆ ಕೈಚೆಲ್ಲಿದ್ದು ಕೂಡ ಇದೆ. ಎಲ್ಲ ಅಡೆತಡೆಗಳನ್ನು ನಿರ್ಲಕ್ಷಿಸಿ, ಸಮುದಾಯದ ಎಲ್ಲ ಮಕ್ಕಳೂ ಶಾಲೆಗೆ ದಾಖಲಾತಿಯಾಗಬೇಕು; ಎಲ್ಲ ಮಕ್ಕಳೂ ದಿನವೂ ಶಾಲೆಗೆ ಬರಬೇಕು ಮತ್ತು ಕಲಿಯಬೇಕು ಎಂದು ಹೋರಾಡಿ, ಸಾಧನೆ ಮಾಡಿದ ಶಿಕ್ಷಕರು ಹೊಂದಿದ್ದ ಕೆಚ್ಚಾದರೂ ಯಾವ ರೀತಿಯದ್ದು? ನಾವು ಎಲ್‌ಜಿಪಿಯನ್ನು ಅನಾವರಣಗೊಳಿಸುತ್ತಿದ್ದಂತೆ, ಈ ಶಿಕ್ಷಕರು ಅಸಾಧಾರಣ ವ್ಯಕ್ತಿಗಳು ಮಾತ್ರವಲ್ಲದೆ, ಒಂದು ಬಗೆಯ ಅತ್ಯುತ್ಸಾಹದ ವಿಕ್ಷಿಪ್ತರೂ ಹೌದು ಎನ್ನುವುದನ್ನು ಕಂಡುಕೊಂಡೆವು. ಸೋಲುತ್ತೇವೆ ಎನ್ನುವ ಭಯ, ಅಧಿಕಾರಿಗಳ ಸಿಟ್ಟಿಗೆ ಗುರಿಯಾಗುತ್ತೇವೆ ಅಥವಾ ಅಧಿಕಾರಿಗಳು ಶತ್ರುತ್ವ ಬೆಳೆಸಿಕೊಳ್ಳುತ್ತಾರೆ ಎನ್ನುವುದೆಲ್ಲ ಅವರ ಮನಸ್ಸಿಗೆ ಬರಲೇ ಇಲ್ಲವೇನೋ? ಈ ವಿಚಾರ ಅಂದಿನಿಂದಲೂ ನನ್ನಲ್ಲಿ ಉಳಿದುಬಿಟ್ಟಿತ್ತು. ಪ್ರಾಯಶಃ ಸುಪ್ತಪ್ರಜ್ಞೆಯ ಕೋಶದಲ್ಲಿ ಬಚ್ಚಿಟ್ಟುಕೊಂಡಿದ್ದು ಈ ವಿಭಾಗದ ಸೃಷ್ಟಿಗೆ ಕಾರಣವಾಗಿರಬಹುದು.

ತಾಯಿ ಐಸಿಯುನಲ್ಲಿ ಒಂದು ತಿಂಗಳಿನಿಂದ ಇದ್ದರೂ, ಶಿಕ್ಷಕರೊಬ್ಬರು ಒಂದು ದಿನ ಕೂಡ ರಜೆ ಹಾಕಲಿಲ್ಲ; ಕೆಲಸಕ್ಕೆ ಮುನ್ನ ಹಾಗೂ ಮುಗಿದ ನಂತರ ಆಸ್ಪತ್ರೆಗೆ ಭೇಟಿ ಕೊಟ್ಟು ತಾಯಿಯ ಆರೈಕೆ ಮಾಡುತ್ತಿದ್ದರು. ಇನ್ನೊಬ್ಬ ಶಿಕ್ಷಕರ ಅವಧಿಯಲ್ಲಿ ಒಂದೇ ಒಂದು ಮಗು ಕೂಡ ಶಾಲೆಯನ್ನು ತೊರೆದಿರಲಿಲ್ಲ; ಶಾಲೆಯಿಂದ ಶಿಕ್ಷಣ ಮುಗಿಸಿದ ಎಲ್ಲ ಮಕ್ಕಳ ಹೆಸರೂ ಅವರಿಗೆ ನೆನಪಿತ್ತು. ಮುಂದೆ ಅವರೇನು ಓದಿದರು, ಏನು ಮಾಡುತ್ತಿದ್ದಾರೆ ಎನ್ನುವುದೂ ಅವರಿಗೆ ಗೊತ್ತಿತ್ತು. ಈ ಶಿಕ್ಷಕರನ್ನು ಏನೆಂದು ಕರೆಯೋಣ? ಧೀರರೆಂದೇ? ಅಸಾಧಾರಣ ಬುದ್ಧಿಶಾಲಿಗಳೆಂದೇ? ಅಥವಾ ಸಾಮಾನ್ಯರಾಗಿದ್ದೂ ನೈಜ, ಶ್ರದ್ಧಾವಂತ, ಧೈರ್ಯವಂತ ಜನರೆಂದೇ? ಅಸಾಧಾರಣ ಶಿಕ್ಷಕರೊಬ್ಬರ ಕುರಿತು ಗ್ರಾಮದ ಹಿರಿಯರೊಬ್ಬರು ಹೇಳಿದ ಮಾತು ನನಗೆ ಇನ್ನೂ ನೆನಪಿದೆ: "ಆಕೆ ಪ್ರಪಂಚದ ಅತ್ಯಂತ ಶ್ರೇಷ್ಠ ಶಿಕ್ಷಕಿ." ನಾನು ಆಕೆಯನ್ನು "ಪ್ರಪಂಚದ?" ಎಂದು ಕೇಳಿದಾಗ, ಆಕೆ ಪ್ರತಿಕ್ರಿಯಿಸಿದ್ದು "ನಮ್ಮ ಗ್ರಾಮವೇ ನಮಗೆ ಬಹುಮಟ್ಟಿಗೆ ಪ್ರಪಂಚವಿದ್ದಂತೆ."

---

## "ನನ್ನ ಶಾಲೆಯಲ್ಲಿನ ಕ್ರೀಡಾ ಸಂಸ್ಕೃತಿಯೇ ತರಗತಿಯಲ್ಲಿ ಸಮತೆ ಮತ್ತು ಪರಸ್ಪರ ಗೌರವವನ್ನು ಸಾಧ್ಯವಾಗಿಸಿದೆ"


### ಧರಮ್‌ವೀರ್ ಸಿಂಗ್ ಚೌಹಾಣ್

*ಸರ್ಕಾರಿ ಉನ್ನತ ಪ್ರಾಥಮಿಕ ಶಾಲೆ, ವಿಜಯರಾಮ್‌ಪುರ*

ಬಾಜ್ಪುರ ಬ್ಲಾಕ್ ಉಧಮ್‌ಸಿಂಗ್ ನಗರ ಜಿಲ್ಲೆ, ಉತ್ತರಾಖಂಡ್


---

ಧರಮ್‌ವೀರ್ ಸಿಂಗ್ ಚೌಹಾಣ್, ವಿಜಯರಾಮ್‌ಪುರದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗೆ ನವೆಂಬರ್ 2004ರಲ್ಲಿ ವರ್ಗಾವಣೆಯಾದರು. ಆಗ ಶಾಲೆ ಆರಂಭವಾಗಿ ಕೆಲವು ತಿಂಗಳು ಮಾತ್ರ ಕಳೆದಿತ್ತು. ಶಾಲೆಯಲ್ಲಿ ಇದ್ದುದು ಏಳು ಮಕ್ಕಳು ಹಾಗೂ ಮುಖ್ಯ ಶಿಕ್ಷಕ ಕೆ. ಎನ್. ಯಾದವ್. ಇಬ್ಬರೂ ಸೇರಿಕೊಂಡು ಅಕ್ಕಪಕ್ಕದ

ಗ್ರಾಮಸ್ಥರನ್ನು ಒಟ್ಟುಗೂಡಿಸಿ, ವರ್ಷದೊಳಗೆ 34 ಮಕ್ಕಳನ್ನು ದಾಖಲಿಸಿಕೊಳ್ಳುವಲ್ಲಿ ಯಶಸ್ವಿಯಾದರು. ಆದರೆ, ಶಾಲೆಯಲ್ಲಿ ಶೌಚಾಲಯ ಇಲ್ಲದಿದ್ದುದು ನಾಚಿಕೆಗೇಡಿನ ಸಂಗತಿಯಾಗಿತ್ತು. ವಿದ್ಯಾರ್ಥಿಗಳಲ್ಲಿ ಪ್ರಾಯಕ್ಕೆ ಬರುತ್ತಿದ್ದ ಹೆಣ್ಣುಮಕ್ಕಳೂ ಇದ್ದರು. ಯಾವುದೇ ಅನುದಾನದ ಸಾಧ್ಯತೆ ಇಲ್ಲವಾದ್ದರಿಂದ, ಧರಮ್‌ವೀರ್ ತಮ್ಮ ಜೇಬಿನಿಂದಲೇ ರೂ.5,500 ವೆಚ್ಚ ಮಾಡಿ, ಹೆಣ್ಣು ಮಕ್ಕಳಿಗಾಗಿ ತಾತ್ಕಾಲಿಕ ಶೌಚಾಲಯ ಕಟ್ಟಿಸಿದರು. ಶಾಲೆಗೆ 2007ರವರೆಗೆ ಯಾವುದೇ ಅನುದಾನ ಬರಲಿಲ್ಲ. ಹೀಗಾಗಿ ಧರಮ್‌ವೀರ್ ಮೂಲಸೌಲಭ್ಯದ ದುರಸ್ತಿ ಹಾಗೂ ನಿರ್ವಹಣೆಗೆ ತಮ್ಮ ಹಣವನ್ನೇ ಖರ್ಚು ಮಾಡಬೇಕಾಯಿತು. ಗ್ರಾಮ ಹಾಗೂ ಸುತ್ತಮುತ್ತಲಿನ ಹಳ್ಳಿಗಳ ಆರ್ಥಿಕ ಪರಿಸ್ಥಿತಿ ಅಷ್ಟೇನೂ ಕೆಟ್ಟದ್ದಾಗಿರಲಿಲ್ಲ. ಗ್ರಾಮಸ್ಥರು ಕೃಷಿ ಕಾರ್ಮಿಕರಾಗಿದ್ದರು. ಸಮುದಾಯದಲ್ಲಿ ಪರಿಶಿಷ್ಟ ಜಾತಿ/ಒಬಿಸಿ ವರ್ಗದವರಿದ್ದು, ಇವರಲ್ಲಿ ಶೇ.20ರಷ್ಟು ಮಂದಿ ಬುಕ್ಸಾ ಬುಡಕಟ್ಟಿನವರು. ಬುಕ್ಸಾ ಬುಡಕಟ್ಟಿನವರು ಈ ಹಿಂದೆ ಜಮೀನು ಹೊಂದಿದ್ದು, ಈಗ ಅದನ್ನೆಲ್ಲ ಅವರು ಕಳೆದುಕೊಂಡು ಬಿಟ್ಟಿದ್ದಾರೆ ಎನ್ನುತ್ತಾರೆ ಧರಮ್‌ವೀರ್. ಮದ್ಯಪಾನದ ಚಟ ಸಮುದಾಯದ ಸಮಸ್ಯೆಗಳನ್ನು ದ್ವಿಗುಣಗೊಳಿಸಿದೆ. ಪೋಷಕರಿಗೆ ಮಕ್ಕಳ ವಿದ್ಯಾಭ್ಯಾಸದಲ್ಲಿ ಯಾವುದೇ ಆಸಕ್ತಿ ಇರಲಿಲ್ಲ. ಆದರೆ, ಕಾಲಕಳೆದಂತೆ ಧರಮ್‌ವೀರ್ ಮತ್ತು ಯಾದವ್ ಒಟ್ಟಾಗಿ ಮಕ್ಕಳೊಡನೆ ದೃಢ ಹಾಗೂ ನೇರ ಸಂಬಂಧ ಬೆಳೆಸಿದರು. ಇದು ಸಾಧ್ಯವಾಗಿದ್ದು, ಶಾಲೆಯಲ್ಲಿ ಕ್ರೀಡೆಗೆ ಒತ್ತು ನೀಡುವಂತೆ ಮಾಡಿದ ಧರಮ್‌ವೀರ್ ಅವರ ಚತುರ ನಡೆಯಿಂದ. ಈಗ ಯಾರಾದರೂ ಶಾಲೆಗೆ ಭೇಟಿ ನೀಡಿದರೆ, ಮಕ್ಕಳು ಕ್ರೀಡೆಯಲ್ಲಿ ಶಾಲೆಯ ಸಾಧನೆ ಬಗ್ಗೆ ಮತ್ತು ಶಾಲೆಯ ಬಗೆಗೆ ಹೆಮ್ಮೆಪಟ್ಟುಕೊಳ್ಳುವುದನ್ನು ಕಣ್ಣಾರೆ ನೋಡಬಹುದು.

ಧರಮ್‌ವೀರ್‌ಗೆ ಈಗ 52 ವರ್ಷ. ಅವರು ಶಿಕ್ಷಣ ಇಲಾಖೆಗೆ ಸೇರಿದಾಗ ವಯಸ್ಸು 26. ತಮ್ಮ ಶಿಕ್ಷಕ ವೃತ್ತಿಯ ಮೊದಲ ಎಂಟು ವರ್ಷ ಬಾಜ್ಪುರ ಬ್ಲಾಕ್‌ನ ಪ್ರಾಥಮಿಕ ಶಾಲೆಯೊಂದರಲ್ಲಿ ಕೆಲಸ ಮಾಡಿದ ಬಳಿಕ, 1999ರಲ್ಲಿ ಗದರ್‌ಪುರ್ ಬ್ಲಾಕ್‌ನ ಖೇಮ್‌ಪುರ ಪ್ರಾಥಮಿಕ ಶಾಲೆಗೆ ವರ್ಗಾವಣೆಗೊಂಡರು. "ಖೇಮ್‌ಪುರ ನನ್ನ ಬದುಕಿನಲ್ಲಿ ತಿರುವು ತಂದ ಶಾಲೆ" ಎನ್ನುತ್ತಾರೆ ಧರಮ್‌ವೀರ್. ಅಲ್ಲಿ ಅವರಿಗೆ ಮುಖ್ಯ ಶಿಕ್ಷಕ ರಮೇಶ್ ಸಿಂಗ್ ಅವರ ಜೊತೆಗೂಡಿ ಕೆಲಸ ಮಾಡುವ ಅವಕಾಶ ಸಿಕ್ಕಿತು. "ರಮೇಶ್ ಸಿಂಗ್ ಅವರಿಗೆ ಕ್ರೀಡೆಯಲ್ಲಿ ತೀವ್ರ ಆಸಕ್ತಿ ಇತ್ತು. ಅವರು ಮಕ್ಕಳನ್ನು ನಾನಾ ಕ್ರೀಡಾ ಸ್ಪರ್ಧೆಗಳಿಗೆ ಕರೆದುಕೊಂಡು ಹೋಗುತ್ತಿದ್ದಾಗ ನಾನೂ ಜೊತೆಗೆ ಹೋಗುತ್ತಿದ್ದೆ. ನಾನು ಆಟಗಳತ್ತ ಆಕರ್ಷಿತನಾದೆ; ವಿದ್ಯಾರ್ಥಿಗಳ ಅಭಿವೃದ್ಧಿಯಲ್ಲಿ ಆಟಗಳು ಮಹತ್ವದ ಪಾತ್ರವನ್ನು ವಹಿಸಬಲ್ಲವೆಂದು ನನಗೆ ಮನವರಿಕೆಯಾಯಿತು. ರಮೇಶ್ ಸಿಂಗ್ ಅವರ ಜತೆಗಿದ್ದ ಐದು ವರ್ಷಗಳನ್ನು ನಾನು ಎಂದೆಂದಿಗೂ ಮರೆಯಲಾರೆ" ಎಂದವರು ಸ್ಮರಿಸುತ್ತಾರೆ.

ಹೀಗಾಗಿ, ವಿಜಯರಾಮ್‌ಪುರ ಶಾಲೆಗೆ ಬಂದ ಧರಮ್‌ವೀರ್ ಕ್ರೀಡೆಗೆ ಉತ್ತೇಜನ ನೀಡಿದ್ದರಲ್ಲಿ ಯಾವುದೇ ಆಶ್ಚರ್ಯ ಇರಲಿಲ್ಲ. ಮಕ್ಕಳು ಕಬಡ್ಡಿ, ಖೋಖೋ ಹಾಗೂ ಓಟದಲ್ಲಿ ಹೆಚ್ಚು ಪ್ರತಿಭೆ ಹೊಂದಿದ್ದರು. "ಮಕ್ಕಳು ಬಲು ಪ್ರತಿಭಾವಂತರಾಗಿದ್ದರು.

ಅವರಿಗೆ ಪರಿಣತರಿಂದ ತರಬೇತಿ ಅಗತ್ಯವಿತ್ತು. ಬಾಜ್ಪುರ ಸಕ್ಕರೆ ಕಾರ್ಖಾನೆಯಲ್ಲಿ ದೈಹಿಕ ಶಿಕ್ಷಣ ತಜ್ಞರೊಬ್ಬರು ಇದ್ದಾರೆ ಎಂದು ನನಗೆ ಗೊತ್ತಾಯಿತು. ನಾನು ಅವರನ್ನು ಭೇಟಿಯಾಗಿ ನಮ್ಮ ವಿದ್ಯಾರ್ಥಿಗಳಿಗೆ ತರಬೇತಿ ನೀಡಿ ಎಂದು ಮನವೊಲಿಸಿದೆ. ಪ್ರತಿದಿನ ಬೈಕ್‌ನಲ್ಲಿ ಅವರನ್ನು ಶಾಲೆಗೆ ಕರೆತಂದು, ಅವರು ಮಧ್ಯಾಹ್ನ 3ರಿಂದ ಸಂಜೆ 7 ಗಂಟೆ ವರೆಗೆ ತರಬೇತಿ ನೀಡಿದ ಬಳಿಕ ಕರೆದೊಯ್ದು ಮನೆಗೆ ಬಿಟ್ಟು ಆನಂತರ ನನ್ನ ಮನೆಗೆ ಹೋಗುತ್ತಿದ್ದೆ. ಪರಿಣಾಮ ಶೀಘ್ರವೇ ಗೋಚರವಾಗತೊಡಗಿತು. ಮಕ್ಕಳು ಕ್ಲಸ್ಟರ್ ಮಟ್ಟದಲ್ಲಿ ಗೆದ್ದು, ಬ್ಲಾಕ್‌ನ ಹಂತದಲ್ಲಿ ಸ್ಪರ್ಧಿಸುವಂತಾದರು." ಆ ಮೊದಲ ದಿನಗಳಲ್ಲೇ ಒಮ್ಮೆ ಧರಮ್‌ವೀರ್ ಅವರು ಕಾಶಿಪುರದಲ್ಲಿ ನಡೆಯುತ್ತಿದ್ದ ಕ್ರೀಡಾಕೂಟಕ್ಕೆ ಶಾಲೆಯ 27 ಮಕ್ಕಳನ್ನು ಕರೆದೊಯ್ದರು. ಅವರು ತಮ್ಮ ಸ್ವಂತ ಹಣದಿಂದಲೇ ಬಾಡಿಗೆಗೆ ಬಸ್ ವ್ಯವಸ್ಥೆ ಮಾಡಿದರು. ಮಕ್ಕಳು ಅಲ್ಲಿ ಹಲವು ಬಹುಮಾನಗಳನ್ನು ಗೆದ್ದರು. ಊರಿನವರಿಗೆ ವಿಷಯ ತಿಳಿದು, ತಮ್ಮ ಮಕ್ಕಳಿಗೆ ಶಾಲೆಯಲ್ಲಿ ನೀಡುತ್ತಿರುವ ಪ್ರೋತ್ಸಾಹವನ್ನೂ ತರಬೇತಿಯನ್ನೂ ನೋಡಿ ಆಶ್ಚರ್ಯ ಪಟ್ಟರು; ಸಂತಸ ಪಟ್ಟರು. ಶಾಲೆಯ ಶಿಕ್ಷಕರ ಬಗ್ಗೆ ಸಮುದಾಯಕ್ಕೆ ಗೌರವ ಮೂಡಿತು. ಶಾಲೆಗೂ ಸಮುದಾಯಕ್ಕೂ ನಡುವೆ ಸುಮಧುರ ಬಾಂಧವ್ಯದ ಬೆಸುಗೆಯನ್ನು ಧರಮ್‌ವೀರ್ ಸಿಂಗ್ ಹಾಕಿದ್ದರು. ಈಗ ವಿಜಯರಾಮ್‌ಪುರ ಶಾಲೆಯಲ್ಲಿ ಕ್ರೀಡೆ ಸಾಂಸ್ಥಿಕ ಸ್ವರೂಪವನ್ನು ಪಡೆದಿದೆ. ಪ್ರತಿ ಬ್ಯಾಚ್‌ನ ಮಕ್ಕಳು ಕ್ರೀಡೆಯಲ್ಲಿನ ಸಂತೋಷವನ್ನು ಮುಂದಿನ ಬ್ಯಾಚ್‌ಗೆ ದಾಟಿಸುತ್ತಿದ್ದಾರೆ. ವರ್ಷದಿಂದ ವರ್ಷಕ್ಕೆ ಶಾಲೆಯಲ್ಲಿನ ಕ್ರೀಡಾ ಸಂಪ್ರದಾಯವು ಗಟ್ಟಿಗೊಳ್ಳುತ್ತಿದೆ. 'ಬಚ್ಚೇ ಅಬ್ ಖುದ್ ಹೀ ಸೀಟೀ ಬಜಾ ಲೇತೇ ಹೆ' (ಈಗ ಮಕ್ಕಳೇ ಖುದ್ದಾಗಿ ಸೀಟಿ ಹೊಡೆಯುತ್ತಾರೆ). ಮಕ್ಕಳು ಆಟದ ನಿಯಮಗಳನ್ನು ಸ್ಪಷ್ಟವಾಗಿ ತಿಳಿದುಕೊಂಡಿದ್ದಾರೆ ಎಂದು ಧರಮ್‌ವೀರ್ ಹೇಳಿದ್ದು ಹೀಗೆ. ಕಳೆದ ಮೂರು ವರ್ಷಗಳಲ್ಲಿ ವಿಜಯರಾಮ್‌ಪುರ ಶಾಲೆ ಬ್ಲಾಕ್‌ನ ಮಟ್ಟದಲ್ಲಿ 200 ಮೀಟರ್ ಹಾಗೂ 400 ಮೀಟರ್ ಓಟ, ಕಬಡ್ಡಿ ಹಾಗೂ ಖೋಖೋದಲ್ಲಿ ಚಾಂಪಿಯನ್ ಆಗಿದೆ. ಆದರೆ, ಈ ವೇಗ ಕಡಿಮೆಯಾಗಬಾರದು ಎಂದು ಧರಮ್‌ವೀರ್‌ಗೆ ಗೊತ್ತಿದೆ. ಅವರು ಈಗ ಶಾಲೆಯ ಕ್ರೀಡಾ ಚಟುವಟಿಕೆಗಳ ಆಡಳಿತದಿಂದ ಹಿಂದೆ ಸರಿದಿದ್ದರೂ, ಮಕ್ಕಳಿಗೆ ಕಠಿಣ ಕ್ರೀಡಾ ವೇಳಾಪಟ್ಟಿಯನ್ನು ನಿಗದಿಗೊಳಿಸಿ, ತರಬೇತಿ ನಿಲ್ಲದೆ ಮುಂದುವರಿಯಬೇಕೆಂದು ಕಟ್ಟುಪಾಡು ಮಾಡಿದ್ದಾರೆ. ಧರಮ್‌ವೀರ್ ಹಾಗೂ ಮಕ್ಕಳು ಈಗಲೂ ಚಳಿಗಾಲದಲ್ಲೂ ಸಂಜೆ 7 ಗಂಟೆವರೆಗೆ ಶಾಲೆಯಲ್ಲಿ ಇರುತ್ತಾರೆ, ಹಲವು ವರ್ಷಗಳಿಂದ ಪಾಲಿಸಿಕೊಂಡು ಬಂದಿರುವ ಈ ಪದ್ಧತಿ ಮುಂದುವರಿದೇ ಇದೆ. ಕ್ರೀಡಾ ಸ್ಪರ್ಧೆಯಲ್ಲಿ ಪಾಲ್ಗೊಳ್ಳುವ ಮಕ್ಕಳಿಗೆ ಹಾಲು ಹಾಗೂ ಆಹಾರ ಪದಾರ್ಥಗಳನ್ನು ತಮ್ಮದೇ ಹಣದಿಂದ ಧರಮ್‌ವೀರ್ ಪೂರೈಸುತ್ತಾರೆ. ಇವರಿಂದ ಸ್ಫೂರ್ತಿ ಪಡೆದ ಅವರ ಸಹೋದ್ಯೋಗಿಗಳು, ತಾವೂ ಕೈ ಜೋಡಿಸುತ್ತಿದ್ದಾರೆ. ಈಗ ಮಕ್ಕಳನ್ನು ಕ್ರೀಡಾಕೂಟಗಳಿಗೆ ಕರೆದೊಯ್ಯಲು ಬೇರೆ ಶಿಕ್ಷಕರೂ ಮುಂದೆ ಬರುತ್ತಿದ್ದಾರೆ. ಧರಮ್‌ವೀರ್ ಹೇಳುತ್ತಾರೆ, "ನನಗೆ ಸಹಕಾರ ಕೊಟ್ಟರೆ ಅಷ್ಟೇ ಸಾಕು."

ಶಾಲೆಗೆ ಸೇರುವ ಮಕ್ಕಳ ಸಂಖ್ಯೆ ವರ್ಷದಿಂದ ವರ್ಷಕ್ಕೆ ಹೆಚ್ಚಾಗಿದೆ. 2005ರಲ್ಲಿದ್ದ

ವಿದ್ಯಾರ್ಥಿಗಳ ಸಂಖ್ಯೆ 2008ರಲ್ಲಿ 59, 2016ರಲ್ಲಿ 134 ಆಗಿದೆ. ಇದರ ಹಿಂದೆ ಕಠಿಣ ಶ್ರಮ ಹಾಗೂ ಕೊಂಚ ಜಾಣತನ ಇದೆ. "ಆರಂಭದ ವರ್ಷಗಳಲ್ಲಿ ಇಲ್ಲಿನ ಗ್ರಾಮಗಳಲ್ಲಿ ನಾನು ಸುತ್ತಾಡಿರುವುದರಿಂದ, ನನಗೆ ಇಲ್ಲಿನ ಪರಿಸ್ಥಿತಿ ಗೊತ್ತಿದೆ. ಪ್ರಾಥಮಿಕ ಶಾಲೆಯಿಂದ ಮಕ್ಕಳು 5 ಕಿಲೋಮೀಟರ್ ದೂರದ ಶಿವಪುರಿ ಕಿರಿಯ ಕಾಲೇಜ್ (ಉತ್ತರಾಖಂಡ್‌ದಲ್ಲಿ ಉನ್ನತ ಪ್ರಾಥಮಿಕ ಶಾಲೆಗಳನ್ನು ಜೂನಿಯರ್ ಕಾಲೇಜು ಎಂದು ಕರೆಯುತ್ತಾರೆ)ಗೆ ಹೋಗುತ್ತಾರೆ. ಅಷ್ಟು ದೂರ ಹೋಗುವ ಬದಲು ಹತ್ತಿರವಿರುವ, ಹೆಚ್ಚು ಅನುಕೂಲಕರವಾದ ಹಾಗೂ ಉತ್ತಮ ಕ್ರೀಡಾ ಸೌಲಭ್ಯವಿರುವ ವಿಜಯರಾಮ್‌ಪುರ ಶಾಲೆಗೆ ಸೇರಿಸಿ ಎಂದು ನಾನು ಪೋಷಕರನ್ನು ಪುಸಲಾಯಿಸಿ, ಒಪ್ಪಿಸಿದೆ. ನನ್ನ ಜೊತೆಗೆ ಇತರ ಶಿಕ್ಷಕರೂ ಬಂದರು. ಮಕ್ಕಳಿಗೆ ನಾವು ನಮ್ಮ ಕೈಯಲ್ಲಿ ಸಾಧ್ಯವಿರುವಷ್ಟು ಸೌಲಭ್ಯಗಳನ್ನು ಒದಗಿಸಬೇಕು ಎನ್ನುವುದು ನನ್ನ ನಂಬಿಕೆ" ಎನ್ನುತ್ತಾರೆ ಅವರು.

ಆರಂಭದಿಂದಲೂ ಗಣಿತಶಾಸ್ತ್ರ ಕಲಿಸುತ್ತಿದ್ದ ಧರಮ್‌ವೀರ್, 2015ರಿಂದ ವಿಜ್ಞಾನವನ್ನೂ ಕಲಿಸಲು ಆರಂಭಿಸಿದರು. ಸೇವೆಗೆ ಸೇರುವ ಮುನ್ನ ವಿಜ್ಞಾನ ಇಂಟರ್‌ಮೀಡಿಯೇಟ್ ಹಾಗೂ ಬಿಟಿಸಿ ಮಾಡಿದ ಅವರು, ಅನಂತರ ಕೆಲಸ ಮಾಡುತ್ತಲೇ ಬಿಎ ಮತ್ತು ಎಂಎ (ಸಮಾಜಶಾಸ್ತ್ರ) ಮುಗಿಸಿದರು. ಕಲಿಕೆಯಲ್ಲಿ ತೀವ್ರ ಆಸಕ್ತಿಯಿದ್ದ ಅವರು 2005–06ರಲ್ಲಿ ಎಲ್‌ಜಿಪಿ ಆರಂಭವಾದಾಗ ಅದರೊಡನೆ ಸಂಪರ್ಕ ಬೆಳೆಸಿದರು. ಕಂಠಪಾಠದ ಬದಲು ಪರಿಕಲ್ಪನೆಗಳ ಅರ್ಥಮಾಡಿಕೊಳ್ಳುವಿಕೆ ಆಧರಿತ ಕಲಿಕೆಯ ಪ್ರಯೋಜನಗಳನ್ನು ತಿಳಿದುಕೊಂಡರು. ಎಲ್‌ಜಿಪಿ ಕಾರ್ಯಕ್ರಮವು ಪ್ರಾಥಮಿಕ ಶಾಲೆ ಹಂತದಲ್ಲಿನ ಪರಿಕಲ್ಪನಾತ್ಮಕ ಗ್ರಹಿಕೆಯನ್ನು ಅಳೆಯುವ ಪ್ರಶ್ನೆಗಳ ಪ್ರಯೋಜನಗಳನ್ನು ಅವರಿಗೆ ಪರಿಚಯಿಸಿತು. ಧರಮ್‌ವೀರ್ ಈ ಉಪಕ್ರಮವನ್ನು ಹಿರಿಯ ಪ್ರಾಥಮಿಕ ಶಾಲಾ ಪಠ್ಯಕ್ರಮಕ್ಕೆ ವಿಸ್ತರಿಸಿದರು. ಗಣಿತಶಾಸ್ತ್ರದ ತರಗತಿಗಳಿಗೆ ಇಂಥ ಪ್ರಶ್ನೆಗಳನ್ನು ಸಿದ್ಧಗೊಳಿಸಿದರು. ಶಾಲಾವಧಿಯನ್ನೂ ಮೀರಿ ಕೆಲಸಮಾಡಬಲ್ಲ ಅವರ ಉತ್ಸಾಹವನ್ನೂ ಬದ್ಧತೆಯನ್ನೂ ನೋಡಿದವರಿಗೆ ಅವರು ಬ್ಲಾಕ್ ಹಂತದಲ್ಲಿ ನಿಯಮಿತವಾಗಿ ನಡೆಯುವ ವಿಟಿಎಫ್‌ನಲ್ಲಿಯೂ ಸಕ್ರಿಯವಾಗಿ ಪಾಲ್ಗೊಂಡಿದ್ದು ಆಶ್ಚರ್ಯ ಉಂಟುಮಾಡಲಿಲ್ಲ. ಅಷ್ಟು ಮಾತ್ರವಲ್ಲದೆ, ಜಿಲ್ಲೆಯಲ್ಲಿ ಆಯೋಜಿಸಿದ್ದ ಇತರೇ ಹಲವು ಶಿಕ್ಷಕ ಅಭಿವೃದ್ಧಿ ಕಾರ್ಯಕ್ರಮಗಳಲ್ಲೂ ಅವರು ಭಾಗವಹಿಸಿದ್ದಾರೆ. ದಿನೇಶ್‌ಪುರದಲ್ಲಿ ನಡೆದ ಗಣಿತ ಕಾರ್ಯಾಗಾರವನ್ನು ಅವರು ತುಂಬಾ ಮೆಚ್ಚಿಕೊಂಡರು. "ಪರಿಕಲ್ಪನೆಗಳನ್ನು ಇನ್ನಷ್ಟು ಚೆನ್ನಾಗಿ ವಿವರಿಸಲು ಅಗತ್ಯವಾದ ಬೋಧನೆ–ಕಲಿಕೆಯ ಸಾಧನಗಳನ್ನು ಸೃಷ್ಟಿಸಲು ಅಗತ್ಯವುಳ್ಳ ಪ್ರಾಯೋಗಿಕ ತಿಳಿವಳಿಕೆಯನ್ನು ಈ ತರಬೇತಿ ಕೊಟ್ಟಿತು" ಎನ್ನುತ್ತಾರೆ ಅವರು. ಅದೇ ರೀತಿ ವಿಜ್ಞಾನದ ಚಳಿಗಾಲದ ಸನಿವಾಸ ಕಾರ್ಯಾಗಾರ ಉಪಯುಕ್ತವಾಗಿತ್ತು ಎಂದೂ ಹೇಳುತ್ತಾರೆ.

"ಪಟೋಟಿ ಹಿರಿಯ ಪ್ರಾಥಮಿಕ ಶಾಲೆಯ ಅಶೋಕ್‌ಕುಮಾರ್, ಅದ್ಭುತ ಗಣಿತ ಶಿಕ್ಷಕರೂ ಅತ್ಯುತ್ತಮ ತರಬೇತಿದಾರರೂ ಆಗಿದ್ದು ಅವರು ಈಗ ನಮ್ಮ ಜತೆ ಇದ್ದಾರೆ," ಸಮರ್ಥರನ್ನು ಹುಡುಕಿ ಅವರನ್ನು ಅನೌಪಚಾರಿಕವಾಗಿ ತಮ್ಮ ಶಾಲೆಯಲ್ಲಿ ಒಳಗೊಳ್ಳುವ ಧರಮ್‌ವೀರ್ ಅವರ ವಿಶೇಷ ಗುಣಕ್ಕೆ ಇದೊಂದು ಉದಾಹರಣೆ.

ತರಗತಿಯ ಪ್ರತಿ ಮಗುವನ್ನೂ ಕಲಿಕೆಯತ್ತ ಸೆಳೆಯುವುದು ಅವರು ಎದುರಿಸುವ ಸವಾಲು. ಪ್ರತಿಯೊಬ್ಬ ವಿದ್ಯಾರ್ಥಿಗೂ ಕರಿಹಲಗೆ ಬಳಿ ಬಂದು ಅಭ್ಯಾಸ ಮಾಡಲು ಹೇಳುತ್ತಾರಲ್ಲದೆ, ಪ್ರತಿಯೊಂದು ಮಗುವನ್ನೂ ಒಳಗೊಳ್ಳುವಂತೆ ಪ್ರಜ್ಞಾಪೂರ್ವಕವಾಗಿ ತಮ್ಮ ಗಣಿತ ಪಾಠವನ್ನು ಸಿದ್ಧಗೊಳಿಸುತ್ತಾರೆ. "ಕ್ರೀಡಾ ಸಂಸ್ಕೃತಿಯಿಂದಾಗಿ, ತರಗತಿಯಲ್ಲಿ ಸಮಾನತೆಯ ಭಾವವೂ ಪರಸ್ಪರ ಗೌರವವೂ ಹೆಚ್ಚು ಸ್ವಾಭಾವಿಕವಾಗಿ ಕಾಣಿಸಿಕೊಂಡಿದೆ. ಹೀಗಾಗಿ, ನಲ್ವತ್ತೇಳು ವಿದ್ಯಾರ್ಥಿಗಳಲ್ಲಿ ಕೇವಲ ಹತ್ತು ಮಂದಿ ವಿದ್ಯಾರ್ಥಿಗಳು ವಿಷಯದಲ್ಲಿ ಉತ್ತಮವಾಗಿದ್ದರೂ, ಅವರು ಉಳಿದವರನ್ನು ಹಿಂದೆ ಬಿಟ್ಟು ನಡೆಯುವುದಿಲ್ಲ. ಹೆಚ್ಚಿನವರು ಆಟದಲ್ಲಿ ಅತ್ಯುತ್ತಮರು. ಆದ್ದರಿಂದ, ಕಲಿಕೆಯಲ್ಲಿ ಮುಂದಿರುವ ಹತ್ತು ಉತ್ತಮ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಿ, ಅವರಿಂದ ಉಳಿದವರ ಮಟ್ಟವನ್ನು ಹೆಚ್ಚಿಸಲು ಪಾಠ ಮಾಡಿಸುವುದು ನನಗೆ ಕಷ್ಟವಾಗುವುದಿಲ್ಲ". ಧರಮ್‌ವೀರ್‌ಗೆ ವಿದ್ಯಾರ್ಥಿಗಳಲ್ಲಿನ ಶ್ರೇಷ್ಠತೆಯನ್ನು ಕಾಣುವ ಕಣ್ಣು ಇರುವುದರಿಂದ, ಅಂಥವರನ್ನು ಆಯ್ಕೆ ಮಾಡಿ, ತರಬೇತಿ ನೀಡಿ ಜಿಲ್ಲಾ ಮಟ್ಟದ "ಮ್ಯಾಥ್ಸ್ ವಿಜಾರ್ಡ್" ಕಾರ್ಯಕ್ರಮಕ್ಕೆ ಸಿದ್ಧಗೊಳಿಸುತ್ತಾರೆ. "ಹಲವು ವರ್ಷಗಳ ಹಿಂದೆ ಪ್ರತಿಭಾವಂತ–ಬುದ್ಧಿವಂತ ಮಗುವೊಂದನ್ನು ನವೋದಯ ಶಾಲೆಗೆ ಸೇರಿಸಲು ಸಹಾಯ ಮಾಡಿದ್ದೆ. ಅಂದಿನಿಂದ, ಪ್ರತಿಭಾಶಾಲಿ ಮಕ್ಕಳು ಸ್ಪರ್ಧಿಸಿ ಉತ್ತಮ ಸಾಧನೆಗೆ ಮಾಡಲು ಪ್ರಯತ್ನಿಸುತ್ತಿದ್ದೇನೆ" ಎಂದು ಧರಮ್‌ವೀರ್ ಹೇಳುತ್ತಾರೆ.

ತೆರೆದ ಬಯಲಿನಲ್ಲಿ ಚಳಿಗಾಲದ ಹಿತವಾದ ಬಿಸಿಲಲ್ಲಿ ಕುಳಿತು, ಧರಮ್‌ವೀರ್ ತಮ್ಮ ಕುಟುಂಬದ ಬಗ್ಗೆ ಮಾಹಿತಿ ನೀಡಿದರು. ಅವರ ಹಿರಿಯ ಮಗ, ಬಿಟೆಕ್ ಪದವೀಧರ ಬೆಂಗಳೂರಿನಲ್ಲಿ ಕೆಲಸ ಮಾಡುತ್ತಿದ್ದಾನೆ. ಕಿರಿಯ ಮಗ ಎಂಎಸ್ಸಿ ಮುಗಿಸಿ, ಪಿಎಚ್‌ಡಿಗಾಗಿ ರೂರ್ಕಿಯ ಐಐಟಿಯಲ್ಲಿ ಸಂದರ್ಶನ ನೀಡಿದ್ದಾನೆ. ಇವರ ಇಬ್ಬರು ಮಕ್ಕಳು ಎರಡರಿಂದ ಎಂಟನೇ ತರಗತಿ ತನಕ ಇವರದೇ ಶಾಲೆಯಲ್ಲಿ ಓದಿದರು. ಅವರಿಬ್ಬರೂ ಖಾಸಗಿ ಶಾಲೆಯಲ್ಲಿ ಎರಡನೇ ತರಗತಿಯಲ್ಲಿದ್ದಾಗ ಗುರುಸಮಾನರಾದ ರಮೇಶ್ ಸಿಂಗ್ ಅವರ ಪ್ರಭಾವದಿಂದಾಗಿ ಆ ಮಕ್ಕಳನ್ನು ಅಲ್ಲಿಂದ ಬಿಡಿಸಿ ತಮ್ಮದೇ ಸರ್ಕಾರಿ ಶಾಲೆಗೆ ಸೇರಿಸಿದ್ದರು. ಎಂಟನೇ ತರಗತಿ ಬಳಿಕ ಬಾಜ್ಪುರದ ವಿದ್ಯಾಮಂದಿರ ಖಾಸಗಿ ಶಾಲೆಯಲ್ಲಿ ಓದು ಮುಂದುವರಿಸಿದರು.

ಧರಮ್‌ವೀರ್ 2017ರಲ್ಲಿ ಕ್ರೀಡೆಯಲ್ಲಿ ಶಾಲೆಯ ನಿರಂತರ ಉತ್ತಮ ಸಾಧನೆಗೆ ಬ್ಲಾಕ್ ಮಟ್ಟದ 'ಅತ್ಯುತ್ತಮ ಶಿಕ್ಷಕ ಪುರಸ್ಕಾರ' ಪಡೆದರು. ಈ ವಿಷಯ ಹೇಳುತ್ತಿದ್ದಂತೆಯೇ ತಮ್ಮ ಈ ಪಯಣದಲ್ಲಿ ಜೊತೆಯಾದವರನ್ನು ಸ್ಮರಿಸಿಕೊಳ್ಳುವುದನ್ನು ಅವರು ಮರೆಯಲಿಲ್ಲ. ಬಾಜ್ಪುರ ಬ್ಲಾಕ್‌ನ ಉಪ ಬಿಇಒ ಶ್ರೀಮತಿ ಪ್ರೇಮಾ ಬಿಷ್ಟ್ ಅವರು ತಮ್ಮೆಲ್ಲ ಪ್ರಯತ್ನಗಳಿಗೆ ನೀಡಿದ ಬೆಂಬಲವನ್ನು ಅವರು ವಿಶೇಷವಾಗಿ ಉಲ್ಲೇಖಿಸಿದರು. "ಹೆಚ್ಚುವರಿ ಕೆಲಸ ಎನ್ನುವುದು ಇಲ್ಲ. ನಾನು ನನ್ನ ಕೆಲಸಕ್ಕೂ ನನಗೆ ಹೊರಿಸಿದ ಜವಾಬ್ದಾರಿಗೂ ನ್ಯಾಯ ಸಲ್ಲಿಸಬೇಕು. ಇದಕ್ಕಾಗಿ ನನ್ನ ರಜೆಯನ್ನೋ ಸಾಯಂಕಾಲಗಳನ್ನೋ ಬಳಸಿದ್ದೇನೆ ಅಷ್ಟೆ, ಅದೇನೂ ದೊಡ್ಡದಲ್ಲ."

# “ನಮ್ಮ ವೃತ್ತಿಜೀವನವನ್ನು ಪೂರ್ತಿಯಾಗಿ ಮಕ್ಕಳೊಡನೆ ಬದುಕುತ್ತೇವೆ. ಅವರಿಗೆ ಏನಾದರೂ ಘನವಾದುದನ್ನು ಕೊಡಬೇಕಲ್ಲವೇ?”


**ಅವನೀಶ್ ಕುಮಾರ್**

ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆ, ತಾಲಾಬ್‌ಪುರ, ಜಸ್ಪುರ್ ಬ್ಲಾಕ್
ಉಧಮ್‌ಸಿಂಗ್ ನಗರ ಜಿಲ್ಲೆ, ಉತ್ತರಾಖಂಡ್


ಈ ಸತ್ಯ ಮತ್ತೆ ಮತ್ತೆ ಪುಟಗೊಳ್ಳುತ್ತ ಹೊಳೆಯುತ್ತಿರುತ್ತದೆ. ಯಶಸ್ವಿ ಸಂಸ್ಥೆಗಳು ಗುರುತಿಸಿಕೊಳ್ಳುವುದು ಅವುಗಳಲ್ಲಿನ ವ್ಯಕ್ತಿಯಿಂದಲೇ ಹೊರತು ಸ್ಪಷ್ಟವಾದ ರೂಪು-ರೇಷೆಗಳಿಲ್ಲದ ‘ವ್ಯವಸ್ಥೆ’ ಎಂಬುದರಿಂದ ಅಲ್ಲ. ಇಂಥ ಹಲವು ಯಶಸ್ವಿ ಸಂಸ್ಥೆಗಳಲ್ಲಿ ಇಂಥ ವ್ಯಕ್ತಿ ಔಪಚಾರಿಕ ನಾಯಕನೂ ಆಗಿರುವುದಿಲ್ಲ; ಬದಲಾಗಿ ತಂಡದ ಒಬ್ಬ ಉತ್ಸಾಹಿಯೂ ಚೈತನ್ಯಶೀಲನೂ ಆಗಿರುವ ಸದಸ್ಯನಾಗಿರಬಹುದು. ನಿಜ ಹೇಳಬೇಕೆಂದರೆ, ತಾಲಾಬ್‌ಪುರ ಶಾಲೆಯ ಈ ಕಥನದಲ್ಲಿ ಮುಖ್ಯ ಶಿಕ್ಷಕನ ಉಲ್ಲೇಖವೇ ಬರುವುದಿಲ್ಲ. ಬದಲಿಗೆ ಕಳೆದ ನಾಲ್ಕು ವರ್ಷಗಳಲ್ಲಿ ಶಾಲೆಯಲ್ಲಿ ಆರಂಭಿಸಿದ ಎಲ್ಲ ಉಪಕ್ರಮಗಳಿಗೆ ಸ್ಫೂರ್ತಿ ತುಂಬಿ ಮುನ್ನಡೆಸಿದವರು ಅವನೀಶ್ ಎಂಬ ಒಬ್ಬ ಶಿಕ್ಷಕ. ಒಬ್ಬ ವ್ಯಕ್ತಿ ಇಂತಹ ಸ್ಥಿತ್ಯಂತರವನ್ನು ಸೃಷ್ಟಿಮಾಡಿದಾಗ ಹೃದಯ ತುಂಬಿಬರುವುದು ಸಹಜವಾದರೂ, ಒಬ್ಬ ವ್ಯಕ್ತಿಯನ್ನು ಆಧರಿಸಿದ ಸಂಸ್ಥೆ ದುರ್ಬಲವೇ ಆಗಿ ಇರುವ ಸಾಧ್ಯತೆಯೂ ಇದೆ ಎಂದು ಮನಸ್ಸು ಎಚ್ಚರಿಸುತ್ತದೆ. ತಾಲಾಬ್ ಪುರದಲ್ಲಿ ಅವನೀಶ್ ಮಾಡಿರುವ ಕೆಲಸವನ್ನು ನೋಡುವಾಗ, ಇದನ್ನೂ ಮನಸ್ಸಿನಲ್ಲಿ ಇರಿಸಿಕೊಳ್ಳೋಣ.

ಅವನೀಶ್ ಏಪ್ರಿಲ್ 2013ರಲ್ಲಿ ತಾಲಾಬ್‌ಪುರಕ್ಕೆ ಬಂದಾಗ ಇದ್ದುದು 17 ವಿದ್ಯಾರ್ಥಿಗಳು ಹಾಗೂ ಮೂವರು ಶಿಕ್ಷಕರು. ಇದು 1949ರಲ್ಲಿ ಸ್ಥಾಪನೆಯಾದ ಹಳೆಯ ಶಾಲೆಯಾಗಿದ್ದು, ಜಿಲ್ಲೆಯಲ್ಲಿನ ವಿಶಾಲ ಬಯಲಿನ ಇಂಥ ಹಲವು ಶಾಲೆಗಳಂತೆ ತರಗತಿಗಳಿಗೆ ಹೆಚ್ಚು ಸ್ಥಳಾವಕಾಶವನ್ನೂ ಆಟದ ಮೈದಾನವನ್ನು ಹೊಂದಿತ್ತು. ಆದರೆ, ಎಲ್ಲವೂ ಪಾಳು ಬಿದ್ದಿತ್ತು. ಗ್ರಾಮೀಣ ಭಾರತದ ಬೇರೆಲ್ಲಾ ಹಳ್ಳಿಗಳಂತೆ ಒಂದು ಕಡೆ ಸಮೃದ್ಧ ಹಸಿರಿನ ಭೂಮಿ, ಇನ್ನೊಂದೆಡೆ ಗ್ರಾಮಸ್ಥರ ಕಷ್ಟ- ಕಾರ್ಪಣ್ಯದ ಬದುಕು - ವಿರೋಧಾಭಾಸವಾಗಿ ಅಕ್ಕಪಕ್ಕದಲ್ಲೇ ಇದ್ದವು. ತಾಲಾಬ್‌ಪುರ ಶಾಲೆಗೆ ಅಕ್ಕಪಕ್ಕದ ನಾಲ್ಕು ಗ್ರಾಮಗಳ ಮಕ್ಕಳು ಬರುತ್ತಾರೆ. ಅಚ್ಚರಿಯ ಸಂಗತಿ ಎಂದರೆ, ಇದರಲ್ಲಿ ಮೂರು ಗ್ರಾಮಗಳು ಉತ್ತರಪ್ರದೇಶ ರಾಜ್ಯದಲ್ಲಿವೆ. ತಾಲಾಬ್‌ಪುರ ಉತ್ತರಪ್ರದೇಶ ಹಾಗೂ ಉತ್ತರಾಖಂಡ್‌ದ ಗಡಿ ಗ್ರಾಮ. ಬಡತನದ ಬದುಕಿನ ನಡುವೆಯೂ ಪೋಷಕರು (ಅನಕ್ಷರಸ್ಥರು, ದಿನಗೂಲಿ ಕಾರ್ಮಿಕರು) ತಮ್ಮ ಮಕ್ಕಳು ಉತ್ತಮ ಶಿಕ್ಷಣ ಪಡೆಯಬೇಕೆಂಬ ಹಂಬಲವನ್ನು ಹೊಂದಿದ್ದಾರೆ. ಹತ್ತಿರದಲ್ಲೇ ಇದ್ದ ಎರಡು ಖಾಸಗಿ ಶಾಲೆಗಳು ಅವರ ಆಯ್ಕೆಯಾಗಿದ್ದು, ಈ ಎರಡು ಶಾಲೆಗಳಲ್ಲಿ ಒಟ್ಟು 350 ಮಕ್ಕಳು ಇದ್ದರು. ಆದರೆ, ತಾಲಾಬ್‌ಪುರ ಸರ್ಕಾರಿ ಶಾಲೆಯಲ್ಲಿ ಇದ್ದದ್ದು ಹದಿನೇಳು ಮಕ್ಕಳು ಮಾತ್ರ.

ಶಾಲೆಗೆ ಮಕ್ಕಳನ್ನು ಮರಳಿ ಕರೆತರುವುದು ತನ್ನ ಮೊದಲ ಕೆಲಸವೆಂದು ಅವನೀಶ್ ನಿರ್ಧರಿಸಿದರಾದರೂ ಶಾಲೆಯ ಮೇಲೆ ಪೋಷಕರಿಗೆ ನಂಬಿಕೆ ಇಲ್ಲವೆಂದೂ ತಮ್ಮ ಮಾತುಗಳನ್ನು ಕೇಳಿಸಿಕೊಳ್ಳುವ ಕನಿಷ್ಠ ತಾಳ್ಮೆಯೂ ಇಲ್ಲವೆಂದೂ ಅವರಿಗೆ ತಿಳಿದಿತ್ತು. ಅವರಿಗೆ ಬೇಗನೆ ಫಲಿತಾಂಶ ತೋರಿಸಬೇಕಿತ್ತು. ಬೇಸಿಗೆ ರಜದಲ್ಲೂ ಹದಿನೇಳು ಮಕ್ಕಳಿಗೆ ಮನೆಪಾಠ ಮಾಡಿದರು. ಪೋಷಕರಿಗೆ ಆಶ್ಚರ್ಯದಿಂದ ಮಾತೇ ಹೊರಡಲಿಲ್ಲ; ಇಂತಹದನ್ನು ಅವರು ಹಿಂದೆಂದೂ ನೋಡಿರಲಿಲ್ಲ. ಆನಂತರ, ಅವನೀಶ್ ಪೋಷಕರ ಸಭೆಯನ್ನು ಕರೆದರು. "ನಿಮ್ಮ ಮಕ್ಕಳಿಗೆ ಎಂಥ ಶಿಕ್ಷಣ ಬೇಕು? ಖಾಸಗಿ ಶಾಲೆಯಲ್ಲಿ ಅವರಿಗೆ ಇಷ್ಟವಾದದ್ದು ಏನು?" ಎಂದು ಕೇಳಿದರು. ಶಾಲೆಯಲ್ಲಿ ಬದಲಾವಣೆಗಳು ಆಗಲಿವೆ ಎಂದು ಸಭೆಯ ಅಂತ್ಯದಲ್ಲಿ ಭರವಸೆ ನೀಡಿದರು. ಆದರೆ, ಪೋಷಕರು ಅವರನ್ನು ನಂಬಿದಂತೆ ಕಾಣಲಿಲ್ಲ. ಹೀಗಾಗಿ, "ನನಗೆ ಮೂರು ತಿಂಗಳು ಸಮಯ ಕೊಡಿ. ನಿಮಗೆ ಫಲಿತಾಂಶ ತೋರಿಸುತ್ತೇನೆ" ಎಂದು ಕಾಲಮಿತಿ ವಿಧಿಸಿಕೊಂಡರು.

ಅವನೀಶ್ ಹಾಗೂ ಅವರ ಇಬ್ಬರು ಸಹೋದ್ಯೋಗಿಗಳು ಎರಡು ಹಾಗೂ ಮೂರನೇ ತರಗತಿಗಳಲ್ಲಿ ಕಲಿಕೆಯ ಮೂಲಭೂತ ತಳಹದಿಯನ್ನು ನಿರ್ಮಿಸುವುದಕ್ಕೆ ಗಮನ ನೀಡಲಾರಂಭಿಸಿದರು. ಇದು ಸಾಧ್ಯ ಎನ್ನುವುದು ಅವರಿಗೆ ಗೊತ್ತಿತ್ತು. ಆದರೆ, ಕಲಿಕೆಯ ಮಟ್ಟ ಕಳಪೆಯಾಗಿದ್ದರಿಂದ, ನಾಲ್ಕು ಹಾಗೂ ಐದನೇ ತರಗತಿ ವಿದ್ಯಾರ್ಥಿಗಳ ಕಲಿಕೆಯ ಮಟ್ಟವನ್ನು ಏಕಕಾಲಕ್ಕೆ ಸುಧಾರಿಸುವುದು ಪ್ರಾಯೋಗಿಕವಾಗಿ ಸಾಧ್ಯವಿಲ್ಲ ಎಂಬುದೂ ಅವರಿಗೆ ಗೊತ್ತಿತ್ತು. ಹೀಗಾಗಿ, ಅವರು ಹೊಸ ಕಾರ್ಯತಂತ್ರವನ್ನು ರೂಪಿಸಿದರು. ಮೊದಲಿಗೆ ಎರಡು ಹಾಗೂ ಮೂರನೇ ತರಗತಿಗಳ ವಿದ್ಯಾರ್ಥಿಗಳು ಕಲಿಯುತ್ತಿದ್ದಾರೆ ಎಂದು ಸಾಬೀತು ಮಾಡುವುದು. ಪೋಷಕರು ಪ್ರತಿ ತಿಂಗಳು ಮಕ್ಕಳ ಪ್ರಗತಿ ಪರಿಶೀಲನೆಗೆ ತಮ್ಮನ್ನು ಭೇಟಿ ಮಾಡುವಂತೆ ಒತ್ತಾಯಿಸಿದರು. ಶಾಲೆಗೆ ಯಾವುದೇ ಅನುದಾನ ಬರುತ್ತಿರಲಿಲ್ಲವಾದ್ದರಿಂದ, ಅವನೀಶ್ ತಮ್ಮ ಜೇಬಿನಿಂದ ಹತ್ತು ಸಾವಿರ ರೂಪಾಯಿ ವೆಚ್ಚ ಮಾಡಿ, ಬೋಧನಾ ಪರಿಕರಗಳನ್ನು ಖರೀದಿಸಿದರು. ಮಕ್ಕಳ ಕೈಬರಹ ಉತ್ತಮಗೊಳಿಸುತ್ತದೆ ಎಂದು ಪ್ರಚಲಿತವಾದ ಗೆರೆಗಳ ನೋಟ್‌ಪುಸ್ತಕ ಕೂಡ ಇದರಲ್ಲಿತ್ತು. ಈ ನೋಟ್‌ಬುಕ್‌ಗಳಲ್ಲಿ ಬರಹ ಕಣ್ಣಿಗೆ ಅಂದವಾಗಿ ಕಾಣಿಸುವುದರಿಂದ, ಮಕ್ಕಳನ್ನು ಇನ್ನಷ್ಟು ಬರೆಯುವ ಅಭ್ಯಾಸಕ್ಕೆ ಪ್ರೇರೇಪಿಸುತ್ತದೆ. ಇದು ಮಕ್ಕಳ ಕೈಬರಹವನ್ನು ಸುಧಾರಿಸುತ್ತದೆ. ಖಾಸಗಿ ಶಾಲೆಗಳಲ್ಲಿ ಇಂಥದ್ದೇ ಪುಸ್ತಕಗಳನ್ನು ಕೊಡುತ್ತಿದ್ದರು. ಕಲಿಕಾ ಸಾಮಗ್ರಿಗಳನ್ನು ನೀಡುವಲ್ಲಿ ತಾಲಾಬ್‌ಪುರ ಶಾಲೆ ಕೂಡ ಕಡಿಮೆಯೇನಿಲ್ಲ ಎಂದು ಗ್ರಾಮಸ್ಥರಿಗೆ ಮನದಟ್ಟು ಮಾಡಿಸುವ ಚಾಣಾಕ್ಷ ನಡೆ ಇದಾಗಿತ್ತು.

ಅವನೀಶ್ ಹಾಗೂ ಅವರ ಇಬ್ಬರು ಸಹೋದ್ಯೋಗಿಗಳು ಅನಂತರದ ವಾರಗಳಲ್ಲಿ ಮಕ್ಕಳೊಡನೆ ತೀವ್ರವಾಗಿ ತೊಡಗಿಸಿಕೊಂಡಿದ್ದರಿಂದ, ಪೋಷಕರಿಗೆ ವ್ಯತ್ಯಾಸ ಗೊತ್ತಾಗತೊಡಗಿತು. ಶೀಘ್ರವೇ, ಪೋಷಕರು ಸ್ಪಂದಿಸಲು ತೊಡಗಿದರು. ಎರಡು ಖಾಸಗಿ ಶಾಲೆಗಳಿಂದ ಒಟ್ಟು 67 ಮಕ್ಕಳನ್ನು ಬಿಡಿಸಿ, ತಾಲಾಬ್‌ಪುರ ಪ್ರಾಥಮಿಕ ಶಾಲೆಗೆ ಸೇರಿಸುವ ಮೂಲಕ ಈ ಶಿಕ್ಷಕರ ಮೇಲೆ ತಮಗೆ ನಂಬಿಕೆ ಉಂಟಾಗಿದೆಯೆಂದು ಪ್ರಕಟಪಡಿಸಿದರು. ಅವನೀಶ್ ಮೊದಲ ಗಮನಾರ್ಹ ಜಯ ಸಾಧಿಸಿದರು. ಮಕ್ಕಳ

ದಾಖಲಾತಿ ಹೆಚ್ಚಿದಂತೆ, ಎರಡು ಕೊಠಡಿ ಮಾತ್ರವಿದ್ದ ಶಾಲೆಯು ಐದು ತರಗತಿಗಳ 84 ಮಕ್ಕಳಿಗೆ ಅಗತ್ಯವಾದ ಮೂಲಸೌಲಭ್ಯವನ್ನು ಹೊಂದಿಲ್ಲವೆಂಬುದು ಅವನೀಶ್ ಅವರಿಗೆ ಗೋಚರವಾಯಿತು. ಹೆಚ್ಚುವರಿ ಕೊಠಡಿ ನಿರ್ಮಾಣಕ್ಕೆ ಹಣ ಬಿಡುಗಡೆ ಮಾಡಬೇಕೆಂದು ಬ್ಲಾಕ್ ಅಧಿಕಾರಿಗಳ ಮೇಲೆ ಒತ್ತಡ ಹೇರಲಾರಂಭಿಸಿದರು. ಇದೇ ವೇಳೆ ಮತ್ತೆ ತಮ್ಮ ಜೇಬಿನಿಂದಲೇ 1,500 ರೂ. ತೆತ್ತು ಶಾಲೆಯ ಪಕ್ಕದಲ್ಲೇ ಇದ್ದ ಒಂದು ಕೊಠಡಿಯನ್ನು ಬಾಡಿಗೆಗೆ ಪಡೆದರು. ಇದೀಗ ನಾಲ್ಕು ವರ್ಷ ಸಂದುಹೋಗಿದ್ದು, ಈಗಲೂ ಕೊಠಡಿಗೆ ಬಾಡಿಗೆಯನ್ನು ಅವರೇ ನೀಡುತ್ತಿದ್ದಾರೆ.

ತಾಲಾಬ್‌ಪುರ ಶಾಲೆಯನ್ನು ಮಾದರಿ ಪ್ರಾಥಮಿಕ ಶಾಲೆಯನ್ನಾಗಿ ಮೇಲ್ದರ್ಜೆಗೇರಿಸಲು ರಾಜ್ಯ ಸರ್ಕಾರ 2016ರಲ್ಲಿ ನಿರ್ಧರಿಸಿತು. ನಾನು ಈ ಮೊದಲೇ ಹೇಳಿದಂತೆ, ಒಂದು ಶಾಲೆಯನ್ನು ಯಾಕೆ ಆಯ್ಕೆ ಮಾಡುತ್ತಾರೆ ಎಂಬುದು ಸ್ಪಷ್ಟವಾಗುವುದಿಲ್ಲ. ಮಾತ್ರವಲ್ಲದೆ, ಮಾದರಿ ಶಾಲೆಗಳಿಗೆ ಎಲ್ಲ ಜಿಲ್ಲೆಗಳೂ ಅಗತ್ಯವಿರುವ ಹಣ ವಿನಿಯೋಗಿಸುವುದಿಲ್ಲ. ಉತ್ತರಕಾಶಿಯ ಮಾದರಿ ಶಾಲೆಗಳಿಗೆ ಜಿಲ್ಲಾ ಶಿಕ್ಷಣ ಇಲಾಖೆ ಮೂಲಸೌಲಭ್ಯಕ್ಕಾಗಿ ಗಮನಾರ್ಹ ಮೊತ್ತ ನೀಡುತ್ತಿದ್ದುದನ್ನು ನಾವು ಅಲ್ಲಿಗೆ ಭೇಟಿ ಕೊಟ್ಟಾಗ ನೋಡಿದ್ದೆವು. ಆದರೆ, ತಾಲಾಬ್‌ಪುರದಲ್ಲಿ ಇಲಾಖೆಯು ಸ್ಥಾಪಿತ ಪಿಟಿಆರ್ ನಿಯಮಕ್ಕೆ ಅನುಗುಣವಾಗಿ ಕನಿಷ್ಠ ಸಂಖ್ಯೆಯ ಶಿಕ್ಷಕರನ್ನು ನೇಮಕಗೊಳಿಸಲು ಮಾತ್ರವೇ ಪ್ರಯತ್ನಗಳನ್ನು ನಡೆಸಿತ್ತು. 2017ರಲ್ಲಿ ಅಲ್ಲಿ 145 ಮಕ್ಕಳಿಗೆ ಐವರು ಶಿಕ್ಷಕರು ಇದ್ದರು. ಅದೃಷ್ಟವಶಾತ್, ಅಲ್ಲಿನ ಮುಖ್ಯೋಪಾಧ್ಯಾಯರು ನಾಮ್‌ಕಾವಾಸ್ತೆ ಇದ್ದರೂ ಸಹೋದ್ಯೋಗಿಗಳ ಕೆಲಸ ಕಾರ್ಯಗಳಲ್ಲಿ ಅನಗತ್ಯ ಮೂಗು ತೂರಿಸುತ್ತಿರಲಿಲ್ಲ. ಉಳಿದ ಶಿಕ್ಷಕರಲ್ಲಿ ಅವನೀಶ್‌ರಂತಹ ಕಲಿಸುವ 'ಹುಚ್ಚು' ಇಲ್ಲದಿದ್ದರೂ, ತಮ್ಮ ಶಕ್ತಿ–ಸಾಮರ್ಥ್ಯಕ್ಕೆ ಅನುಗುಣವಾಗಿ ಕೆಲಸ ಮಾಡುತ್ತಿದ್ದರು. ಗ್ರಾಮದಲ್ಲಿ ರಾಜಕೀಯ ಮೇಲಾಟ ನಡೆಯುತ್ತಿತ್ತು. ಆದ್ದರಿಂದ ಸಮುದಾಯದ ಜೊತೆ ಸಂಬಂಧವನ್ನು ನಾಜೂಕಾಗಿ ನಿಭಾಯಿಸಬೇಕಿತ್ತು. ಇಲಾಖೆ ಶಾಲೆಯನ್ನು ಮಾದರಿ ಎಂದು ಪರಿಗಣಿಸಿದ್ದರೂ, ಶಾಲೆಯನ್ನು ಆ ಪರಿಕಲ್ಪನೆಗೆ ಅನುಗುಣವಾಗಿ ಮಾದರಿಯನ್ನಾಗಿ ಮಾಡುವುದು ಅವನೀಶ್ ಅವರ ಮುಂದಿನ ಗುರಿಯಾಗಿತ್ತು. ಇದು ತಮ್ಮ ಹಿಂದಿನೆಲ್ಲ ಗುರಿಗಳಿಗಿಂತ ಕಠಿಣವಾಗಿರಲಿದ್ದು, ಸವಾಲನ್ನು ಒಡ್ಡಲಿದೆ ಎನ್ನುವುದು ಅವರಿಗೆ ಗೊತ್ತಿತ್ತು. ಅವನೀಶ್ ಮುನ್ನುಗ್ಗುವ ಛಾತಿಯುಳ್ಳವರಾಗಿದ್ದರೂ ವಾಸ್ತವ ಏನೆಂಬುದನ್ನು ಅರಿತ ವಿವೇಕಶಾಲಿಗಳಾಗಿದ್ದರು. ತಾಲಾಬ್‌ಪುರ ಕ್ರಮಿಸಬೇಕಿರುವ ದೂರ ಸಾಕಷ್ಟು ದೀರ್ಘವಾಗಿದೆ ಎನ್ನುವುದು ಅವರಿಗೆ ತಿಳಿದಿತ್ತು. ತಮ್ಮ ಜೇಬಿನಿಂದ ಇನ್ನಷ್ಟು ಹಣ ಖರ್ಚು ಮಾಡಬೇಕಾಗುತ್ತದೆ ಎನ್ನುವುದೂ ಗೊತ್ತಿತ್ತು. ಬಾಲಾ (ಬಿಲ್ಡಿಂಗ್ ಆಸ್ ಲರ್ನಿಂಗ್ ಏಡ್) ಪರಿಕಲ್ಪನೆಗೆ ಅನುಗುಣವಾಗಿ ಶಾಲೆಯ ಗೋಡೆಗಳು ಹಾಗೂ ಪಾಗಾರದ ಮೇಲೆ ನಿಗದಿಪಡಿಸಿದ ಕಲಿಕಾ ಸಂಬಂಧಿ ಚಿತ್ರಗಳನ್ನು ಬರೆಸಲು ತಗಲುವ ವೆಚ್ಚವನ್ನು ಅವನೀಶ್ ತಾವೇ ಭರಿಸಿದ್ದರು ಎಂಬುದನ್ನು ಕೇಳಿ ನಮಗೆ ಆಘಾತವಾಯಿತು. ಬಿಇಒ ಕಡೆಯಿಂದ ಅನುದಾನ (ಒಂದು ಲಕ್ಷ ರೂಪಾಯಿಗೂ ಅಧಿಕ) ಬಿಡುಗಡೆಯಾದ ಬಳಿಕ, ವೆಚ್ಚ ಮಾಡಿದ ಹಣವನ್ನು ಪಡೆದುಕೊಳ್ಳುವುದಾಗಿ ಅವನೀಶ್

ಹೇಳಿದರು. ತರಗತಿ ಹಾಗೂ ಬಿಸಿಯೂಟಕ್ಕೆ ಬಳಸಲು 25 ಮಡಚಬಹುದಾದ ಅಲ್ಯುಮಿನಿಯಂ ಹಲಗೆಯ ಮೇಜುಗಳನ್ನು ಕೂಡ ಅವರು ಖರೀದಿಸಿದ್ದರು.

ಶಾಲಾ ಕಟ್ಟಡದ ಮುಖಮಂಟಪವು ಈಗ ನಾಲ್ಕನೆಯ ಕೊಠಡಿಯಾಗಿ ಬಳಕೆಯಾಗುತ್ತಿದೆ. ಇಲ್ಲಿ ಬೇಸಿಗೆಯಲ್ಲಿ ತೀವ್ರ ಬಿಸಿಲು, ಚಳಿಗಾಲದಲ್ಲಿ ನಡುಗಿಸುವ ಚಳಿ ಹಾಗೂ ಮಳೆಗಾಲದಲ್ಲಿ ನೀರು ಸಿಡಿಯುತ್ತದೆ. ಈ ತೆರೆದ ಭಾಗಕ್ಕೆ ಹುಲ್ಲಿನ ಪರದೆಯನ್ನು ಅಳವಡಿಸುವ ಮೂಲಕ ಮಕ್ಕಳಿಗೆ ಒಂದಿಷ್ಟು ರಕ್ಷಣೆ ಒದಗಿಸಲು ಅವನೀಶ್ ಮುಂದಾಗಿದ್ದಾರೆ. ಎಲ್‌ಸಿಡಿ ಪ್ರೊಜೆಕ್ಟರ್ ಮುಂತಾದ ಕಲಿಕೆಯ ಸಾಧನಗಳನ್ನೂ ಅವರೇ ಖರೀದಿಸಿದ್ದು, ಇವನ್ನು ಶಾಲೆಯಲ್ಲಿ ಸಮರ್ಥವಾಗಿ ಬಳಸಲಾಗುತ್ತಿದೆ. ಈ ಹಣವನ್ನೂ ಅನುದಾನ ಬಿಡುಗಡೆಗೊಂಡ ಬಳಿಕ ವಾಪಸು ಪಡೆದರಾಯಿತು ಎಂಬುದು ಅವರ ಆಲೋಚನೆ. ಅವರ ನಾಲ್ವರು ಸಹೋದ್ಯೋಗಿಗಳು ಕೂಡ ತಲಾ 10,000 ರೂ. ಕೊಟ್ಟಿದ್ದಾರೆ. ಈ ಹಣವನ್ನು ತಗಡಿನ ಛಾವಣಿಯ ಎರಡು ಕೊಠಡಿ(ತಾತ್ಕಾಲಿಕ) ನಿರ್ಮಾಣಕ್ಕೆ ಬಳಸಲು ಉದ್ದೇಶಿಸಲಾಗಿದೆ. ಇದರಿಂದ ಶಾಲೆಯಲ್ಲಿ ಐದು ಕೊಠಡಿಗಳು ದೊರಕಲಿವೆ. ಇದು ಗ್ರಾಮೀಣ ಭಾರತದ ಎಲ್ಲೆಡೆ ಹಲವು ಉತ್ತಮ ಶಾಲೆಗಳಲ್ಲಿ ಕಂಡುಬರುವ ವಿದ್ಯಮಾನವಾಗಿದ್ದು, ಕೆಲವು ಶಿಕ್ಷಕರು ಮಕ್ಕಳಿಗೆ ಉತ್ತಮ ಸೌಲಭ್ಯ ಸಿಗಲಿ ಎಂಬ ಉದ್ದೇಶದಿಂದ ತಮ್ಮ ಸ್ವಂತ ಹಣ ಖರ್ಚು ಮಾಡಿ ಧೀರೋದಾತ್ತತೆ ಮೆರೆಯುತ್ತಾರೆ. ತಾಲಾಬ್‌ಪುರದ ಸಮುದಾಯ ಕೂಡ ಸಹಾಯಕ್ಕೆ ಮುಂದಾಗಿದೆ. ಜನ ಸುಮಾರು ಒಂದು ಲಕ್ಷ ರೂಪಾಯಿ ಸಂಗ್ರಹಿಸಿ ಕೊಟ್ಟಿದ್ದಾರೆ.

ಈವರೆಗಿನ ಕಥೆ ಅವನೀಶ್ ಅವರ ವ್ಯವಹಾರ ಕುಶಲತೆ ಹಾಗೂ ಕಾರ್ಯೋತ್ಸಾಹದ್ದಾದರೆ, ಈಗ ಶಿಕ್ಷಕನಾಗಿ ಅವರ ಗುಣವಿಶೇಷಗಳೇನು ಎಂಬ ಕಡೆಗೆ ಗಮನ ಹರಿಸೋಣ. ಈ ಶಿಕ್ಷಕನನ್ನು ಅರ್ಥ ಮಾಡಿಕೊಳ್ಳಬೇಕೆಂದರೆ, ಆತ ಸ್ವಯಂ ವಿಧಿಸಿಕೊಂಡ ಶಿಸ್ತನ್ನು ಅರ್ಥ ಮಾಡಿಕೊಳ್ಳಬೇಕು. ಅವೆಂದರೆ, "ಶಾಲಾ ಸಮಯದಲ್ಲಿ ಯಾವುದೇ ಸಭೆ ಅಥವಾ ಕಾರ್ಯಾಗಾರಗಳಿಗೆ ಹಾಜರಾಗುವುದಿಲ್ಲ; ಶಾಲಾವಧಿಯಲ್ಲಿ ಶಾಲೆಯಲ್ಲಿ ಮಕ್ಕಳ ಜೊತೆ ಮಾತ್ರ ಇರುತ್ತೇನೆ; ಶಾಲೆಯಲ್ಲಿ ಮಾಡುವ ಎಲ್ಲ ಕೆಲಸಗಳೂ ಶೈಕ್ಷಣಿಕ ಕಾರ್ಯಗಳಾಗಿದ್ದು, ಆಡಳಿತಾತ್ಮಕ ಕೆಲಸಗಳನ್ನೂ ಎಲ್ಲ ವರದಿಗಳನ್ನೂ ಶಾಲಾವಧಿ ಮುಗಿದ ಬಳಿಕ ಮನೆಯಲ್ಲಿ ಮಾಡುತ್ತೇನೆ." ಅವನೀಶ್ ಹಲವು ವರ್ಷಗಳಿಂದ ಸಾಂದರ್ಭಿಕ ರಜೆ ತೆಗೆದುಕೊಂಡಿರುವುದು ತೀರಾ ಕಡಿಮೆ. ಅವರ ತಾಯಿ ಆಸ್ಪತ್ರೆಯಲ್ಲಿ 23 ದಿನ ಇದ್ದಾಗ; ಆನಂತರ ಪಿತ್ತಕೋಶದ ಬೈಪಾಸ್ ಜೀವರಕ್ಷಕ ಶಸ್ತ್ರಚಿಕಿತ್ಸೆ ಸಂದರ್ಭದಲ್ಲಿ 29 ದಿನ ಇದ್ದಾಗಲೂ, ಅವನೀಶ್ ಶಾಲೆಗೆ ಗೈರು ಹಾಜರಾಗಿರಲಿಲ್ಲ. ಮುಂಜಾನೆ ಅಥವಾ ಸಾಯಂಕಾಲ ತಾಯಿಯನ್ನು ಭೇಟಿ ಮಾಡುತ್ತಿದ್ದರು. ಅವರು ಪ್ರತಿಯೊಂದು ಮಗುವನ್ನೂ ಗಮನದಲ್ಲಿಟ್ಟುಕೊಂಡು ಮುಂದಿನ ದಿನದ ಪಾಠದ ಯೋಜನೆ–ತಯಾರಿ ಮಾಡುತ್ತಿದ್ದರು. ಮಗುವಿಗೆ ಕೊಡಬಹುದಾದ ಉದಾಹರಣೆಗಳು, ಅಭ್ಯಾಸಗಳು ಹಾಗೂ ಉಪಯೋಗಿಸಬಹುದಾದ ವರ್ಕ್‌ಶೀಟ್‌ಗಳನ್ನು ಸಿದ್ಧಪಡಿಸುತ್ತಿದ್ದರು. ಆದ್ದರಿಂದಲೇ ಅವರು ಉತ್ತಮ ಶಿಕ್ಷಕರು ಎಂಬ ಮನ್ನಣೆಗೆ ಅರ್ಹರಾದರು. ಅವರದ್ದು ಮಕ್ಕಳ ಶ್ರೇಯಸ್ಸಿಗಾಗಿ 24 ಗಂಟೆಯೂ ಸನ್ನದ್ಧರಾಗಿ ನಿಂತ

ವ್ಯಕ್ತಿತ್ವ. "ನಾನು ಬೆಳಗ್ಗೆ ಐದು ಗಂಟೆಗೆ ಏಳುತ್ತೇನೆ ಮತ್ತು ರಾತ್ರಿ ಮಲಗುವುದು ಒಂದು ಗಂಟೆಗೆ. ನನಗೆ ದಿನಕ್ಕೆ ನಾಲ್ಕು ಗಂಟೆ ಕಾಲ ನಿದ್ರೆ ಸಾಕು" ಅನ್ನುತ್ತಾರೆ ಅವನೀಶ್.

ಸಾಮಾನ್ಯವಾಗಿ ಎಲ್ಲಾ ಶಾಲೆಗಳಂತೆ ಇಲ್ಲೂ ಬೆಳಗಿನ ಪ್ರಾರ್ಥನಾ ಸಭೆ ಶಾಲೆಯ ಶೈಕ್ಷಣಿಕ ಕಾರ್ಯಕ್ರಮಗಳ ಪ್ರಮುಖ ಭಾಗ. ಇಲ್ಲಿ ಪ್ರಾರ್ಥನೆ, ಕತೆ ಹೇಳುವುದು, ಭಾಷಣವೇ ಮುಂತಾದ ಅಭಿವ್ಯಕ್ತಿ ಸಾಮರ್ಥ್ಯವೃದ್ಧಿಯ ಚಟುವಟಿಕೆಗಳಿಗೆ ಎಲ್ಲ ಮಕ್ಕಳಿಗೂ ಸಮಾನ ಅವಕಾಶವಿದೆ. ಮಕ್ಕಳ ಪ್ರತಿಭೆ, ವಿಶೇಷ ಹವ್ಯಾಸಗಳು ಹಾಗೂ ಆಸಕ್ತಿಗಳನ್ನು ಗುರುತಿಸುವುದು ಹಾಗೂ ಅದಕ್ಕೆ ಅವಕಾಶವನ್ನು ಪ್ರಾರ್ಥನೆ ವೇಳೆ ಕಲ್ಪಿಸಲಾಗುತ್ತದೆ. ಅವನೀಶ್ ಅವರ ಮಾತುಗಳಲ್ಲೇ ಹೇಳುವುದಾದರೆ, ಇದರಿಂದ– ಅಚ್ಛಾ–ಬುರಾ (ಒಳಿತು–ಕೆಡುಕು), ಮಿಲ್‌ಕೇ ಕಾಮ್ ಕರ್‌ನಾ (ಒಟ್ಟಾಗಿ ಕೆಲಸ ಮಾಡುವುದು)– ಮುಂತಾದ ಮೌಲ್ಯಗಳನ್ನು ಮಕ್ಕಳು ಸಹಜವಾಗಿ ತಮ್ಮ ವ್ಯಕ್ತಿತ್ವದಲ್ಲಿ ಅಳವಡಿಸಿಕೊಳ್ಳಲು ಸಾಧ್ಯವಾಗುತ್ತದೆ. ಶಾಲೆಯ ಗ್ರಂಥಾಲಯ ಕಲಿಕೆಯ ಇನ್ನೊಂದು ಪ್ರಮುಖ ಅಂಗವಾಗಿದೆ. ಓದುವ ಕೊಠಡಿಯನ್ನು ರೂಪಿಸಲಾಗಿದ್ದು, ಅವನೀಶ್ ಮತ್ತು ಅವರ ಸಹೋದ್ಯೋಗಿಗಳು ಮಕ್ಕಳು ಪುಸ್ತಕಗಳನ್ನು ಕೊಂಡೊಯ್ದು ಓದುವಂತೆ ಪ್ರೋತ್ಸಾಹಿಸುತ್ತಾರೆ. ಈ ಪ್ರಕ್ರಿಯೆಯ ಮೂಲಕ ಮಕ್ಕಳು ಸ್ವತಂತ್ರ ಮನೋಧರ್ಮವನ್ನು ಬೆಳೆಸಿಕೊಳ್ಳುವುದಲ್ಲದೆ ಸದಾಕಾಲ ರಚನಾತ್ಮಕ ಚಟುವಟಿಕೆಯಲ್ಲಿ ತೊಡಗಿರುತ್ತಾರೆ. ಮಕ್ಕಳು ಬರೆದ ಪ್ರಬಂಧಗಳು ಹಾಗೂ ಪ್ರಶ್ನೆಗಳಿಗೆ ಕೊಟ್ಟ ಉತ್ತರಗಳನ್ನು ನೋಡಿದರೆ, ಇದು ಸ್ಪಷ್ಟವಾಗುತ್ತದೆ. "ಹಾಡು ಹೇಳುವ ವ್ಯಕ್ತಿಯನ್ನು ಏನೆಂದು ಕರೆಯುತ್ತಾರೆ" ಎನ್ನುವ ಹಿಂದಿ ಭಾಷೆಯ ಪ್ರಶ್ನೆಗೆ, ನಿರೀಕ್ಷಿತ ಉತ್ತರ 'ಗಾಯಕ'. ಆದರೆ, ಮಗುವೊಂದು ಬರೆದ ಉತ್ತರ 'ಸಿಂಗರ್' ಇದನ್ನು ಶಿಕ್ಷಕರು ಸರಿಯುತ್ತರ ಎಂದೇ ಪರಿಗಣಿಸಿದ್ದರು.

ಅವನೀಶ್ ಒಂದು ಮತ್ತು ಎರಡನೇ ತರಗತಿಗಳಿಗೆ ತಾವೇ ಬೋಧಿಸುತ್ತಾರೆ. ಈ ತರಗತಿಗಳು ಮಗುವಿನ ಶಿಕ್ಷಣದಲ್ಲಿ ಅತ್ಯಂತ ಮುಖ್ಯ ಘಟ್ಟ ಎಂದು ಅವರು ಹೇಳುತ್ತಾರೆ. ಒಂದು ಮತ್ತು ಎರಡನೇ ತರಗತಿ ಮಕ್ಕಳನ್ನು ಪ್ರತ್ಯೇಕ ಕೊಠಡಿಗಳಲ್ಲಿ ಇರಿಸಿದ್ದು, ಇದರಿಂದ ಅವರ ಮೇಲೆ ಹೆಚ್ಚು ಗಮನ ಇರಿಸಲು ಸಾಧ್ಯವಾಗಿದೆ ಎನ್ನುತ್ತಾರೆ ಅವರು.

ನಾಲ್ಕು ಹಾಗೂ ಐದನೇ ತರಗತಿಗಳು ಬಹುತೇಕ ಒಟ್ಟುಸೇರಿ ನಡೆಯುತ್ತವೆ; ಕಲಿಸುತ್ತಿರುವ ವಿಷಯ ಅಥವಾ ಅಧ್ಯಾಯವನ್ನು ಆಧರಿಸಿ, ಮೂರನೇ ತರಗತಿಯನ್ನು ಪ್ರತ್ಯೇಕವಾಗಿ ಇಲ್ಲವೇ ಮೇಲಿನ ಎರಡು ತರಗತಿಗಳ ಜೊತೆಗೆ ನಡೆಸಲಾಗುತ್ತದೆ. ಅವನೀಶ್ ನಾಲ್ಕು ಹಾಗೂ ಐದನೇ ತರಗತಿಗಳಿಗೆ ಗಣಿತವನ್ನು ಕಲಿಸುತ್ತಾರೆ. ತಾಲಾಬ್‌ಪುರ ಪ್ರಾಥಮಿಕ ಶಾಲೆಯಲ್ಲಿ ಶನಿವಾರ 'ಪಾಠಗಳು ಇಲ್ಲದ ದಿನ'. ಅಂದು ಸ್ವಚ್ಛತೆ, ನಿರ್ವಹಣೆ, ಆಟೋಟ, ಬಾಲ ಸಂಗೀತ ಸಭೆ ಇನ್ನಿತರ ವ್ಯಕ್ತಿತ್ವ ಬೆಳವಣಿಗೆ ಚಟುವಟಿಕೆಗಳು ನಡೆಯುತ್ತವೆ. ಹೆಚ್ಚಿನ ದಿನಗಳಲ್ಲಿ ಹಾಜರಿ ಶೇ.90ಕ್ಕೂ ಹೆಚ್ಚು ಇರುತ್ತದೆ. ಪೋಷಕರು ಮದುವೆ – ಮುಂಜಿ ಇತ್ಯಾದಿ ಸಮಾರಂಭಗಳಿಗೆಂದು ಮಕ್ಕಳನ್ನು ಕರೆದೊಯ್ದಾಗ ಮಾತ್ರ ಗೈರು ಹಾಜರಾಗುತ್ತಾರೆ. ಅವನೀಶ್ ಬಳಿ ಪ್ರತಿಯೊಬ್ಬ ಪೋಷಕರ ದೂರವಾಣಿ ಸಂಖ್ಯೆಯಿದ್ದು, ಮಕ್ಕಳು ರಜೆ ಹಾಕುವ ಮುನ್ನ ಪೋಷಕರು ತನಗೆ ತಿಳಿಸಬೇಕು ಎನ್ನುವ ಕಟ್ಟುಪಾಡು ಮಾಡಿದ್ದಾರೆ.

ಅವನೀಶ್ ಹಲವು ವರ್ಷಗಳ ಹಿಂದೆ ತೀರತ್–3 ಪ್ರಾಥಮಿಕ ಶಾಲೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ, ಶಾಲೆ ಎಲ್‌ಜಿಪಿಯಲ್ಲಿ ಪಾಲುಗೊಂಡಿತ್ತು. ಅಲ್ಲಿ ಬೋಧನಾಕ್ರಮದ ಸುಧಾರಿತ ಮೌಲ್ಯಮಾಪನ ಕ್ರಮಗಳನ್ನು ಕಲಿಯುವ ಅವಕಾಶ ಸಿಕ್ಕಿದಾಗ ಅದನ್ನು ಅವರು ಸದುಪಯೋಗಪಡಿಸಿಕೊಂಡರು. ಅವರು ಜಾಸ್ಪುರ ಬ್ಲಾಕ್‌ನಲ್ಲಿ ನಡೆಯುತ್ತಿದ್ದ ಕಾರ್ಯಕ್ರಮಗಳ ಸಂಪನ್ಮೂಲ ವ್ಯಕ್ತಿಯಾದರು. ಕೆಲವು ವರ್ಷಗಳ ಬಳಿಕ ಆ ಕಾರ್ಯಕ್ರಮದ ಮುಂದುವರಿದ ಭಾಗವಾಗಿ ಜಿಲ್ಲಾಡಳಿತವು 30 ಸದಸ್ಯರ ಶೈಕ್ಷಣಿಕ ಸಂಪನ್ಮೂಲ ಗುಂಪನ್ನು ರೂಪಿಸಿದಾಗ, ಅವನೀಶ್ ಅದಕ್ಕೆ ನಾಮಕರಣಗೊಂಡರು. ಉದಯಪುರದ ವಿದ್ಯಾಭವನ ಸೊಸೈಟಿ ನಡೆಸಿದ ಹತ್ತು ದಿನಗಳ ಕಾರ್ಯಕ್ರಮದಲ್ಲಿ ಪಾಲುಗೊಂಡರು. ಹತ್ತು ವರ್ಷಗಳ ಬಳಿಕವೂ ಆ ಕಾರ್ಯಕ್ರಮದ ಪ್ರತಿ ಸಭೆಯನ್ನು ಅವರು ಕರಾರುವಾಕ್ಕಾಗಿ ನೆನಪಿಸಿಕೊಳ್ಳಬಲ್ಲರು. ಅಲ್ಲಿ ತಮಗೆ ಏನು ಇಷ್ಟವಾಯಿತು, ಏನು ಇಷ್ಟವಾಗಲಿಲ್ಲ ಎಂಬುದೂ ಅವರ ನೆನಪಿನಲ್ಲಿದೆ. ಅವನೀಶ್ ಈಗ ವಿಟಿಎಫ್‌ನ ಸಭೆಗಳಲ್ಲಿ ನಿಯಮಿತವಾಗಿ ಭಾಗವಹಿಸುತ್ತಾರೆ. ದಿನೇಶ್‌ಪುರದ ಫೌಂಡೇಷನ್‌ನ ಕ್ಷೇತ್ರ ಸಂಸ್ಥೆಯಲ್ಲಿ ನಡೆಯುವ ಬೇಸಿಗೆ ಮತ್ತು ಚಳಿಗಾಲದ ಕಾರ್ಯಾಗಾರಗಳಲ್ಲೂ ತಪ್ಪದೆ ಪಾಲ್ಗೊಳ್ಳುತ್ತಾರೆ. ತಮ್ಮ ಅಭಿಪ್ರಾಯಗಳನ್ನು ಮರೆಮಾಚದೆ ನೇರವಾಗಿ ಹೇಳುವ ಛಾತಿ ಅವನೀಶ್ ಅವರಿಗಿದೆ. "ತರಬೇತಿ ಕಾರ್ಯಕ್ರಮಗಳಲ್ಲೂ ಕಾರ್ಯಾಗಾರಗಳಲ್ಲೂ ಕೃತಕವಾದ ಬೌದ್ಧಿಕ ಗೋಸುಂಬೆತನದ ಚರ್ಚೆ ನನಗಿಷ್ಟವಿಲ್ಲ. ಶಿಕ್ಷಕರು ತಮ್ಮ ತರಗತಿಗಳಲ್ಲಿ ಬಳಸಲು ಅನುಕೂಲವಾಗುವ ಸ್ಪಷ್ಟ ಪರಿಕಲ್ಪನೆಗಳನ್ನು ಕೊಡಿ ಎಂಬುದೇ ಸಂಘಟಕರಿಗೆ ನನ್ನ ಸಲಹೆ" ಅನ್ನುತ್ತಾರೆ ಅವನೀಶ್.

ತಾಲಾಬ್‌ಪುರದ ಶಾಲೆಯಲ್ಲಿ ತಾವು ಮಾಡಿದ್ದೇನು ಎಂಬುದನ್ನು ಪ್ರಪಂಚಕ್ಕೆ ಹೇಳುವುದಕ್ಕೂ ಅವನೀಶ್‌ಗೆ ಯಾವುದೇ ಅಳುಕಾಗಲಿ ಹುಸಿ ವಿನಯವಾಗಲಿ ಇಲ್ಲ. ಅವರ ಕೆಲಸವು ಸೃಷ್ಟಿಸಿದ ಅಚ್ಚರಿಯ ಪರಿಣಾಮವನ್ನೂ ಬದಲಾವಣೆಯನ್ನೂ ಅರ್ಥ ಮಾಡಿಕೊಳ್ಳುವಲ್ಲಿ ವಿಫಲರಾದವರಿಗೆ ಅವರ ನಡೆ ಜಂಬವೆಂದು ಅನಿಸಬಹುದೇನೋ. ಅವರ ಮಾತನ್ನು ಗಂಭೀರವಾಗಿ ತೆಗೆದುಕೊಳ್ಳಲು ಇರುವ ಇನ್ನೊಂದು ಕಾರಣ ಅವರು ತನ್ನನ್ನೂ ಆತ್ಮವಿಮರ್ಶೆಗೆ ಒಳಪಡಿಸಿಕೊಳ್ಳುತ್ತಾರೆ ಎಂಬುದು. ಶಿಕ್ಷಣ ಹಾಗೂ ಕಲಿಕೆಗೆ ಸಂಬಂಧಿಸಿದಂತೆ, ಗುಣಮಟ್ಟದ ತಕ್ಕಡಿಯಲ್ಲಿ ತಾಲಾಬ್‌ಪುರ ಶಾಲೆಯ ಸ್ಥಾನ ಏನು ಎಂದು ನಾನು ಅವರನ್ನು ಕೇಳಿದೆ. ತಲೆ ಅಲುಗಾಡಿಸುತ್ತ ಅವರು ಹೇಳಿದರು, "ತೀರತ್–3 ಶಾಲೆ ಸಾಧಿಸಿದ ಮಟ್ಟಕ್ಕೆ ಹೋಲಿಸಿದರೆ, ತಾಲಾಬ್‌ಪುರ ಶಾಲೆಯ ಕಲಿಕಾ ಮಟ್ಟ ಕಡಿಮೆ ಇದೆ. ಅಲ್ಲಿನ ಶೇ. 70ಕ್ಕೂ ಅಧಿಕ ಮಕ್ಕಳು ಕಲಿಕೆಯಲ್ಲಿ ಉತ್ತಮ ಸಾಧನೆ ಮಾಡಿದ್ದರು. ಇಲ್ಲಿ ಶೇಕಡಾವಾರು ಪ್ರಮಾಣ ಕಡಿಮೆ ಇದೆ. ನಮ್ಮ ಇಲ್ಲಿನ ನಾಲ್ಕು ವರ್ಷಗಳಲ್ಲಿ ಎರಡು ವರ್ಷ ನೆಲೆಯೂರಲೂ ಮೂಲಸೌಲಭ್ಯ ಸೃಷ್ಟಿಸುವುದರಲ್ಲೂ ಕಳೆದುಹೋಯಿತು."

ಅವನೀಶ್ ಉತ್ತಮ ವಿದ್ಯಾರ್ಥಿಯಾಗಿದ್ದರು. ಇಂಟರ್‌ಮೀಡಿಯೆಟ್‌ನಲ್ಲಿ ಉತ್ತಮ ಸಾಧನೆ ಮಾಡಿದ್ದರು. ಅನಂತರ ಕೈಗಾರಿಕಾ ರಸಾಯನ ಶಾಸ್ತ್ರದಲ್ಲಿ ಹೆಚ್ಚು ಅಂಕಗಳೊಂದಿಗೆ ಪದವಿ ಪಡೆದರು. ಯುಪಿಎಸ್‌ಸಿ ಪರೀಕ್ಷೆಗೆ ಸಿದ್ಧತೆ ನಡೆಸುತ್ತಿದ್ದಾಗ

ಕುಟುಂಬದ ಆಧಾರಸ್ತಂಭವಾಗಿದ್ದ ಹಾಗೂ ವಿಜ್ಞಾನ ಶಿಕ್ಷಕರಾಗಿದ್ದ ಅವರ ತಂದೆ ಹಠಾತ್ತನೆ ಮೃತಪಟ್ಟರು. ಅವರ ಉದ್ಯೋಗ ಅವನೀಶ್‌ಗೆ ದೊರೆಯಿತು. ಅದು 2001, ಅವನೀಶ್‌ಗೆ ಆಗ 21 ವರ್ಷ. ಬದಲಾವಣೆಗಳಿಗೆ ಸಕಾರಾತ್ಮಕವಾಗಿ ಒಗ್ಗಿಕೊಂಡ ಅವರು, ಉತ್ತಮ ಶಿಕ್ಷಕರಾಗಿದ್ದ ತಂದೆಯ ನೆನಪು ತಮಗೆ ಸ್ಫೂರ್ತಿಯಾಯಿತು ಎನ್ನುತ್ತಾರೆ. ಅನಂತರ ದೂರಶಿಕ್ಷಣದ ಮೂಲಕ ಎಂಎ ಮುಗಿಸಿದ್ದಾರೆ. 16 ವರ್ಷಗಳ ಸೇವಾ ಅನುಭವ ಇರುವ ಅವರು, ಶಿಕ್ಷಕನಾಗಿದ್ದು ತಮ್ಮ ಬದುಕಿನ ಅತ್ಯುತ್ತಮ ಸಂಗತಿ ಎನ್ನುತ್ತಾರೆ. ಅವರ ಪತ್ನಿ ಕೂಡ ಶಿಕ್ಷಕಿ. ಅವರು ರಾಜ್ಯದ ಗಡಿಯ ಆಚೆ ಕೊಂಚ ದೂರ ಉತ್ತರಪ್ರದೇಶದಲ್ಲಿ ಕೆಲಸ ಮಾಡುತ್ತಾರೆ. ಅವನೀಶರು ಅವರನ್ನು ಬೆಳಿಗ್ಗೆ ಅವರ ಶಾಲೆಗೆ ಬಿಟ್ಟು ತಾಲಾಬ್‌ಪುರಕ್ಕೆ ಬರುತ್ತಾರೆ. ತಮ್ಮ ಶಾಲೆಯ ಮೇಲಿನ ಅವನೀಶರ ನಿಷ್ಠೆಗೆ ಬಹುಶ: ಅವರ ಕುಟುಂಬದಿಂದಲೂ ಮೆಚ್ಚುಗೆ, ಪ್ರೋತ್ಸಾಹ ಇದೆ. ಶಾಲೆಯಲ್ಲಿ ಆಚರಿಸುವ ಸ್ವಾತಂತ್ರ್ಯದಿನ, ಗಣರಾಜ್ಯದಿನಗಳ ಹಬ್ಬದಲ್ಲಿ ಅವರ ತಾಯಿಯೂ ತಂಗಿಯೂ ತಪ್ಪದೆ ಭಾಗವಹಿಸುತ್ತಾರೆ. ಅಂದು ಮಕ್ಕಳಿಗೆ ಸಿಹಿಯನ್ನು ಹಂಚುವ ಜವಾಬ್ದಾರಿಯನ್ನು ಅವರು ಎಂದೂ ಯಾರಿಗೂ ಬಿಟ್ಟುಕೊಡುವುದಿಲ್ಲ.

ಈ ಕಥನವನ್ನು ಅವನೀಶ್ ಅವರ ಮಾತಿನಿಂದಲೇ ಮುಗಿಸುವುದು ಸೂಕ್ತ: "ನಾವು ಜೀವನವಿಡೀ ದುಡಿದು ಸ್ವಂತ ಕುಟುಂಬಗಳಿಗೆ ಬಹಳಷ್ಟನ್ನು ಉಳಿಸಿ ಹೋಗಲು ಶ್ರಮಿಸುತ್ತೇವೆ. ಅದೇ ರೀತಿ, ನಾವು ಶಿಕ್ಷಕರಾಗಿ 40 ವರ್ಷ ದುಡಿಯುವ ಶಾಲೆಗೂ ಮಕ್ಕಳಿಗೂ ಏನಾದರೂ ಉಳಿಯುವಂಥದ್ದನ್ನು, ಘನವಾದುದನ್ನು ಬಿಟ್ಟು ಹೋಗಬೇಕಲ್ಲವೇ?"

---

## ತರಬಿದ ಮಂಡಿ, ಉಲ್ಲಾಸಕರ ಚೇತನಗಳು, ಗಮನಾರ್ಹ – ಆತ್ಮವಿಶ್ವಾಸ : ಉತ್ತರಾಖಂಡದ ಬಾಲಕಿಯರ ಶಾಲೆಯೊಂದು ಕಬಡ್ಡಿ ಚಾಂಪಿಯನ್‌ಗಳನ್ನು ಸೃಷ್ಟಿಸುವ ಪರಿ

**ದುರ್ಗೇಶ್ ನಂದಿನಿ ಯಾದವ್**

ಕನ್ಯಾ ಹಿರಿಯ ಪ್ರಾಥಮಿಕ ಶಾಲೆ, ಡಾಮ್ಟಾ

ನೌಗಾಂವ್‌ಬ್ಲಾಕ್, ಉತ್ತರಕಾಶಿ ಜಿಲ್ಲೆ, ಉತ್ತರಾಖಂಡ್

---

ಡಾಮ್ಟಾದ ಹಿರಿಯ ಪ್ರಾಥಮಿಕ ಶಾಲೆಯು ರಸ್ತೆಯ ಸಮೀಪದಲ್ಲೇ ಕಡಿದಾದ ಇಳಿಜಾರಿನಲ್ಲಿದೆ. ಈ ಶಾಲೆಯಲ್ಲಿ ಆರರಿಂದ ಎಂಟನೇ ತರಗತಿವರೆಗೆ ಒಂದುನೂರಾ ಐದು ಹೆಣ್ಣು ಮಕ್ಕಳು ಇದ್ದು, ಇವರಲ್ಲಿ ಅರುವತ್ತನಾಲ್ಕು ಮಕ್ಕಳು ಎಸ್‌ಸಿ/ಎಸ್‌ಟಿ ಹಾಗೂ ಮೂವತ್ತೆಂಟು ಮಂದಿ ಒಬಿಸಿ ಸಮುದಾಯಕ್ಕೆ ಸೇರಿದವರು. ಈ ಹೆಣ್ಣುಮಕ್ಕಳು ಇಲ್ಲಿ ಕಲಿಯಲು ಬಂದ ವಿಚಿತ್ರ ಸನ್ನಿವೇಶವನ್ನು ನಾವು ಇಲ್ಲಿನ ಮುಖ್ಯೋಪಾಧ್ಯಾಯಿನಿ ದುರ್ಗೇಶ್ ನಂದಿನಿ ಯಾದವ್ ಅವರಿಂದ ಕೇಳಿದಾಗ ಹತಾಶೆ ಮತ್ತು ಆಶಾಭಾವಗಳೆರಡೂ ಒತ್ತರಿಸಿ ಬಂದವು. ಡಾಮ್ಟಾದ ಸುತ್ತಮುತ್ತ 17 ಗ್ರಾಮಗಳಿದ್ದು,

ಗ್ರಾಮಸ್ಥರು ತಮ್ಮ ಗಂಡು ಮಕ್ಕಳನ್ನು ಖಾಸಗಿ ಶಾಲೆಗಳಿಗೆ ಕಳಿಸುತ್ತಾರೆ. ಬಾಲಕರು ಡಾಮ್ಟಾದಲ್ಲಿ ಕೊಠಡಿ ಮಾಡಿಕೊಂಡು ಉಳಿದುಕೊಳ್ಳುತ್ತಾರೆ. ಹೀಗಾಗಿ, ಅವರಿಗೆ ಅಡುಗೆ ಮಾಡುವುದೇ ಇತ್ಯಾದಿ ಸೇವೆಗಳನ್ನು ಮಾಡಲು ಪೋಷಕರು ಸೋದರಿಯರನ್ನು ಕಳಿಸುತ್ತಾರೆ. ಈ ಹುಡುಗಿಯರು ತಮ್ಮ ಶಾಲೆಗೆ ಸೇರುತ್ತಾರೆ. ಆದ್ದರಿಂದ, ಶಾಲೆಯನ್ನು ಈ ಬಾಲಕಿಯರ ಜೀವನವನ್ನೇ ಬದಲಿಸಿದ ಅನುಭವವನ್ನಾಗಿ ಮಾಡಬೇಕೆಂಬುದು ತಮ್ಮ ಹಾಗೂ ತಮ್ಮ ಸಹೋದ್ಯೋಗಿಗಳ ಪರಮಧ್ಯೇಯ ಎಂದು ಅವರು ಹೇಳಿದರು. ಈ ಕ್ರಿಯಾಶೀಲ ಮುಖ್ಯೋಪಾಧ್ಯಾಯಿನಿ ತಮ್ಮ ಧ್ಯೇಯವಾಕ್ಯವನ್ನು ಯಾಕೆ ಶಾಲೆಯ ಪ್ರಮುಖ ಸ್ಥಳದಲ್ಲಿ ಪ್ರಕಟಗೊಳಿದ್ದಾರೆ ಎನ್ನುವುದನ್ನು ಈ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳುವುದು ಸುಲಭ; "ಪಾಂಡಿತ್ಯ, ಕ್ರೀಡೆ, ಕಲೆ ಹಾಗೂ ಸಂಸ್ಕೃತಿಯ ಸಮತೋಲನದಿಂದ ಸರ್ವತೋಮುಖ ವಿಕಾಸ." ಎಂದು ಅಲ್ಲಿ ಬರೆಯಲಾಗಿದೆ.

ದುರ್ಗೇಶ್ ನಂದಿನಿ ಅವರ ಬದುಕು ಶಾಲೆಯಲ್ಲಿ ಓದುವ ಬಾಲಕಿಯರ ಸುತ್ತವೇ ಹೆಣೆದುಕೊಂಡಿದೆ. ಡಾಮ್ಟಾದ 'ಕನ್ಯಾ ಶಾಲೆಯನ್ನು ತೀರಾ ಇತ್ತೀಚೆಗೆ ಅಂದರೆ, 2011ರಲ್ಲಿ ಆರಂಭಿಸಿದ್ದು, ಪ್ರಾರಂಭದಿಂದಲೂ ದುರ್ಗೇಶ್ ನಂದಿನಿ ಇಲ್ಲಿ ಮುಖ್ಯ ಶಿಕ್ಷಕಿಯಾಗಿ ಕೆಲಸ ಮಾಡುತ್ತಿದ್ದಾರೆ. ಅವರದೇ ಮಾತಿನಲ್ಲಿ ಹೇಳುವುದಾದರೆ, ಈ ಕೆಲಸ ಅವರ ಬದುಕಿಗೆ ನೂತನ ಗುರಿಯನ್ನೂ ಧ್ಯೇಯವನ್ನೂ ನೀಡಿದ ಎರಡನೇ ಅವಕಾಶವಾಗಿದೆ. ನಲವತ್ತರ ಮಧ್ಯವಯಸ್ಸು ದಾಟಿರುವ ಅವರು, ಬದುಕಿನಲ್ಲಿ ಸವಾಲುಗಳನ್ನು ಎದುರಿಸಿದವರು. ಆ ಬಗ್ಗೆ ಅವರು ಹೆಚ್ಚು ಮಾತನಾಡುವುದಿಲ್ಲ. ಆದರೆ, ಅವರ ಧೀರ ಮನಸ್ಸು ಕೆಲವು ಸಂಕಷ್ಟದ ಸಂದರ್ಭಗಳನ್ನು ಎದುರಿಸಲು ಸಹಾಯ ಮಾಡಿದೆ. ಎಂಎಸ್‌ಸಿ ಹಾಗೂ ಬಿಎಡ್ ಶಿಕ್ಷಣದ ಬಳಿಕ 20 ವರ್ಷಗಳ ಹಿಂದೆ ಶಿಕ್ಷಣ ಇಲಾಖೆಯನ್ನು ಸೇರಿದ ಅವರು, ನೌಗಾಂವ್‌ಬ್ಲಾಕ್‌ನ ರಿಖೌರಾ ಪ್ರಾಥಮಿಕ ಶಾಲೆಯಲ್ಲಿ ಹಲವು ವರ್ಷ ಕೆಲಸ ಮಾಡಿದರು. ಗುಡ್ಡಗಾಡಿನಲ್ಲಿ ಜನಿಸಿದವರಲ್ಲ, ಡೆಹ್ರಾಡೂನ್‌ನ ಹತ್ತಿರದವರು. ಹೆಣ್ಣುಮಕ್ಕಳ ಬಗ್ಗೆ ಹಾಗೂ ಅವರ ಶಿಕ್ಷಣದ ಬಗ್ಗೆ ಪಿತೃಪ್ರಧಾನ ಸಮಾಜದ ನಿರ್ಲಕ್ಷ್ಯವನ್ನು ನೋಡಿ ಕೋಪದಿಂದ ಕುದಿಯುತ್ತಿದ್ದ ದುರ್ಗೇಶ್ ನಂದಿನಿ ಇದೀಗ ತನ್ನ ಕೋಪವನ್ನು ಹೆಣ್ಣುಮಕ್ಕಳ ಬದುಕನ್ನು ಬೆಳಗಲು ಸಹಾಯ ಮಾಡುವ ಪ್ರೇರಕ ಶಕ್ತಿಯಾಗಿ ಮಾರ್ಪಡಿಸುವ ಜೀವಮಾನದ ಅತ್ಯುತ್ತಮ ಅವಕಾಶವನ್ನು ಗಳಿಸಿದ್ದಾರೆ. ಸದಾ ಹಸನ್ಮುಖಿಯಾಗಿರುವ ಅವರು ಆತ್ಮವಿಶ್ವಾಸಿಯೂ ಶಾಲೆಗೋಸ್ಕರ ಹಲವು ಯೋಜನೆಗಳನ್ನು ರೂಪಿಸಬಲ್ಲ ಕಲ್ಪನಾಶೀಲೆಯೂ ಆಗಿದ್ದಾರೆ, ಜೊತೆಗೆ ತಮ್ಮ ವ್ಯಕ್ತಿತ್ವದ ಪ್ರಭಾವದಿಂದ ತಮ್ಮ ಸನಿಹದ ಎಲ್ಲರನ್ನೂ ಉತ್ತಮ ಕಾರ್ಯಗಳಿಗೆ ಪ್ರೇರೇಪಿಸುವ ಗುಣವನ್ನೂ ಹೊಂದಿದ್ದಾರೆ.

ಡಾಮ್ಟಾ ಶಾಲೆಯ ಹನ್ನೆರಡರಿಂದ ಹದಿನಾಲ್ಕು ವರ್ಷ ವಯಸ್ಸಿನ ಈ ಬಾಲಕಿಯರು ಆತ್ಮವಿಶ್ವಾಸಿಗಳು. ನೇರ ನಡೆ–ನುಡಿಯವರು. ದುರ್ಗೇಶ್ ನಂದಿನಿ ತಮ್ಮ ಕಾಣ್ಕೆಯನ್ನು ಕ್ರಿಯೆಯಾಗಿ ಮಾರ್ಪಡಿಸುತ್ತಿದ್ದಾರೆ ಎಂಬುದು ಇವರ ಜೊತೆ ಸಂಭಾಷಣೆ ನಡೆಸಿದಾಗ ಅರಿವಾಗುತ್ತದೆ. ಅವರ ಸಹೋದ್ಯೋಗಿಗಳಾದ ಸವಿತಾ ಚಮೋಲಿ ಹಾಗೂ ಉಷಾಕಿರಣ್ ರಾವತ್ ಅವರ ಬೆಂಬಲದಿಂದ, ತರಗತಿ,

ಪಠ್ಯವಿಷಯಗಳು ಮತ್ತು ಇತರ ಚಟುವಟಿಕೆಗಳ ಸಮತೋಲನದ ಮೂಲಕ ಮಕ್ಕಳ ಸರ್ವತೋಮುಖ ವಿಕಾಸವನ್ನು ಖಾತ್ರಿಗೊಳಿಸಲು ಯತ್ನಿಸುತ್ತಿದ್ದಾರೆ. ಇದು ಅವರ ವಿದ್ಯಾರ್ಥಿಗಳ ಆತ್ಮವಿಶ್ವಾಸದಲ್ಲಿ, ಸಮಚಿತ್ತದಲ್ಲಿ ಹಾಗೂ ಬದುಕಿನ ಸಮಸ್ಯೆಗಳನ್ನು ಎದುರಿಸಿ, ಬಗೆಹರಿಸುವ ಸಾಮರ್ಥ್ಯದಲ್ಲಿ ಕಾಣಿಸಿಕೊಳ್ಳುತ್ತಿದೆ.

ವಿದ್ಯಾವಂತ ಕುಟುಂಬದವಳಾದ ತಾನು ಮನೆಯಲ್ಲಿ ಕಲಿಕೆಯನ್ನು ಉತ್ತೇಜಿಸುವ ವಾತಾವರಣವಿದ್ದುದರಿಂದ, ಓದುವುದು ಸಾಧ್ಯವಾಯಿತು; ಆದರೆ ಈ ಹೆಣ್ಣುಮಕ್ಕಳಿಗೆ ಅಂಥ ಅವಕಾಶವಿಲ್ಲ ಎನ್ನುವ ಎಚ್ಚರ ದುರ್ಗೇಶ್ ನಂದಿನಿ ಅವರ ಮನಸ್ಸಿನಲ್ಲಿ ಸದಾ ಮಿಡಿಯುತ್ತಿದೆ. ಇದರಿಂದಾಗಿಯೇ ಎಲ್ಲ 105 ಮಕ್ಕಳ ಮೇಲೆ ಅವರು ವೈಯಕ್ತಿಕ ಗಮನ ಇರಿಸಿದ್ದಾರೆ. ಪ್ರತಿ ದಿನ ಸಾಯಂಕಾಲ ಶಾಲೆ ಅವಧಿ ಮುಗಿದ ಬಳಿಕ ಮೂವರು ಶಿಕ್ಷಕಿಯರೂ ಗುರುತಿಸಿದ ಮಕ್ಕಳ ಜೊತೆ ಕಾಲ ಕಳೆದು, ಅವರ ವ್ಯಾಸಂಗಕ್ಕೆ ನೆರವಾಗುತ್ತಾರೆ. ಈ ಶಾಲೆಯ ಗಮನಾರ್ಹ ಬೋಧನಾಕ್ರಮಗಳಲ್ಲಿ– ಸ್ವಂತ ಪ್ರಬಂಧ ರಚನೆ, ಪದ್ಯಗಳ ರಚನೆ ಮೂಲಕ ಭಾಷೆ ಕಲಿಕೆಯನ್ನೂ ಭೂಗೋಳಶಾಸ್ತ್ರದ ತರಗತಿಯಲ್ಲಿ ಭೂಪಟವನ್ನು ಬಳಸುವ ಮೂಲಕ ಮಕ್ಕಳಲ್ಲಿ ದೃಶ್ಯ ಕಲಿಕೆ ಮತ್ತು ಸ್ಥಳ ಸಂಬಂಧಿ ಪರಿಕಲ್ಪನೆಯ ಅರಿವನ್ನೂ ಉತ್ತೇಜಿಸಲಾಗುತ್ತದೆ. ಇದನ್ನು ಪ್ರಾಯಶಃ ಬೇರೆ ಶಾಲಾ ಕೊಠಡಿಗಳಲ್ಲಿ ನೋಡಲು ಸಾಧ್ಯವಿಲ್ಲ.

ಇವರ ಸಹೋದ್ಯೋಗಿಗಳಾದ ಮೂವರು ಶಿಕ್ಷಕಿಯರು ಮಕ್ಕಳ ಶೈಕ್ಷಣಿಕ ಸಾಧನೆಗೆ ಸಂಪೂರ್ಣ ಗಮನ ನೀಡುವ ಜತೆಯಲ್ಲೇ, ಕ್ರೀಡೆ, ಸಾಹಿತ್ಯ ಹಾಗೂ ಲಲಿತ ಕಲೆಗಳಲ್ಲಿ ತಮ್ಮ ಆಸಕ್ತಿ ಹಾಗೂ ಸಾಮರ್ಥ್ಯವನ್ನು ಸಾಬೀತುಪಡಿಸಲು ನಾನಾ ಉಪಕ್ರಮಗಳನ್ನು ಕೈಗೊಳ್ಳುತ್ತಿದ್ದಾರೆ. ದುರ್ಗೇಶ್ ನಂದಿನಿ 'ಮನಸ್ಸು ಮತ್ತು ದೇಹ' ಎಂಬ ಮಾತನ್ನು ಪದೇಪದೇ ಬಳಸುವ ಮೂಲಕ ಇವು ಎರಡರ ಬೆಳವಣಿಗೆಯೂ ಆಗಬೇಕೆಂಬ ಸೂಚನೆಯನ್ನು ಮಕ್ಕಳಿಗೆ ನೀಡುತ್ತಾರೆ. ಶನಿವಾರವನ್ನು "ಓದಿಗೆ ರಜಾ ದಿನ" ಎಂದು ಘೋಷಿಸಿದ್ದು, ಆ ದಿನವನ್ನು ಕ್ರೀಡೆ, ಗಾಯನ, ಕಲೆ ಮತ್ತು ಚಿತ್ರ ಬಿಡಿಸುವಿಕೆಗೆ ಮೀಸಲಿಟ್ಟಿದ್ದಾರೆ. ಜೂಡೋ ಹಾಗೂ ಕರಾಟೆ ತರಬೇತಿದಾರರೊಬ್ಬರು ಇದ್ದಾರೆ ಎಂದು ತಿಳಿದು ಅವರ ಬೆನ್ನುಹತ್ತಿ ಶಾಲೆಯ ಬಾಲಕಿಯರಿಗೆ ಸಮರಕಲೆಯ ತರಬೇತಿ ನೀಡಲು ಒಪ್ಪಿಸಿದ್ದಾರೆ. ಕಬಡ್ಡಿ ತಂಡವೊಂದನ್ನು ಕಟ್ಟುವ ಗುರಿ ಇರಿಸಿಕೊಂಡರು. ಪ್ರತಿ ಮಗುವಿನಲ್ಲೂ ಪ್ರತಿಭೆ ಇರುತ್ತದೆ ಮಾತ್ರವಲ್ಲ, ಅದು ಬೇರೆ ಬೇರೆ ಆಗಿರುತ್ತದೆ ಎನ್ನುವುದು ಅವರ ಅಭಿಪ್ರಾಯ. ಆದ್ದರಿಂದ ಶಾಲೆಯಲ್ಲಿ ಸಾಂಸ್ಕೃತಿಕ ಚಟುವಟಿಕೆಗಳ ಜೊತೆಗೆ ಜೂಡೋ, ಕರಾಟೆ ಮತ್ತು ಕಬಡ್ಡಿ ಏಕಕಾಲದಲ್ಲಿ ನಡೆಯುತ್ತಿದೆ. ದುರ್ಗೇಶ್ ಹಾಗೂ ಸಹೋದ್ಯೋಗಿಗಳು ಸ್ವಂತ ಹಣದಿಂದ ಲೇಜಿಂ ಸೆಟ್, ಡಂಬ್–ಬೆಲ್ಸ್ ಮತ್ತು ಜೂಡೋ ಸಮವಸ್ತ್ರ ಖರೀದಿ ಮಾಡಿದ್ದಾರೆ.

ಶಾಲೆಗೆ ಫ್ಯಾನ್, ಬೋಧನೆ–ಕಲಿಕೆ ಸಲಕರಣೆಗಳು ಇನ್ನಿತರ ವೆಚ್ಚಗಳನ್ನು ಭರಿಸಲು ಮೂವರೂ ಪ್ರತಿ ತಿಂಗಳು ರೂ.1,500 ವೆಚ್ಚ ಮಾಡುತ್ತಾರೆ. ಡಾಮ್ಹಾ ಕನ್ಯಾ ಒಂದು ಎಸ್‌ಎಸ್‌ಎ ಶಾಲೆಯಾಗಿದ್ದು, ಇದರಿಂದ ಶಿಕ್ಷಕರ ವೇತನ ಕೆಲವು ತಿಂಗಳು ವಿಳಂಬವಾಗಿ ಬರುವುದು ಸಾಮಾನ್ಯವಾಗಿದೆ. ಆದರೆ, ದುರ್ಗೇಶ್, ಸವಿತಾ ಹಾಗೂ

ಉಷಾಕಿರಣ್ ಇದನ್ನು ನಿಭಾಯಿಸಲು ಕಲಿತಿದ್ದಾರೆ. ವೇತನ ವಿಳಂಬ ಅವರ ಬದ್ಧತೆಯನ್ನು ಕುಗ್ಗಿಸಿಲ್ಲ.

ದುರ್ಗೇಶ್ ನಂದಿನಿ ಅವರಿಗೆ ಸಹೋದ್ಯೋಗಿ ಸವಿತಾ ಚಮೋಲಿ ಬಲಗೈ ಇದ್ದಂತೆ. ಸವಿತಾ ಕೂಡ ಶಾಲೆಯ ಆರಂಭದಿಂದಲೂ ಇದ್ದು, 1995ರಲ್ಲಿ ಶಿಕ್ಷಣ ಇಲಾಖೆ ಸೇರಿದ ಹಿರಿಯಾಕೆ. ಆಕೆಯ ಉತ್ಸಾಹ ಮಾತ್ರ ಎಣೆಯಿಲ್ಲದ್ದು. ಈ ಬಗ್ಗೆ ಅವರನ್ನು ಕೇಳಿದರೆ, ನಗುತ್ತಲೇ ಉತ್ತರ ಬರುತ್ತದೆ: "ನಾವು ಒಂದು ಕ್ಷಣ ಕೂಡ ಸೋಮಾರಿಯಾಗಿರಬಾರದು. ಮನಸ್ಸು ಯಾವಾಗಲೂ ಮಾಡಬೇಕಿರುವ ಕೆಲಸ, ಕಲಿಯಬೇಕಾದ ಹೊಸ ವಿಷಯಗಳ ಕಡೆಗೆ ಏಕಾಗ್ರವಾಗಿರಬೇಕು. ಈ ಹೆಣ್ಣು ಮಕ್ಕಳು ಪ್ರಶ್ನಿಸುವ ಮನೋಭಾವ ಬೆಳೆಸಿಕೊಳ್ಳಬೇಕು. ನನಗೆ ಗೊತ್ತಿಲ್ಲದ ವಿಷಯಗಳ ಕುರಿತೂ ಅವರು ಪ್ರಶ್ನೆ ಕೇಳಬೇಕು: ನಾನು ಓದಿಕೊಂಡು ಬಂದು ಅವರಿಗೆ ತಿಳಿಸಬೇಕಾದಂಥ ವಿಷಯ ಕುರಿತು ಕೇಳಬೇಕು ಎನ್ನುವುದು ನನ್ನ ಆಸೆ. ನಾನು ಕೆಲಸ ಮಾಡಿದ ಹಿಂದಿನ ಶಾಲೆಗೆ ಹೋಲಿಸಿದರೆ, ಈ ಶಾಲೆಯಲ್ಲಿ ಶಿಕ್ಷಕರ ನಡುವೆ ಪರಸ್ಪರ ನಂಬಿಕೆ ಮತ್ತು ಸ್ನೇಹ ಇದೆ. ಅದು ನನಗೆ ತುಂಬ ಇಷ್ಟದ ವಿಷಯ. ಈ ರೀತಿಯ ಪರಸ್ಪರ ನಂಬಿಕೆ ಅಪಾರ ಶಕ್ತಿಯನ್ನು ಸೃಷ್ಟಿಸುತ್ತದೆ, ಇಂತಹ ವಾತಾವರಣದಲ್ಲಿ ಎಷ್ಟು ಕೆಲಸ ಮಾಡಿದರೂ ಆಯಾಸ ಅಥವಾ ಬೇಸರ ಆಗುವುದಿಲ್ಲ."

ಡಾಮ್ಟಾದ 'ಭೋಜನ ಮಾತಾ'– ಶಾಲೆಯಲ್ಲಿ ಬಿಸಿಯೂಟ ಸಿದ್ಧಪಡಿಸಿ, ಬಡಿಸುವ ಮಹಿಳೆಯು ದುರ್ಗೇಶ್ ನಂದಿನಿ ಅವರ ತಂಡದ ಅವಿಭಾಜ್ಯ ಅಂಗವಾಗಿರುವುದು ಅವರು ಶಾಲೆಯ ಧ್ಯೇಯ–ಧೋರಣೆಗಳನ್ನೂ ನಾನಾ ಚಟುವಟಿಕೆಗಳನ್ನೂ ಸ್ಪಷ್ಟವಾಗಿ ವಿವರಿಸುತ್ತಿರುವಾಗಲೇ ನಿಚ್ಚಳವಾಯಿತು. ಬಿಸಿಯೂಟ ಸಿದ್ಧಪಡಿಸಿ, ಬಡಿಸುವ ಮಹಿಳೆಗೆ ಶಾಲೆಯ ದೈನಂದಿನ ಚಟುವಟಿಕೆ ಮಾತ್ರವಲ್ಲದೆ, ಉದ್ದೇಶ, ತತ್ವಾದರ್ಶ, ದೀರ್ಘಕಾಲೀನ ಧ್ಯೇಯವೇ ಮುಂತಾದ ಉನ್ನತ ವಿಚಾರಗಳ ಬಗ್ಗೆ ಇಂತಹ ಜ್ಞಾನವಿರುವುದು ಬಲು ಅಪರೂಪ ಎಂದೇ ಹೇಳಬಹುದು.

ಪ್ರೌಢಾವಸ್ಥೆಯ ಆರಂಭಿಕ ಹಂತದಲ್ಲಿರುವ ಈ ಮಕ್ಕಳು ತಮ್ಮ ಕುತೂಹಲ ಕೆರಳಿಸಿರುವ ಅಥವಾ ಆಸಕ್ತಿ ಇರುವ ಯಾವುದೇ, ಎಂತಹದ್ದೇ ಪ್ರಶ್ನೆಯನ್ನಾದರೂ ದುರ್ಗೇಶ್ ನಂದಿನಿ ಅವರಲ್ಲಿ ಕೇಳಬಹುದೆಂದು ಪ್ರೋತ್ಸಾಹಿಸಲಾಗಿತ್ತು. ಈ ಮಕ್ಕಳು ಈಗ ತಮ್ಮ ತಾಯಂದಿರ ಬಳಿ ಕೂಡ ಕೇಳಲು ಹಿಂಜರಿಯುವಂತಹ ಪ್ರಶ್ನೆಗಳನ್ನು ಶಿಕ್ಷಕಿಯರ ಬಳಿ ಕೇಳುತ್ತಾರೆ. "ಇವರು ಸಮುದಾಯ ಆರೋಗ್ಯ ಕೇಂದ್ರದ ವೈದ್ಯರನ್ನು ಯಾವುದೇ ಹಿಂಜರಿಕೆ ಇಲ್ಲದೆ ಭೇಟಿ ಮಾಡುತ್ತಾರೆ" ಎಂದು ಅವರು ಹೇಳಿದರು.

ವಿದ್ಯಾರ್ಥಿಗಳಲ್ಲಿ ನಾಯಕತ್ವವು ಸಹಜವಾಗಿ ಮೂಡಿಬರುತ್ತಿದೆ. ಆರೋಗ್ಯ ಮತ್ತು ವೈದ್ಯಕೀಯದಲ್ಲಿ ಆಸಕ್ತಿ ಇರುವ ವಿದ್ಯಾರ್ಥಿನಿಯು ಆರೋಗ್ಯ ದಾಖಲಾತಿ ಪುಸ್ತಕದ ನಿರ್ವಹಣೆಯ ಜವಾಬ್ದಾರಿ ವಹಿಸಿಕೊಂಡರೆ, ಕಬಡ್ಡಿ ಬಗ್ಗೆ ತಿಳಿದುಕೊಂಡ ಬಾಲಕಿಯರು ಶಾಲೆಯ ತಂಡಕ್ಕೆ ತರಬೇತಿ ನೀಡುತ್ತಾರೆ. ಡಾಮ್ಟಾ ಶಾಲೆಯ ಕಬಡ್ಡಿ ತಂಡ ಬ್ಲಾಕ್ ಹಾಗೂ ಜಿಲ್ಲಾ ಮಟ್ಟವನ್ನೂ ದಾಟಿ ರಾಜ್ಯ ಮಟ್ಟದಲ್ಲಿ ಪ್ರಶಸ್ತಿ ಪಡೆದಿದೆ. ರಾಷ್ಟ್ರ ಮಟ್ಟದಲ್ಲಿ ಉತ್ತರಾಖಂಡ್ ರಾಜ್ಯವನ್ನು ಈ ವಿದ್ಯಾರ್ಥಿಗಳು ಪ್ರತಿನಿಧಿಸಿದ್ದಾರೆ. ಬ್ಲಾಕ್, ಜಿಲ್ಲೆ, ಅಥವಾ ರಾಜ್ಯ ತಂಡದಲ್ಲಿ ಪಾಲ್ಗೊಂಡಿದ್ದ ಬಾಲಕಿಯರು ಮುಂದೆ ಬನ್ನಿ

ಎಂದಾಗ, 12ಕ್ಕೂ ಅಧಿಕ ಬಾಲಕಿಯರು ಮುಂದೆ ಬಂದರು. ಏರುತಗ್ಗಿನ, ಕಲ್ಲುಗಳಿಂದ ತುಂಬಿದ ಶಾಲೆಯ ಮೈದಾನದಲ್ಲಿ ಈ ಮಕ್ಕಳು ಪ್ರತಿದಿನ ಆಟವಾಡುತ್ತಾರೆ. "ಎಷ್ಟು ಜನರ ಮಂಡಿ ತರಚಿಹೋಗಿದೆ?" ಎನ್ನುವ ಪ್ರಶ್ನೆಗೆ ನಗುತ್ತ ಎಲ್ಲರೂ ಕೈಯೆತ್ತಿದರು!

---

## ಹಲವು ವರ್ಷಗಳಿಂದ ಈ ಮೇಷ್ಟ್ರು ಒಂಟಿಯಾಗಿ ೧೦೫ ಮಕ್ಕಳಿರುವ ಶಾಲೆಯನ್ನು ನಿಭಾಯಿಸುತ್ತಿದ್ದಾರೆ!

**ಅಶೋಕ್**

ಕಿರಿಯ ಪ್ರಾಥಮಿಕ ಶಾಲೆ, ಹೆಮ್ಮಡಗಿ, ರುಕ್ಮಾಪುರ ಕ್ಲಸ್ಟರ್
ಸುರಪುರ ಬ್ಲಾಕ್, ಯಾದಗಿರಿ ಜಿಲ್ಲೆ, ಕರ್ನಾಟಕ

---

ಅಶೋಕ್ ಯಾರಿಂದಲೂ ಕೀರ್ತಿಗಾಥೆ ಹಾಡಿಸಿಕೊಳ್ಳದ ನಿಜವಾದ ನಾಯಕ. ನೀವು ಅವರ ಶಾಲೆಯಲ್ಲಿ ಒಂದು ದಿನ ಕಳೆದರೆ, ಕರ್ನಾಟಕದ ಮೂಲೆಯೊಂದರಲ್ಲಿ ಈ ಸಭ್ಯ ಮನುಷ್ಯ ಏಕಾಂಗಿಯಾಗಿ ಮಾಡಿರುವ ಸಾಧನೆಗೆ ಮಾರು ಹೋಗುತ್ತೀರಿ. ಕರ್ನಾಟಕ ಶಿಕ್ಷಣ ಇಲಾಖೆಗೆ 2000ನೇ ಇಸವಿಯಲ್ಲಿ ಸೇರಿದಾಗ, ಅವರಿಗೆ ಕೇವಲ 20 ವರ್ಷ. ಅಂದಿನಿಂದಲೂ ಹೆಮ್ಮಡಗಿಯ ಕಿರಿಯ ಪ್ರಾಥಮಿಕ ಶಾಲೆಯಲ್ಲೇ ಸೇವೆ ಸಲ್ಲಿಸುತ್ತಿದ್ದಾರೆ. ಹೆಮ್ಮಡಗಿಯ ಜನಸಂಖ್ಯೆ ಒಂದು ಸಾವಿರಕ್ಕಿಂತ ಕಡಿಮೆ. ಗ್ರಾಮದಲ್ಲಿ ಕುರುಬ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಲಿಂಗಾಯತ ಸಮುದಾಯಗಳಿದ್ದು, ಹೆಚ್ಚಿನವರು ಬಡವರು ಹಾಗೂ ಕಷ್ಟಪಟ್ಟು ಜೀವನ ಸಾಗಿಸುವವರು. ಬಯಲು ಶೌಚ ಪದ್ಧತಿ ಈಗಲೂ ಇದ್ದು, ಶೌಚಾಲಯವಿರುವ ಮನೆ ಕಾಣಸಿಗುವುದು ಅಪರೂಪ. ಆದರೆ, ಅಶೋಕ್ ಶಾಲೆಗೆ ನೇಮಕಗೊಂಡ ಬಳಿಕ ಗ್ರಾಮಸ್ಥರು ಶಿಕ್ಷಣದ ಮೌಲ್ಯ ಅರಿತಿದ್ದಾರೆ; ಎಲ್ಲ ಮಕ್ಕಳೂ ಶಾಲೆಗೆ ಹೋಗುತ್ತಿದ್ದಾರೆ.

ಶಿಕ್ಷಕರಾಗಿ ಅಶೋಕ್ ಅವರದ್ದು ಸ್ವಯಂವಿಕಸನದ, ಸ್ವಯಂಕಲಿಕೆಯ ಹಾಗೂ ನಿರಂತರ ಪ್ರಗತಿಯ ಪಯಣ. ಪ್ರಾರಂಭಿಕ ವರ್ಷಗಳಲ್ಲಿ ಈ ಹೊರತಾಣೆ ಶಾಲೆಯಲ್ಲಿ ಒಂಟಿ ಶಿಕ್ಷಕನಾಗಿ ಕೆಲಸಮಾಡಿದ ಅವಧಿಯನ್ನು 'ಏಕಾಂತ ವಾಸ'ವೆಂದೂ ಪ್ರಯೋಗ ಮಾಡಿ ಪರೀಕ್ಷಿಸುವ ಕಾಲವೆಂದೂ ವರ್ಣಿಸುತ್ತಾರೆ. ಪಿಯುಸಿ ನಂತರ ಟಿಸಿಎಚ್ ಮಾಡಿದ್ದರೂ, ಅವರಿಗೆ ಶಿಕ್ಷಕನಾಗಿ ಪ್ರಾಯೋಗಿಕ ಅನುಭವ ಇರಲಿಲ್ಲ. ಸಾಂಪ್ರದಾಯಿಕ ಪದ್ಧತಿಯನ್ನು ಆಯ್ದುಕೊಂಡು, ಬೋಧನಾ ವಿಧಾನದೊಡನೆ ಕಸರತ್ತು ಮಾಡುತ್ತಿದ್ದ ಕಾಲ ಅದಾಗಿತ್ತು. ಮಕ್ಕಳು ಹೇಗೆ ಕಲಿಯುತ್ತವೆ ಎನ್ನುವುದು ಅವರಿಗೆ ತಿಳಿದಿರಲಿಲ್ಲ. 'ಸಿಎಫ್ಎಸ್ಐ'ನಲ್ಲಿ 2004ರಲ್ಲಿ ಮೊದಲ ಮೌಲ್ಯಯುತ ತರಬೇತಿಯನ್ನು ಅವರು ಪಡೆದರು. ಈ ಕಾರ್ಯಕ್ರಮದ ಅಂಗವಾಗಿ, ಶಿಕ್ಷಕರಿಗೆ ನಲಿ–ಕಲಿ ಬೋಧನೆಯಲ್ಲಿ ತರಬೇತಿ ನೀಡಲಾಯಿತು. ಅಶೋಕ್ ಇದನ್ನು ಅಪ್ಪಿ, ಜೀರ್ಣಿಸಿಕೊಂಡು ಅದರ ವಿಷಯ ಹಾಗೂ ಸಾರವನ್ನು ಕರಗತ ಮಾಡಿಕೊಂಡರು. ಎಷ್ಟು ಒಳ್ಳೆಯ ಶಿಕ್ಷಕನಾಗಲು ಸಾಧ್ಯವೋ ಅಷ್ಟು ಉತ್ತಮನಾಗಬೇಕೆಂಬ ಜ್ವಲಂತ ಹಂಬಲ ಹೊಂದಿದ್ದ ಅವರಿಗೆ ಬೋಧನೆಯ ತರಬೇತಿಯು ಇಂಬು ನೀಡಿತು. "ಈ ಮೊದಲು ಸಾಂಪ್ರದಾಯಿಕ

ವಿಧಾನದಿಂದಾಗಿ 20ರಲ್ಲಿ 10 ಮಕ್ಕಳು ಮಾತ್ರ ಕಲಿಯುತ್ತಿದ್ದರು. ನಲಿ-ಕಲಿಯಲ್ಲಿ ಕಲಿಕೆಗೆ ಹೆಚ್ಚು ಸಮಯ ಹಾಗೂ ಪ್ರಯತ್ನ ಬೇಕಾಗುವುದಾದರೂ ಎಲ್ಲಾ ಮಕ್ಕಳೂ ಕಲಿಯುತ್ತಾರೆ" ಅನ್ನುತ್ತಾರೆ ಅಶೋಕ್. ಅವರು ನಲಿ-ಕಲಿ ಮೇಲೆ ಸಂಪೂರ್ಣ ಹಿಡಿತ ಹೊಂದಿರುವುದರಿಂದ, ಈ ಬೋಧನ ವಿಧಾನದಲ್ಲಿ ತರಬೇತಿ ನೀಡುವ ಜಿಲ್ಲಾ ಸಂಪನ್ಮೂಲ ವ್ಯಕ್ತಿಯೂ ಆಗಿದ್ದಾರೆ.

ಹೆಮ್ಮಡಗಿಯ ಎಲ್‌ಪಿಎಸ್‌ಗೆ ಅವರು ಬಂದ ಬಳಿಕ ಒಂದೇ ಒಂದು ಮಗು ಶಾಲೆಯನ್ನು ತೊರೆದಿಲ್ಲ. ಪ್ರತಿಯೊಂದು ಮಗುವನ್ನು ಕುರಿತು ಅವರಿಗಿರುವ ಬದ್ಧತೆಗೆ ಇದು ಸಾಕ್ಷಿಯಾಗಿದೆ. ಶಾಲೆಯಿಂದ ತೇರ್ಗಡೆಯಾಗಿ ಹೋದ ಪ್ರತಿಯೊಂದು ಮಗುವೂ ಹಿರಿಯ ಪ್ರಾಥಮಿಕ ಶಾಲೆಗೆ ದಾಖಲಾಗುವಂತೆ ಅವರು ಖಾತ್ರಿಪಡಿಸಿಕೊಳ್ಳುತ್ತಾರೆ. ಮನೆಯಲ್ಲಿನ ಸಣ್ಣ ಮಕ್ಕಳ ಆರೈಕೆ, ಮನೆಗೆಲಸ ಹಾಗೂ ಗ್ರಾಮದಲ್ಲಿ ಅಂಗನವಾಡಿ ಇಲ್ಲದೆ ಇರುವುದು ಅವರ ಮಾರ್ಗದಲ್ಲಿನ ಅಡೆತಡೆಗಳಾದರೂ, ಅವನ್ನು ದಾಟುವ ಮೂಲಕ ಈ ಸಣ್ಣ ಹಳ್ಳಿಯು ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣದ ಪ್ರಧಾನ ಗುರಿಯನ್ನು ಸಾಧಿಸಿದ್ದಾರೆ.

ಶಾಲೆಯಲ್ಲಿ 105 ಮಕ್ಕಳಿದ್ದು, ಎರಡು ಕೊಠಡಿಗಳು ರಸ್ತೆಯ ಎರಡು ಬದಿಗಳಲ್ಲಿವೆ. ಹೀಗಾಗಿ, ಐದು ತರಗತಿಗಳನ್ನು ನಿರ್ವಹಿಸಲು ಅಶೋಕ್ ಪ್ರತಿದಿನ ಹಲವು ಬಾರಿ ರಸ್ತೆಯನ್ನು ದಾಟಬೇಕಾಗುತ್ತದೆ. 17 ವರ್ಷಗಳ ಹಿಂದೆ ಅವರು ಇಲ್ಲಿಗೆ ಬಂದಾಗ, ದುರ್ಗಮ ಮೂಲೆಯೊಂದರಲ್ಲಿದ್ದ ಹೆಮ್ಮಡಗಿ ಎಂಬ ಸಣ್ಣ ಗ್ರಾಮಕ್ಕೆ ಬಸ್ ಸೌಕರ್ಯ ಇರಲಿಲ್ಲ. ಹೀಗಾಗಿ, ಅಶೋಕ್ ಪಕ್ಕದ ಸುಗೂರಿನಲ್ಲಿ ತಂಗುವ ವ್ಯವಸ್ಥೆ ಮಾಡಿಕೊಂಡರು. ಸುಗೂರಿನಲ್ಲಿ ಉಳಿದುಕೊಂಡಿದ್ದರಿಂದ ಪ್ರತಿದಿನ ಶಾಲೆಗೆ 8 ಗಂಟೆಗೆ ಬರಲು ಮತ್ತು ತಡವಾಗಿ ಹೋಗಲು ಸಾಧ್ಯವಾಗುತ್ತಿತ್ತು. ಇದರಿಂದ ಮಕ್ಕಳ ಜೊತೆಗೆ ಅಗತ್ಯ ಬಂಧವನ್ನು ಬೆಳೆಸಿಕೊಳ್ಳಲು ಅನುಕೂಲವಾಯಿತು. "ಹಳ್ಳಿಯಲ್ಲಿ ಉಳಿದುಕೊಂಡಿದ್ದರಿಂದ ಹಣ ಉಳಿಸಿದೆ. ನಗರದಲ್ಲಿ ವಾಸ್ತವ್ಯ ಹೂಡಿದ್ದರೆ, ಹೆಚ್ಚು ಹಣ ಖರ್ಚಾಗುತ್ತಿತ್ತು. ಮದುವೆಯ ನಂತರವೂ ನಾನು ಸುಗೂರಿನಲ್ಲೇ ಉಳಿದುಕೊಂಡೆ. ನನ್ನ ಮಗ ಕೂಡ ನನ್ನ ಶಾಲೆಯಲ್ಲೇ ವ್ಯಾಸಂಗ ಮಾಡುತ್ತಾನೆ." ಅಶೋಕ್ ನಗುತ್ತಲೇ ಹೇಳಿದರು.

ಒಂದು ವೇಳೆ ನೀವು ಈ ಶಾಲೆಗೆ ಭೇಟಿ ನೀಡಿದರೆ ಶಾಲೆ ಎಂಬ ಕುರುಹಿಗಾಗಿ ಒಂದು ಹಳೆಯ ಜರ್ಜರಿತವಾದ, ಬೇರಾವ ಮೂಲಸೌಲಭ್ಯಗಳೂ ಇಲ್ಲದ ಕಟ್ಟಡವನ್ನು ಕಾಣುತ್ತೀರಿ. ಆದರೆ ಅಲ್ಲಿ ಉತ್ಸಾಹದಿಂದ ಪುಟಿಯುವ, ಕುತೂಹಲಿಗಳಾದ, ಭಯವಿಲ್ಲದ ವಿಚಾರವಂತ ಮಕ್ಕಳನ್ನು ನೋಡುತ್ತೀರಿ. ಅಶೋಕ್ ಒಂದರಿಂದ ಮೂರನೇ ತರಗತಿ ಮಕ್ಕಳಿಗೆ (ಒಟ್ಟಿಗೇ ಕಲಿಸಲಾಗುತ್ತದೆ) ಪಾಠ ಹೇಳುವುದರಲ್ಲಿ ಮಗ್ನರಾಗಿದ್ದರೆ, ರಸ್ತೆಯನ್ನು ದಾಟಿ ನಾಲ್ಕು ಹಾಗೂ ಐದನೇ ತರಗತಿ ಬಳಿ ಬಂದರೆ, ಆ ಮಕ್ಕಳು ಸ್ವತಂತ್ರವಾಗಿ ಕೆಲಸ ಮಾಡುತ್ತಿರುವುದನ್ನು ಕಾಣಬಹುದು. ಆ ಮಕ್ಕಳು ಅಶೋಕ್ ತಿಳಿಸಿಕೊಟ್ಟ ಪರಿಕಲ್ಪನೆಗಳ ಮೇಲೆ ಕಲಿಕೆ ಮುಂದುವರಿಸಿರುತ್ತಾರೆ. ನಾಲ್ವರು ಅಥವಾ ಐದು ಮಕ್ಕಳು ನೇತೃತ್ವ ವಹಿಸಿಕೊಂಡು, ಉಳಿದವರಿಗೆ ನೆರವಾಗುತ್ತಾರೆ. ಗಣಿತದಲ್ಲಿ ತಮ್ಮದೇ ಲೆಕ್ಕಗಳನ್ನು ಸೃಷ್ಟಿಸಿಕೊಂಡು, ತರಗತಿಯ ಎಲ್ಲರನ್ನೂ, ಅದನ್ನು ಗ್ರಹಿಸಲಾಗದೆ ಕಷ್ಟಪಡುತ್ತಿರುವ ಮಗುವನ್ನೂ ಸೇರಿಸಿಕೊಂಡು, ಉತ್ತರಗಳನ್ನು

ಕಂಡುಕೊಳ್ಳುತ್ತಾರೆ. ಬೇರೆ ಶಾಲೆಗಳ ಮಕ್ಕಳಿಗೆ ಹೋಲಿಸಿದರೆ, ಇವರ ಚುರುಕುತನ ಹಾಗೂ ಹರಿತವಾದ ಬುದ್ಧಿ ಅಸಾಮಾನ್ಯವಾದುದು. "ನನ್ನ ಅರ್ಧಾಂಶ ಕೆಲಸವನ್ನು ಈ ಮಕ್ಕಳು ಮಾಡುತ್ತಾರೆ. ಇಲ್ಲಿ 105 ಮಕ್ಕಳಿದ್ದು, ಮಕ್ಕಳ ಸಹಾಯವಿಲ್ಲದೆ ಎಲ್ಲ ತರಗತಿಗಳಿಗೂ ಬೋಧಿಸುವುದು ಮನುಷ್ಯ ಮಾತ್ರರಿಗೆ ಸಾಧ್ಯವಿಲ್ಲ. ಮಕ್ಕಳ ಸಚಿವ ಸಂಪುಟವೊಂದನ್ನು ರಚಿಸಿದ್ದು, ಇವರು ಪ್ರತಿದಿನ ಬೆಳಗ್ಗೆ ಶಾಲೆಯನ್ನು ತೆರೆಯುವುದು, ಸ್ವಚ್ಛಗೊಳಿಸುವುದು ಹಾಗೂ ಸಂಜೆ ವೇಳೆ ಶಾಲೆಯನ್ನು ಮುಚ್ಚುವ ಜವಾಬ್ದಾರಿ ವಹಿಸಿಕೊಂಡಿದ್ದಾರೆ. ಈ ವ್ಯವಸ್ಥೆ ಎಂಟು ವರ್ಷದಿಂದ ಯಾವುದೇ ಸಮಸ್ಯೆಯಿಲ್ಲದೆ ನಡೆಯುತ್ತಿದೆ: ಒಂದು ವೇಳೆ ನಾನು ಒಂದೆರಡು ನಿಮಿಷ ತಡವಾಗಿ ಬಂದರೂ, ಶಾಲೆ ಸರಿಯಾದ ಸಮಯಕ್ಕೆ ಆರಂಭವಾಗುವಂತೆ ಮಕ್ಕಳು ನೋಡಿಕೊಳ್ಳುತ್ತಾರೆ. ತಾವೇ ಮುಂದಾಗಿ ಬೆಳಗಿನ ಪ್ರಾರ್ಥನೆಯನ್ನು ಸಂಘಟಿಸಿ, ನಡೆಸುತ್ತಾರೆ." 'ಕೆಎಸ್‌ಕ್ಯುಎಎಸಿ' 2016ರ ಮೌಲ್ಯಮಾಪನದಲ್ಲಿ ಹೆಮ್ಮಡಗಿಯ ಎಲ್‌ಪಿಎಸ್, ಗಣಿತ ಹಾಗೂ ಇವಿಎಸ್‌ನಲ್ಲಿ ಉತ್ತಮ ಶಾಲೆಗಳಲ್ಲಿ ಒಂದು ಎಂದು ಮನ್ನಣೆ ಪಡೆಯಿತು. ಅಶೋಕ್ ಇದನ್ನು ಇನ್ನಷ್ಟು ಉತ್ತಮಗೊಳಿಸುವ ಗುರಿ ಇರಿಸಿಕೊಂಡಿದ್ದಾರೆ. "ಮುಂದಿನ ಸಲ ಭಾಷೆಯ ಮೌಲ್ಯ ಮಾಪನದಲ್ಲಿ ಶಾಲೆಯ ಸಾಧನೆ ಉತ್ತಮಗೊಳ್ಳಬೇಕು" ಎನ್ನುವುದಕ್ಕೆ ಗಮನವನ್ನು ಕೇಂದ್ರೀಕರಿಸಿದ್ದಾರೆ.

ಮಕ್ಕಳ ಜೊತೆಗಿನ ಅಶೋಕರ ಸ್ನೇಹ ಅತ್ಯಂತ ಆಪ್ತವಾದುದು. ಮನೆಗಳಲ್ಲಿ ಕಲಿಕೆಯ ವಾತಾವರಣ ಇಲ್ಲದೆ ಇರುವುದರಿಂದ, ಅವರು ಪ್ರತಿದಿನ ಸ್ವಲ್ಪ ಮನೆಕೆಲಸ ಕೊಡುತ್ತಾರೆ. ಪ್ರತಿಯೊಂದು ಮಗುವಿನ ಮನೆಪಾಠವನ್ನು ಪರಿಶೀಲಿಸಿ, ತಿದ್ದುತ್ತಾರೆ. ಸಾಯಂಕಾಲ ಮನೆಗೆ ಹೊರಡುವ ಮುನ್ನ ಎಲ್ಲ ಆಡಳಿತಾತ್ಮಕ ಪತ್ರ ವ್ಯವಹಾರ ಮುಗಿಸುತ್ತಾರೆ. ಅವರಿಂದ ಉಪಕೃತರಾದ ಮಕ್ಕಳು ಹಳೆಯ ವಿದ್ಯಾರ್ಥಿಗಳ ಸಂಘ ಮಾಡಿಕೊಂಡಿದ್ದು ಶಾಲೆಯ ಪ್ರಮುಖ ಆಗುಹೋಗುಗಳಲ್ಲಿ ಪಾಲ್ಗೊಳ್ಳುತ್ತಾರೆ. ಶಾಲೆಯಲ್ಲಿ ಗ್ರಂಥಾಲಯ ಸ್ಥಾಪಿಸಿದ್ದಾರೆ; ಅಶೋಕ್ ಹೊರಗೆ ಹೋಗಬೇಕಾದ ಅನಿವಾರ್ಯ ಸಂದರ್ಭದಲ್ಲಿ ತಾವೇ ಬಂದು ತರಗತಿಗಳನ್ನು ನಿರ್ವಹಿಸುತ್ತಾರೆ. ಸಮುದಾಯದ ಜೊತೆಗಿನ ತಮ್ಮ ಅತ್ಯುತ್ತಮ ಸಂಬಂಧವನ್ನು ಅಶೋಕ್ ಸರಳವಾಗಿ ಹೀಗೆ ವಿವರಿಸುತ್ತಾರೆ: "ಇದರಲ್ಲಿ ವಿಶೇಷವಾದುದು ಏನೂ ಇಲ್ಲ. ನಾನು ನನ್ನ ಕೆಲಸ ಮಾಡುತ್ತೇನೆ; ಅವರು ಅದನ್ನು ಗೌರವಿಸುತ್ತಾರೆ. ಎಸ್‌ಡಿಎಂಸಿ ಚುನಾವಣೆ ಹೊರತುಪಡಿಸಿ, ಸಮುದಾಯದ ವಿಷಯದಲ್ಲಿ ನಾನು ತಲೆ ಹಾಕುವುದಿಲ್ಲ. ಆ ಚುನಾವಣೆ ನ್ಯಾಯಬದ್ಧವಾಗಿ ನಡೆಯುವಂತೆ ನೋಡಿಕೊಳ್ಳುತ್ತೇನೆ."

ಈ ವಿಶಿಷ್ಟ ಕಥನದಲ್ಲಿನ ಬೇಸರದ ಭಾಗವೆಂದರೆ, ಅಶೋಕ್ ಅವರಿಗೆ ಹಲವು ವರ್ಷಗಳಿಂದ ಸಹೋದ್ಯೋಗಿ ದೊರೆಯದಿರುವುದು. ಇಲ್ಲಿಗೆ ನೇಮಕಗೊಂಡಿದ್ದ ಇನ್ನೊಬ್ಬ ಶಿಕ್ಷಕ ಬೇರೆ ಶಾಲೆಗೆ ನಿಯೋಜಿತಗೊಂಡರು. ಸಿಟ್ಟಿಗೆದ್ದ ಸಮುದಾಯದವರು ಶಾಲೆಗೆ ಬೀಗ ಹಾಕಿ ಪ್ರತಿಭಟಿಸಿ, ಟಿವಿ ಚಾನೆಲ್‌ಗಳು ಸೇರಿದಂತೆ, ಮಾಧ್ಯಮದವರ ಗಮನ ಸೆಳೆದರು. ಪ್ರತಿಭಟನೆ ಇಲಾಖೆಯ ಗಮನವನ್ನೂ ಸೆಳೆದು, ಇತ್ತೀಚೆಗೆ ಇನ್ನೊಬ್ಬರು ಶಿಕ್ಷಕರನ್ನು ನೇಮಿಸಲಾಗಿದೆ. ಏನೇ ಇರಲಿ, ಅಶೋಕ್ ಮಾತ್ರ ಎಂದಿನಂತೆ

ಅತ್ಯಾಸಕ್ತಿಯಿಂದ ತಮ್ಮ ಕೆಲಸ ಮುಂದುವರಿಸಿದ್ದು, ತಮ್ಮ ಕಲಿಕೆ ಹಾಗೂ ಅಭಿವೃದ್ಧಿಗೆ ಲಭ್ಯವಿರುವ ಎಲ್ಲ ಅವಕಾಶಗಳನ್ನು ಬಳಸಿಕೊಳ್ಳುತ್ತಿದ್ದಾರೆ. ಟಿಎಲ್‌ಸಿ ಮನೆಯಿಂದ 18 ಕಿ.ಮೀ. ದೂರದಲ್ಲಿದ್ದರೂ, ಅಲ್ಲಿಗೆ ನಿಯತವಾಗಿ ಭೇಟಿ ನೀಡಿ, ಶಿಕ್ಷಕರೊಂದಿಗೆ ಕಲಿಕಾ ಸಾಧನಗಳ ಅಭಿವೃದ್ಧಿ ಹಾಗೂ ಬೋಧನೆಯನ್ನು ಕುರಿತು ಚರ್ಚಿಸುತ್ತಾರೆ. ನಲಿ–ಕಲಿಯಲ್ಲಿ ಪರಿಣತರಾದ್ದರಿಂದ, ಈ ವೇದಿಕೆಯಲ್ಲಿ ಅವರ ಕೊಡುಗೆಗಳಿಗೆ ಶ್ಲಾಘನೆ ವ್ಯಕ್ತವಾಗಿದೆ. ಕೆಲವು ವ್ಯಕ್ತಿಗಳು ತಮ್ಮ ಒಳ್ಳೆಯ ಗುಣಗಳಿಂದ ನಮ್ಮ ಮೇಲೆ ಅಚ್ಚಳಿಯದ ಛಾಪು ಮೂಡಿಸುತ್ತಾರೆ. ಅಶೋಕ್ ಅಂಥ ಅವಗೋಚರವಾದ ಆಕರ್ಷಣೀಯ ವ್ಯಕ್ತಿತ್ವ ಹೊಂದಿದ್ದಾರೆ.

---

## ಮಕ್ಕಳಿಗೆ ರಾತ್ರಿ ವಸತಿಯನ್ನೂ ನೀಡುವ ಶಾಲೆ

**ಅಚ್ಚಪ್ಪ ಗೌಡರ್**

*ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಜುಮಾಲ್ಪುರ ದೊಡ್ಡ ತಾಂಡಾ*

ಸುರಪುರ ಬ್ಲಾಕ್, ಯಾದಗಿರಿ ಜಿಲ್ಲೆ, ಕರ್ನಾಟಕ

---

ಜುಮಾಲ್ಪುರ ದೊಡ್ಡ ತಾಂಡಾ ಗ್ರಾಮದಲ್ಲಿ ಅಚ್ಚಪ್ಪ ಗೌಡರ್ ಒಂದು ಸಂಸ್ಥೆಯಿದ್ದಂತೆ. ಹೀಗೆ ಹೇಳುವುದಕ್ಕೆ ತಕ್ಕ ಕಾರಣಗಳಿವೆ. 1999ರಲ್ಲಿ ಶಿಕ್ಷಣ ಇಲಾಖೆಗೆ ಸೇರ್ಪಡೆಗೊಂಡಾಗ ಅವರ ಮೊದಲ ನೇಮಕ ಆಗಿದ್ದು ಈ ಶಾಲೆಗೆ. ಅಂದರೆ, ಅವರು ಇಲ್ಲಿ 18 ವರ್ಷಕ್ಕೂ ಅಧಿಕ ಕಾಲದಿಂದ ಇದ್ದಾರೆ. ಗ್ರಾಮ, ಶಾಲೆ ಹಾಗೂ ಅವರ ಅದೃಷ್ಟ ಇವೆಲ್ಲವೂ ಯಾವುದೋ ಕಟ್ಟುಕತೆಯಲ್ಲಿದ್ದಂತೆ ಒಂದಕ್ಕೊಂದು ಹೆಣೆದುಕೊಂಡಿವೆ. ಅವರ ಹುಟ್ಟಿದೂರು ಇಲ್ಲಿಂದ ಹನ್ನೆರಡು ಕಿಮೀ ದೂರದಲ್ಲಿದ್ದು, ಅಲ್ಲಿ ಅವರಿಗೆ ಹನ್ನೆರಡು ಎಕರೆ ಭೂಮಿಯಿದೆ. ಅದನ್ನು ಅವರ ಸೋದರ ಸಂಬಂಧಿ ನೋಡಿಕೊಳ್ಳುತ್ತಾರೆ.

ಅಚ್ಚಪ್ಪ ಗೌಡರ್ ಅವರ ಸಂಪೂರ್ಣ ಸಮಯ ಹಾಗೂ ಗಮನ ಶಾಲೆಗೆ ಮೀಸಲು. ಹಲವು ವರ್ಷಗಳಿಂದ ವಿದ್ಯಾರ್ಥಿಗಳ ನೋಂದಣಿ ಹೆಚ್ಚಿನ ಏರಿಳಿತಗಳಿಲ್ಲದೆ ಸ್ಥಿರವಾಗಿದೆ. ಅವರು ಶಿಕ್ಷಕರಾಗಿ ಸೇರಿದಾಗ ಮುನ್ನೂರು ಮಕ್ಕಳು ಹಾಗೂ ಐವರು ಶಿಕ್ಷಕರು ಇದ್ದರು. ಈಗ, ಹದಿನೆಂಟು ವರ್ಷಗಳ ಬಳಿಕ ಮುನ್ನೂರ ಐವತ್ತು ಮಕ್ಕಳು ಹಾಗೂ ಐವರು ಶಿಕ್ಷಕರು ಇದ್ದಾರೆ. ಅಚ್ಚಪ್ಪ ಈ ಶಾಲೆಯಲ್ಲಿ ಸೇವೆ ಸಲ್ಲಿಸುತ್ತಿರುವಾಗಲೇ ಮೂವರು ಮುಖ್ಯ ಶಿಕ್ಷಕರು ಬಂದು, ಹೋದರು. ಅವರಿಗೆ ಅಚ್ಚಪ್ಪ ಶಾಲೆಯ ಸುಧಾರಣೆಗೆ ಹಲವು ಸಲಹೆ ನೀಡಿದರು. ಆದರೆ, ಈ ಹಿಂದಿನ ಯಾವ ಮುಖ್ಯ ಶಿಕ್ಷಕರೂ ಅವುಗಳನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ಹಿಂದೆ ಇದ್ದವರು ವರ್ಗಾವಣೆಯಾದ ಬಳಿಕ, ಅಕ್ಟೋಬರ್ 2015ರಿಂದ ಅಚ್ಚಪ್ಪ ಹಂಗಾಮಿ ಮುಖ್ಯ ಶಿಕ್ಷಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಅಚ್ಚಪ್ಪ ಅವರಿಗೆ ಹಿಂದಿನವರಿಂದ ಬಂದಿದ್ದು ಒಂದು ಹಳೆಯ ಕಟ್ಟಡ – ಒಂದೇ ಸಾಲಿನಲ್ಲಿರುವ ನಾಲ್ಕು ಕೊಠಡಿಗಳು. ಇದರಲ್ಲಿ ಎರಡು ಮಾತ್ರ ಬಳಕೆಗೆ ಯೋಗ್ಯವಾಗಿವೆ (ಉಳಿದ ಎರಡು ಶಿಥಿಲವಾಗಿವೆ): ಬಳಸದೆ ಶೌಚಾಲಯ ಹಾಳಾಗಿದೆ; ಕುಡಿಯುವ ನೀರಿನ ಸೌಕರ್ಯ ಇಲ್ಲ.

ಜುಮಾಲ್ಪುರ ತಾಂಡಾ ಸುರಪುರ ಬ್ಲಾಕ್ ದಕ್ಷಿಣ ಭಾಗದಲ್ಲಿರುವ ಸಣ್ಣ ಹಳ್ಳಿ. ಹತ್ತಿರದ ಪಟ್ಟಣಕ್ಕೆ ಒಂದು ಗಂಟೆ ಪ್ರಯಾಣ ಮಾಡಬೇಕು. ಜಿಲ್ಲಾ ಕೇಂದ್ರವಾದ ಯಾದಗಿರಿ 120 ಕಿಮೀ ದೂರದಲ್ಲಿದೆ. ಜನಸಂಖ್ಯೆಯ ಶೇ.75ರಷ್ಟು ಎಸ್‌ಸಿ ಮತ್ತು ಎಸ್‌ಟಿ ಸಮುದಾಯದವರು. ಸಣ್ಣ ಹಿಡುವಳಿ ಇರುವ ಕೆಲವರನ್ನು ಹೊರತುಪಡಿಸಿದರೆ, ಹೆಚ್ಚಿನವರು ಕೃಷಿ ಕಾರ್ಮಿಕರಾಗಿ ಕೆಲಸ ಮಾಡುತ್ತಾರೆ. ವರ್ಷದಲ್ಲಿ ಇಂಥ ಕೆಲಸ ಹೆಚ್ಚು ಕಾಲ ಸಿಗುವುದಿಲ್ಲವಾದ್ದರಿಂದ, ತಾಂಡಾದ ಜನರಿಗೆ ಕೂಲಿ ಕೆಲಸ ಅರಸಿಕೊಂಡು ವಲಸೆ ಹೋಗುವುದು ಬಿಟ್ಟರೆ ಬೇರೆ ಆಯ್ಕೆ ಇಲ್ಲ. ಪ್ರತಿ ವರ್ಷ ಹಲವು ತಿಂಗಳು ಬೆಳಗಾವಿ, ಜಮಖಂಡಿ ಮತ್ತು ಬೆಂಗಳೂರು ಮುಂತಾದ ಸ್ಥಳಗಳಿಗೆ ವಲಸೆ ಹೋಗುತ್ತಾರೆ. ಈ ಹಿಂದೆ ಅಕ್ಟೋಬರ್‌ನಿಂದ ಏಪ್ರಿಲ್‌ವರೆಗೆ 350 ವಿದ್ಯಾರ್ಥಿಗಳಲ್ಲಿ 150 ಮಕ್ಕಳು ಮಾತ್ರ ಶಾಲೆಗೆ ಬರುತ್ತಿದ್ದರು. ಉಳಿದವರು ತಮ್ಮ ಪೋಷಕರೊಂದಿಗೆ ಹೋಗಿ ಹಲವು ತಿಂಗಳುಗಳ ಬಳಿಕ ವಾಪಸಾಗುತ್ತಿದ್ದರು. ಇದು ಬಲು ಗೋಜಲಿನ ಸಮಸ್ಯೆಯೇ ಆಗಿತ್ತು. ಸಾಮಾನ್ಯರಿಂದ ಇದಕ್ಕೆ ಪರಿಹಾರ ಸಾಧ್ಯವಿರಲಿಲ್ಲ. ಇದಕ್ಕೆ ಅಚ್ಚಪ್ಪ ಗೌಡರಿಗೆ ಹೊಳೆದ ಪರಿಹಾರವೂ ಅಂತಹುದೇ ಒಂದು ಅಸಾಮಾನ್ಯ ಸಂಗತಿ. ವಲಸೆ ಹೋಗುವ ಪೋಷಕರು ಶಾಲೆಗೆ ಹೋಗುವ ಮಕ್ಕಳನ್ನು ಊರಲ್ಲಿಯೇ ಉಳಿಸಿಕೊಂಡು ಶಾಲೆಯಲ್ಲಿ ವಸತಿ ಒದಗಿಸುವ 'ಹುಚ್ಚು' ಎಂದು ಸಾಮಾನ್ಯರು ವರ್ಣಿಸಬಹುದಾದ ಸಾಹಸಕ್ಕೆ ಕೈಹಾಕಿದರು. ಪೋಷಕರ ಮನ ಒಲಿಸಬೇಕಿದ್ದರೆ ಶಾಲೆಯಲ್ಲಿ ಮಕ್ಕಳಿಗೆ ಉಳಿದುಕೊಳ್ಳಲು ಸುರಕ್ಷಿತವಾದ ಸ್ಥಳದ ಅಗತ್ಯವಿತ್ತು. ಇದಕ್ಕಾಗಿ ಮೊದಲಿಗೆ ಶಾಲೆಯ ಮೂಲ ಸೌಲಭ್ಯದ ದುರಸ್ತಿ ಮತ್ತು ನವೀಕರಣ ಆಗಬೇಕಿತ್ತು. "ನಾನು ಮುಖ್ಯ ಶಿಕ್ಷಕನಲ್ಲ; ತಾತ್ಕಾಲಿಕ ಮುಖ್ಯ ಶಿಕ್ಷಕ" ಎಂದು ಅಚ್ಚಪ್ಪ ಈಗಾಗಲೇ ನಾಲ್ವರು ಸಹೋದ್ಯೋಗಿಗಳ ಮನವೊಲಿಸಿದ್ದರು. ಅವರೆಲ್ಲ ಒಂದು ತಂಡವಾಗಿ ಈ ಕಾರ್ಯದ ಸಾಧನೆಗೆ ಮುನ್ನುಗ್ಗಿದರು.

ಅವರ ಮೊದಲ ಹಂತದ ಕೆಲಸ, ಬೀಳುವ ಸ್ಥಿತಿಯಲ್ಲಿದ್ದ ಕಟ್ಟಡದ ಜಾಗದಲ್ಲಿ ಆಕರ್ಷಕ ಕೊಠಡಿಗಳನ್ನು ಕಟ್ಟುವುದಾಗಿತ್ತು. ಎರಡು ವರ್ಷದ ಮೊದಲು ಇದಕ್ಕಾಗಿ ಅನುದಾನ ಬಿಡುಗಡೆಯಾಗಿದ್ದರೂ ಕಟ್ಟಡ ನಿರ್ಮಾಣ ಕೆಲಸ ಪ್ರಾರಂಭವಾಗದಿದ್ದರಿಂದ ಅನುದಾನ ರದ್ದಾಗಿತ್ತು. ಇದು ಅಚ್ಚಪ್ಪಗೌಡರ ಅಸಮಾಧಾನಕ್ಕೆ ಕಾರಣವಾಗಿತ್ತು. "ನಾನು ಇದನ್ನು ಮಾಡಿಯೇ ತೀರುತ್ತೇನೆ" ಎಂದು ಅಚ್ಚಪ್ಪ ಅಂದು ಶಪಥ ಮಾಡಿದ್ದರು. ಹಂಗಾಮಿ ಮುಖ್ಯ ಶಿಕ್ಷಕರಾದ ಬಳಿಕ ಉಪ ಕಾರ್ಯಕ್ರಮ ಸಂಯೋಜಕರ (ಡೆಪ್ಯುಟಿ ಪ್ರಾಜೆಕ್ಟ್ ಕೋ-ಆರ್ಡಿನೇಟರ್) ಕಚೇರಿಗೆ ಹೋಗಿ, ಮೂರು ಕಟ್ಟಡಗಳಿಗೆ ಮಂಜೂರಾತಿಯನ್ನೂ ಹೊಸ ಅನುದಾನವನ್ನೂ ಪಡೆಯುವಲ್ಲಿ ಸಫಲರಾದರು. ಹಣವನ್ನು ಶಾಲೆಯ ಬ್ಯಾಂಕ್ ಖಾತೆಯಲ್ಲಿ ಠೇವಣಿ ಇರಿಸಿ, ಕಾಮಗಾರಿ ಆರಂಭಿಸಲಾಯಿತು. ಶಾಲಾ ಕಟ್ಟಡ ಭದ್ರವೂ ಆಕರ್ಷಕವೂ ಆಗಿರಬೇಕು ಎಂದು ಅಚ್ಚಪ್ಪ ನಿರ್ಧರಿಸಿದ್ದರು. ನಿರ್ಮಾಣ ಕಾಮಗಾರಿಯ ಪ್ರತಿ ಹಂತದ ವೈಯಕ್ತಿಕ ಮೇಲುಸ್ತುವಾರಿಯನ್ನು ಅವರು ವಹಿಸಿದರು. ನೆಲ ಸಮತಟ್ಟುಗೊಳಿಸುವುದರಿಂದ ತೊಡಗಿ ಕಾಮಗಾರಿ ಆರಂಭ ಹಾಗೂ ನಿರ್ಮಾಣ ಕಾರ್ಯ ಪ್ರಗತಿ ಸಾಧಿಸಿದಂತೆ, ಪ್ರತಿದಿನ ಬೆಳಗ್ಗೆ ಎಂಟರಿಂದ ರಾತ್ರಿ ಎಂಟರವರೆಗೆ ಅಚ್ಚಪ್ಪ ಸ್ಥಳದಲ್ಲಿ ಹಾಜರಿರುತ್ತಿದ್ದರು.

ಅವರ ಹದ್ದಿನ ಕಣ್ಣಿನ ಉಸ್ತುವಾರಿಯಿಂದಾಗಿ, ಹಣ ಉಳಿಯಿತು. ಸಾಮಾನ್ಯವಾಗಿ ರೂ. 40,000 ವೆಚ್ಚವಾಗುವ ಕಾಮಗಾರಿ 25,000 ರೂಪಾಯಿಯಲ್ಲೇ ಮುಗಿಯಿತು. ಉಳಿದ ಹಣದಿಂದ ಶೌಚಾಲಯಗಳನ್ನು ದುರಸ್ತಿಗೊಳಿಸಿ, ಬಳಕೆಗೆ ಯೋಗ್ಯವಾಗುವಂತೆ ಮಾಡಲಾಯಿತು. ಜತೆಗೆ, ಈ ಅಸಾಧಾರಣ ಮನುಷ್ಯ ನೀರು ಶೇಖರಣೆಗೆ ಟ್ಯಾಂಕ್ (ಸಿಂಟೆಕ್ಸ್) ಖರೀದಿಗೂ ಹಣ ಉಳಿಸಿದ್ದರು.

ಅನಂತರ, 2016ರ ಶಾಲಾರಂಭದ ದಿನವನ್ನು ಆಕರ್ಷಣೀಯವಾಗಿ ಆಚರಿಸುವ ಕಡೆಗೆ ಅಚ್ಚಪ್ಪ ಗಮನ ಹರಿಸಿದರು. ಹೊಸ ಕಟ್ಟಡ, ನೀರಿನ ಟ್ಯಾಂಕ್ ಹಾಗೂ ದುರಸ್ತಿಗೊಂಡ ಶೌಚಾಲಯಗಳು ಸಮುದಾಯ, ಮಕ್ಕಳು ಹಾಗೂ ಶಿಕ್ಷಕರಲ್ಲಿ ಹೊಸ ಉತ್ಸಾಹ ತುಂಬುತ್ತದೆ ಎನ್ನುವುದು ಅವರಿಗೆ ಗೊತ್ತಿತ್ತು. ಶಾಲೆ ಬಗ್ಗೆ ವಿಶ್ವಾಸ ಹುಟ್ಟಿಸುವಲ್ಲಿ ಇದೊಂದು ಪ್ರಮುಖ ಘಟನೆಯಾಗಲಿದೆ ಎನ್ನುವ ಅವರ ಅನಿಸಿಕೆ ಸರಿಯಾಗಿತ್ತು. ಗುಳೆ ಹೋಗುವಾಗ ನಿಮ್ಮ ಮಕ್ಕಳನ್ನು ನಮ್ಮ ಬಳಿ ಬಿಟ್ಟುಹೋಗಿ ಎಂದು ಪೋಷಕರ ಬಳಿ ಹೇಳುವಂತಹ ಆತ್ಮವಿಶ್ವಾಸ ಅಚ್ಚಪ್ಪನವರಲ್ಲಿ ಮೂಡಿತ್ತು. ಅಚ್ಚಪ್ಪ ಜನರ ಅನುಕೂಲಕರ ಮನಸ್ಥಿತಿಯನ್ನು ಅರ್ಥ ಮಾಡಿಕೊಂಡು, ಹೊಸ ಯೋಜನೆಯನ್ನು ಘೋಷಿಸಿದರು – 'ವಲಸೆ ಹೋಗುವ ಪೋಷಕರ ಮಕ್ಕಳು ತಂಗಲು ಎರಡು ಕೊಠಡಿಗಳನ್ನು ವಿದ್ಯಾರ್ಥಿ ನಿಲಯದಂತೆ ಬಳಸಲಾಗುತ್ತದೆ.' ಈ ಮಹತ್ವಪೂರ್ಣ ನಿರ್ಧಾರವನ್ನು ಜ್ಞಾಪಿಸಿಕೊಳ್ಳುತ್ತ ಅವರು ಹೇಳುತ್ತಾರೆ, "ತಮ್ಮ ಮಕ್ಕಳ ಸುರಕ್ಷೆ ಹಾಗೂ ಒಳಿತು ಇದರಿಂದ ಸಾಧ್ಯವಾಗಲಿದೆ ಎನ್ನುವ ಖಾತ್ರಿ ಪೋಷಕರಲ್ಲಿ ಉಂಟಾಗಿದ್ದರಿಂದ, ಇದು ಸಾಧ್ಯವಾಯಿತು." ಶಾಲೆಯ ಕೊಠಡಿಗಳಲ್ಲಿ ರಾತ್ರಿ ವೇಳೆ 30 ವಿದ್ಯಾರ್ಥಿಗಳಿಗೆ ಮಾತ್ರ ಪ್ರವೇಶಾವಕಾಶ ಸಾಧ್ಯವಾಯಿತು. ಉಳಿದ ಮಕ್ಕಳನ್ನು ನೆಂಟರು ಹಾಗೂ ಅಜ್ಜ–ಅಜ್ಜಿ ಬಳಿ ಬಿಟ್ಟು ಹೋಗಬೇಕೆಂದು ಪೋಷಕರ ಮನವೊಲಿಸಿದರು. ಪೋಷಕರು ಬಿಟ್ಟುಹೋದ ಮಕ್ಕಳ ಜವಾಬ್ದಾರಿಯನ್ನು ಹೊರಬೇಕೆಂದು ಸಮುದಾಯವನ್ನು ಅಚ್ಚಪ್ಪ ಪ್ರೇರೇಪಿಸಿದರು. ಆಶ್ಚರ್ಯಕರ ಎನ್ನಿಸಬಹುದಾದರೂ, ಇಂದು ಜುಮಾಲ್ಪುರ ದೊಡ್ಡತಾಂಡಾ ಶಾಲೆಯ 'ವಿದ್ಯಾರ್ಥಿ ನಿಲಯ'ದಲ್ಲಿ ಎಂಟು ಹೆಣ್ಣುಮಕ್ಕಳು ಹಾಗೂ 22 ಬಾಲಕರು ರಾತ್ರಿ ತಂಗುತ್ತಿದ್ದಾರೆ. ಶಾಲೆಯ ಬಿಸಿಯೂಟದ ಅನುದಾನದಲ್ಲೇ ಈ ಮೂವತ್ತು ಮಕ್ಕಳಿಗೆ ರಾತ್ರಿಯೂಟ ಹಾಗೂ ಬೆಳಗ್ಗೆ ತಿಂಡಿ ಕೂಡಾ ನೀಡಲಾಗುತ್ತಿದೆ. ಮೂವರಲ್ಲಿ ಒಬ್ಬರು ಶಿಕ್ಷಕರು 'ವಿದ್ಯಾರ್ಥಿನಿಲಯ'ದಲ್ಲಿ ರಾತ್ರಿ ವೇಳೆ ತಂಗಲಿದ್ದು, ಉಸ್ತುವಾರಿ ಕೆಲಸವನ್ನೂ ರಕ್ಷಣೆ ಜವಾಬ್ದಾರಿಯನ್ನೂ ನೋಡಿಕೊಳ್ಳುತ್ತಾರೆ. ಈ ಪ್ರಯತ್ನಕ್ಕೆ ಮಾರುಹೋದ ಪೋಷಕರು ಹಾಗೂ ಕೆಲವು ಮಂದಿ ಗ್ರಾಮಸ್ಥರು, ಇದಕ್ಕಾಗಿ ಧನಸಹಾಯವನ್ನೂ ನೀಡುತ್ತಿದ್ದಾರೆ.

ಅಚ್ಚಪ್ಪ ಇಷ್ಟಕ್ಕೇ ವಿರಮಿಸಲಿಲ್ಲ. ಜುಮಾಲ್ಪುರ ದೊಡ್ಡ ತಾಂಡಾ ಶಾಲೆಯ ಮಕ್ಕಳು ಉತ್ತಮ ಗುಣಮಟ್ಟದ ಸಮವಸ್ತ್ರ ಧರಿಸಿರುವುದನ್ನು ನಾವೀಗ ನೋಡಬಹುದು. ಇದರ ಹಿಂದೆಯೂ ಒಂದು ಕತೆ ಇದೆ: ಬಿಇಒ ಕಚೇರಿಯು ಪ್ರಮಾಣೀಕೃತ ಸರಬರಾಜುದಾರರ ಮೂಲಕ ಪೂರೈಸುತ್ತಿದ್ದ ಸಮವಸ್ತ್ರವನ್ನು ತೆಗೆದುಕೊಳ್ಳಲು ಅಚ್ಚಪ್ಪ ನಿರಾಕರಿಸಿದರು. ಬದಲಿಗೆ ಸಮವಸ್ತ್ರಕ್ಕೆ ಇಲಾಖೆ ಒದಗಿಸುವ 54,000 ರೂ ಹಣವನ್ನು ಶಾಲೆಯ ಬ್ಯಾಂಕ್ ಖಾತೆಗೆ. ವರ್ಗಾವಣೆಯಾಗುವಂತೆ ಮಾಡಿ, ತಾವೇ ಹೋಗಿ ಉತ್ತಮ ಗುಣಮಟ್ಟದ

ಬಟ್ಟೆ ಖರೀದಿಸಿ ತಂದರು, ಉತ್ತಮ ದರ್ಜಿಯಿಂದ ಸಮವಸ್ತ್ರಗಳನ್ನು ಹೊಲಿಸಿದರು. ಇದೆಲ್ಲವನ್ನೂ ಅವರು ಕಡಿಮೆ ಖರ್ಚಿನಲ್ಲೇ ಮಾಡಿದ್ದರು. ಈ ಪ್ರಕ್ರಿಯೆ ಸಮವಸ್ತ್ರ ಪೂರೈಸುವ 'ಕಮಿಷನ್' ವ್ಯವಸ್ಥೆಯನ್ನು ಅಡಿಮೇಲು ಮಾಡಿತು. ತಮ್ಮ ಈ ಉಪಕ್ರಮದಿಂದ ವಿರೋಧಿಗಳನ್ನು ಸೃಷ್ಟಿಸಿಕೊಳ್ಳುತ್ತಿದ್ದೇನೆ ಎನ್ನುವುದು ಅಚ್ಚಪ್ಪ ಅವರಿಗೆ ತಿಳಿದಿತ್ತು; ಅದಕ್ಕೆ ಅವರು ಸೊಪ್ಪು ಹಾಕಲಿಲ್ಲ.

ಶಾಲೆಯಲ್ಲಿ ಹಾಜರಿ ಪ್ರಮಾಣ ಗೌರವಾರ್ಹ ಮಟ್ಟ ತಲಪಿತು. ಅಚ್ಚಪ್ಪ ಅವರ ಮುಂದಿನ ಗುರಿ–ವಿದ್ಯಾರ್ಥಿಗಳ ಕಲಿಕೆ ಮಟ್ಟದ ಸುಧಾರಣೆ. ಇದಕ್ಕಾಗಿ ಅವರು 'ಪರಿಹಾರ ಬೋಧನೆ' (Remedial teaching)ಯನ್ನು ಪ್ರಾರಂಭಿಸಿದ್ದಾರೆ, ಶಾಲೆ ಮುಗಿದ ಬಳಿಕ ಮೂವರು ಶಿಕ್ಷಕರು ವಿಶೇಷ ತರಗತಿ ತೆಗೆದುಕೊಳ್ಳುತ್ತಾರೆ. ಪ್ರತಿ ತರಗತಿಯಲ್ಲೂ ಧ್ವನಿವರ್ಧಕಗಳನ್ನು ಅಳವಡಿಸಿದ್ದು, ರಾಜ್ಯ ಶಿಕ್ಷಣ ಇಲಾಖೆಯ ಕೇಳಿ–ಕಲಿ ರೇಡಿಯೊ ಕಾರ್ಯಕ್ರಮವನ್ನು ಮೂಲ, ಉದ್ದೇಶಿತ ವಿಧಾನದಲ್ಲೇ ಅನುಷ್ಠಾನಗೊಳಿಸಲಾಗಿದೆ. ಕುಷ್ಟಗಿಯ ಶಾಲೆಯೊಂದರಲ್ಲಿ ಇದನ್ನು ಅಳವಡಿಸಿದ್ದು ಅಲ್ಲಿನ ವಿದ್ಯಾರ್ಥಿಗಳಿಗೆ ತುಂಬಾ ಪ್ರಯೋಜನಕಾರಿಯಾಗಿರುವುದನ್ನು ತಾನು ನೋಡಿದ್ದೇನೆ, ಆದ್ದರಿಂದಲೇ ಇಲ್ಲೂ ಅಳವಡಿಸಿದೆ ಎಂದು ಅವರು ಹೇಳುತ್ತಾರೆ. ಬೇರೆಯವರಿಂದ ಕಲಿಯುವ, ಉತ್ತಮ ವಿಚಾರ, ವಿಧಾನಗಳನ್ನು ಒಪ್ಪಿಕೊಳ್ಳುವ ಅಚ್ಚಪ್ಪನವರ ವಿನೀತಭಾವ ಈ ಮಾತುಗಳಲ್ಲಿ ಪ್ರತಿಧ್ವನಿಸುತ್ತದೆ: "ನಾನು ಕುಷ್ಟಗಿಯ ಶಾಲೆಗೆ ನೀಡಿದ ಭೇಟಿಗಳಿಂದ ಪ್ರಭಾವಿತನಾಗಿದ್ದೇನೆ. ಗೆದ್ದಲಮರಿ ಜಿಎಚ್‌ಪಿಎಸ್‌ನ ಮುಖ್ಯೋಪಾಧ್ಯಾಯ ಸಂಗಯ್ಯ ಅವರಿಂದ ಪ್ರಭಾವಿತನಾಗಿದ್ದೇನೆ. ಜುಮಾಲ್ಪುರ ದೊಡ್ಡ ತಾಂಡಾದ ಶಾಲೆಯಲ್ಲೂ ಅದೇ ಕೆಲಸ ಮಾಡಲು ಉದ್ದೇಶಿಸಿದ್ದೇನೆ."

ತಾವು ತೆಗೆದುಕೊಂಡ ಕೆಲವು ಕ್ರಮಗಳು ಶಾಶ್ವತವಾದದ್ದೇನೂ ಅಲ್ಲ; ಈ ಶಾಲೆಯಿಂದ ಬೇರೆಡೆಗೆ ಹೋದಾಗ ಅವೆಲ್ಲ ಕರಗಿಹೋಗಬಹುದು ಎಂಬುದೂ ಅಚ್ಚಪ್ಪ ಅವರಿಗೆ ಗೊತ್ತಿದೆ. ಆದರೆ, ತಾವು ಈಗ ಮಾಡಿದ್ದು ಜೀವಮಾನದಲ್ಲೊಮ್ಮೆ ದೊರೆಯುವ ಅವಕಾಶದ ಸದ್ವಿನಿಯೋಗ ಎಂದು ಪರಿಗಣಿಸುತ್ತಾರೆ. ಈ ಮೊದಲು ಎಷ್ಟೇ ಹೇಳಿದರೂ ಅವರ ಮನವಿಯನ್ನೂ ಸಲಹೆಗಳನ್ನೂ ಹಿಂದಿನ ಮುಖ್ಯ ಶಿಕ್ಷಕರು ನಿರ್ಲಕ್ಷಿಸಿದ್ದರು. ಅಚ್ಚಪ್ಪ ಅವರಿಗೆ ಈಗ ದಿನದ ಇಪ್ಪತ್ತನಾಲ್ಕು ಗಂಟೆಯೂ ಅಡ್ಡಿ–ಆತಂಕವಿಲ್ಲದೆ ಕೆಲಸ ಮಾಡಲು ಅವಕಾಶವಿದೆ. ಫೌಂಡೇಷನ್‌ನ ಜೊತೆಗೆ ಅಚ್ಚಪ್ಪ ಅವರ ಸಹಯೋಗ ಕೇವಲ ಐದು ವರ್ಷಗಳದ್ದು. ಈ ಅವಧಿಯಲ್ಲಿ ಅವರ ಮೇಲೆ ಮಾದರಿ ಶಾಲೆಗಳಿಗೆ ಭೇಟಿ ಕಾರ್ಯಕ್ರಮ ಬಹಳಷ್ಟು ಪ್ರಭಾವ ಬೀರಿದೆ "ಕುಷ್ಟಗಿಯ ಶಾಲೆ ಸಾಧಿಸಿದ್ದರಲ್ಲಿ ಕೇವಲ ಶೇ.25ರಷ್ಟು ಮಾತ್ರ ಸಾಧಿಸಲು ಸಾಧ್ಯವಾಗಿದೆ. ನನಗೆ ಇನ್ನೂ ಎರಡು ವರ್ಷ ಸಮಯ ಕೊಟ್ಟರೆ ಜುಮಾಲ್ಪುರ ತಾಂಡಾವನ್ನು ಮಾದರಿ ಶಾಲೆಯನ್ನಾಗಿ ಮಾಡುತ್ತೇನೆ. ಶಾಲೆಯಲ್ಲಿ ಮೂಲಸೌಲಭ್ಯಕ್ಕೆ ಹೆಚ್ಚು ದೇಣಿಗೆ ನೀಡುವಂತೆ ಗ್ರಾಮದ ಸಾಹುಕಾರನನ್ನು ಪ್ರೇರೇಪಿಸಬೇಕಿದೆ. ನಾವು ಈವರೆಗೆ ಮಾಡಿರುವುದು ಜಾದೂ ಅಲ್ಲ: ಸಹೋದ್ಯೋಗಿಗಳ ಕಠಿಣ ಶ್ರಮ ಹಾಗೂ ಸಹಕಾರದಿಂದ ಇದು ಸಾಧ್ಯವಾಗಿದೆ. ನನ್ನ ಮಕ್ಕಳು ಸಂಜೆ ಶಾಲೆಯ ಗಂಟೆ ಹೊಡೆದ ಮೇಲೂ ಮನೆಗೆ ಹೋಗುವುದಿಲ್ಲ. ಇಲ್ಲೇ ಕುಳಿತಿರುತ್ತಾರೆ,

ಆಟವಾಡುತ್ತಾರೆ, ಮನೆಪಾಠ ಮುಗಿಸುತ್ತಾರೆ, ಗಿಡಗಳಿಗೆ ನೀರುಣಿಸುತ್ತಾರೆ." ಫೌಂಡೇಷನ್‌ನ ಸ್ಥಳೀಯ ಪ್ರತಿನಿಧಿ ಹುಲಗಪ್ಪ ಶಾಲಾ ಮೇಳದ ಆಲೋಚನೆಯನ್ನು ಮುಂದಿಟ್ಟಾಗ, ಅಚ್ಚಪ್ಪ ಮೇಳಕ್ಕೆ ತಮ್ಮೆಲ್ಲ ಶಕ್ತಿ ತುಂಬಿದರು. ಕಳೆದ ವರ್ಷ 'ಕಲಿಕಾ ಮೇಳ'ವನ್ನು ಹಮ್ಮಿಕೊಂಡಿದ್ದರು. ಭೂಗೋಳ, ಇತಿಹಾಸ ಹಾಗೂ ಸಾಮಾನ್ಯ ವಿಜ್ಞಾನ ವಿಷಯದಲ್ಲಿ ಕಲಿತಿರುವುದನ್ನು ಮಕ್ಕಳು ಸಮುದಾಯದ ಎದುರು ಪ್ರದರ್ಶಿಸಿದ್ದರು.

ಜುಮಾಲ್ಪುರ ದೊಡ್ಡ ತಾಂಡಾದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಐದು, ಆರು ಮಕ್ಕಳು ಪ್ರತಿ ವರ್ಷ ಮೊರಾರ್ಜಿ ಶಾಲೆಗೆ ಆಯ್ಕೆಯಾಗುತ್ತಾರೆ. ಇದು ಹೆಚ್ಚಬೇಕು ಎನ್ನುವುದು ಅಚ್ಚಪ್ಪ ಆಶಯ. ನಮ್ಮ ಮಾತುಕತೆ ಸಂದರ್ಭದಲ್ಲಿ "ನನಗೆ ಇನ್ನೆರಡು ವರ್ಷ ಕೊಡಿ" ಎನ್ನುವುದನ್ನು ಮಂತ್ರವೋ ಎನ್ನುವಂತೆ ಅವರು ಹಲವು ಸಲ ಹೇಳಿದರು. ಅಚ್ಚಪ್ಪ ಅವರು ತಮ್ಮ ಬದುಕಿನ ಶ್ರೇಯಸ್ಸಿಗಾಗಿ ಮಾಡಿದ್ದೇನು ಎಂದು ದೊಡ್ಡ ಜುಮಾಲ್ಪುರ ತಾಂಡಾ ಶಾಲೆಯ ಮಕ್ಕಳಿಗೆ ಕೆಲವು ವರ್ಷಗಳ ನಂತರವಷ್ಟೇ ಅರಿವಾಗಲಿದೆ. ಅವರು ಬೆಳೆದು ದೊಡ್ಡವರಾದ ಬಳಿಕವೂ ಈ ಭಯರಹಿತ, ವಿಕ್ಷಿಪ್ತ ಮನುಷ್ಯನನ್ನು ಎಂದೆಂದೂ ಸ್ಮರಿಸುತ್ತಾರೆ.

---

## "ಪ್ರಾಥಮಿಕ ಶಾಲೆಯ ಶಿಕ್ಷಕನಾಗುವುದಕ್ಕಿಂತ ಮುಖ್ಯವಾದದ್ದು ಅಥವಾ ಉತ್ತಮವಾದದ್ದು ಬೇರೇನೂ ಇಲ್ಲ"

**ಬಸವರಾಜ ದಳವಾಯಿ**

ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ, ಪೀರನಾಯಕ ತಾಂಡಾ
ಸುರಪುರ ಬ್ಲಾಕ್, ಯಾದಗಿರಿ ಜಿಲ್ಲೆ, ಕರ್ನಾಟಕ

---

ಪಿ. ಎನ್. ತಾಂಡಾ (ಸಾಮಾನ್ಯವಾಗಿ ಮೊದಲ ಅಕ್ಷರದಿಂದಲೇ ಗುರುತಿಸಲಾಗುತ್ತದೆ) ಸುರಪುರ ತಾಲೂಕಿನ ಕಕ್ಕೇರಾ ಪ್ರದೇಶದ ಒಂದು ಹಳ್ಳಿ. ಸುರಪುರ ಕರ್ನಾಟಕ ರಾಜ್ಯದ ಅತ್ಯಂತ ಪ್ರತಿಕೂಲ ಪರಿಸ್ಥಿತಿಯುಳ್ಳ ತಾಲೂಕುಗಳಲ್ಲಿ ಒಂದು. ಇನ್ನೂರ ಎರಡು ಬ್ಲಾಕ್‌ಗಳ ಮಾನವ ಸಂಪನ್ಮೂಲ ಸೂಚ್ಯಂಕದಲ್ಲಿ ಸುರಪುರದ ಸ್ಥಾನ ಇನ್ನೂರ ಒಂದು. ಕಕ್ಕೇರಾ ಈ ತಾಲೂಕಿನ ಅತ್ಯಂತ ಹೀನಾಯ ಸ್ಥಿತಿಯಲ್ಲಿರುವ ಪ್ರದೇಶ. ಭತ್ತದ ಕೃಷಿಯಿಂದಾಗಿ ಆರ್ಥಿಕ ಪರಿಸ್ಥಿತಿ ಅಷ್ಟೇನೂ ಕೆಟ್ಟದ್ದಾಗಿಲ್ಲ. ಆದರೆ, ಜೀವನದ ಮಟ್ಟ ಚಿಂತಾಜನಕವಾಗಿದೆ. ಸುತ್ತ ಹರಡಿಕೊಂಡಿರುವ ನೂರಾ ಎಂಟು ಕೊಪ್ಪಲುಗಳಲ್ಲಿ ವಿದ್ಯುತ್, ರಸ್ತೆ, ನೈರ್ಮಲ್ಯ ಹಾಗೂ ಸಾಕ್ಷರತೆಯ ಕೊರತೆಯಿದ್ದು, ವರ್ಷಗಳ ರಾಜಕೀಯ ನಿರ್ಲಕ್ಷ್ಯಕ್ಕೆ ಇದು ಸಂಕೇತದಂತಿದೆ. ಮದ್ಯಪಾನ ಮತ್ತು ಜೂಜು ಇಲ್ಲಿನ ಜನರ ದಿನನಿತ್ಯದ ಚಟುವಟಿಕೆಗಳಾಗಿವೆ.

ಇಂಥ ಜಾಗದಲ್ಲಿರುವ ಒಂದು ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ ಇಡೀ ಬ್ಲಾಕ್‌ನಲ್ಲಿಯೇ ಅತ್ಯಂತ ಉತ್ತಮ ಸಾಧನೆ ಮಾಡಿರುವ ಶಾಲೆಗಳಲ್ಲಿ ಒಂದು ಎಂಬ ಹಿರಿಮೆಯನ್ನು ಗಳಿಸುವುದು ಯಾವ ಮಟ್ಟದ ಸಾಧನೆ ಎಂಬುದು ಸರ್ವವೇದ್ಯವೇ ಸರಿ. ಆದರೆ, ಆ ಶಾಲೆ ಹಿಂದೆ ಹಾಗೆ ಇರಲಿಲ್ಲ. 1992ರಲ್ಲಿ ಆರಂಭವಾದ ಈ ಶಾಲೆ, ಹಲವು

ವರ್ಷಗಳ ಕಾಲ ನಿರ್ಲಕ್ಷ್ಯದಿಂದ ಬಳಲಿತ್ತು. ಆರಂಭದ ದಿನಗಳಲ್ಲಿ ಶಾಲೆಗೆ ದಾಖಲಾದವರ ಸಂಖ್ಯೆ ಒಂದುನೂರು ಇದ್ದಿತ್ತು. ಆದರೆ, ಅದು ಹಾಜರಿ ಪುಸ್ತಕಕ್ಕೆ ಸೀಮಿತವಾಗಿತ್ತು. ಶಾಲೆಗೆ ಬರುತ್ತಿದ್ದದ್ದು ಇಬ್ಬರು ಮಕ್ಕಳು ಮಾತ್ರ. ಬಹಳ ಬೇಗ ಅಲ್ಲಿದ್ದ ಮೂವರು ಶಿಕ್ಷಕರು ಬೇರೆಡೆಗೆ ವರ್ಗಾವಣೆ ಪಡೆದುಕೊಂಡರು.

ಇದೆಲ್ಲವೂ 2007ರಲ್ಲಿ, ಬಸವರಾಜ ದಳವಾಯಿ ಎಂಬ 'ಏಕವ್ಯಕ್ತಿಸೈನ್ಯ'ದ ಆಗಮನದಿಂದ ಬದಲಾಯಿತು. ಬಸವರಾಜ್ 24 ವರ್ಷ ವಯಸ್ಸಿನ ಕುಳ್ಳಗಿನ ವ್ಯಕ್ತಿ. ಒಂದು ವೇಳೆ ಶಾಲೆಯೊಂದರ ಅಭೂತಪೂರ್ವ ಯಶಸ್ಸಿನ ಎಲ್ಲ ಶ್ರೇಯಸ್ಸನ್ನು ಒಬ್ಬ ವ್ಯಕ್ತಿಗೆ ಕೊಡುವುದಾದರೆ, ಅದನ್ನು ಪಿ.ಎನ್. ತಾಂಡಾದ ಈ ಶಿಕ್ಷಕನಿಗೇ ಕೊಡಬೇಕು. ಶಿಕ್ಷಣ ಇಲಾಖೆಗೆ ಸೇರಿದ ಬಸವರಾಜ್ ಅವರ ಮೊದಲ ನೇಮಕ ಇದು; ಆಗಿನಿಂದಲೂ ಅವರು ಇದೇ ಶಾಲೆಯಲ್ಲಿ ಇದ್ದಾರೆ. ಅವರು ಪಿಯುಸಿ ಹಾಗೂ ಟಿಸಿಎಚ್ ಮುಗಿಸಿದ ಬಳಿಕ, ಈ ಕೆಲಸವನ್ನು ಬಹಳ ಕಷ್ಟಪಟ್ಟು ಪಡೆದುಕೊಂಡರು. ಲಭ್ಯ ಅವಕಾಶವನ್ನು ಸವಾಲಾಗಿ ತೆಗೆದುಕೊಂಡು, ಗಮನಾರ್ಹ ಬದಲಾವಣೆ ತರಲು ಬಳಸಿಕೊಂಡರು. ಪಿ.ಎನ್.ತಾಂಡಾದ 140 ಮನೆಗಳು ಐದು ಕಡೆ ಹರಡಿಕೊಂಡಿದ್ದು, ಪರಿಶಿಷ್ಟ ಜಾತಿ ಮತ್ತು ಪಂಗಡಗಳವರು ಹಾಗೂ ಕುರುಬ ಸಮುದಾಯದವರು ಅಧಿಕ ಸಂಖ್ಯೆಯಲ್ಲಿದ್ದಾರೆ. ಎಲ್ಲಾ 140 ಮನೆಗಳಿಗೂ ಭೇಟಿ ಕೊಟ್ಟ ಬಸವರಾಜ್, ತಮ್ಮನ್ನು ಪರಿಚಯಿಸಿಕೊಂಡು ಪೋಷಕರೊಂದಿಗೆ ಮಾತನಾಡಿದರು. ಭಾನುವಾರ ಸೇರಿದಂತೆ ಪ್ರತಿದಿನ ಬೆಳಗ್ಗೆ 8.30ರ ವೇಳೆಗೆ ತಾಂಡಾದ ಮನೆಗಳಿಗೆ ಭೇಟಿ ನೀಡುತ್ತಿದ್ದರು. ಪಟ್ಟು ಬಿಡದೆ ಪ್ರಯತ್ನ ನಡೆಸಿದರು. ಪೋಷಕರು ಅವರ ಮಾತು ಕೇಳುವುದು ಅನಿವಾರ್ಯವಾಯಿತು. ನಿಧಾನವಾಗಿ ಮಕ್ಕಳು ಶಾಲೆಗೆ ಬರಲಾರಂಭಿಸಿದರು.

ಬಸವರಾಜ ತಮ್ಮ ಎರಡನೇ ಹಂತದ ಕೆಲಸವನ್ನು ಶಾಲೆಯೊಳಗೆ ಆರಂಭಿಸಿದರು. ದಿನದ ಪ್ರತಿ ನಿಮಿಷವನ್ನು ಶಾಲೆಯಲ್ಲಿ ಮಕ್ಕಳೊಡನೆ ಕಳೆಯುತ್ತ, ಪ್ರತಿಯೊಬ್ಬರ ಬಗ್ಗೆಯೂ ವೈಯಕ್ತಿಕ ಗಮನ ನೀಡಲಾರಂಭಿಸಿದರು. ಮಕ್ಕಳನ್ನು ನಿರ್ದಿಷ್ಟ ಕೆಲಸಕ್ಕೆ ಗುಂಪುಗಳಲ್ಲಿ ಸಂಘಟಿಸಿ, ಅವರ ಕಲಿಕೆಯನ್ನು ಪರಿಶೀಲಿಸುತ್ತಿದ್ದರು. ಮನೆಗೆ ಹೋದ ಬಳಿಕ ಪೋಷಕರಿಗೆ ಶಾಲೆಯಲ್ಲಿ ಏನೇನು ನಡೆಯಿತು ಎಂಬುದನ್ನು ಹೇಳಬೇಕೆಂದು ತಿಳಿಸಿಕೊಟ್ಟರು. ತಮ್ಮ ಮಕ್ಕಳು ಕಲಿಯುತ್ತಿವೆ ಎನ್ನುವುದು ಪೋಷಕರಿಗೆ ಬೇಗನೆ ತಿಳಿಯಿತು. ಒಂದು ವರ್ಷದೊಳಗೆ, ಅಂದರೆ, 2008ರಲ್ಲಿ ಶಾಲೆಗೆ ನಿಯಮಿತವಾಗಿ ಬರುವ ಮಕ್ಕಳ ಸಂಖ್ಯೆ 50ಕ್ಕೆ ಏರಿತು. ಬೇಸಿಗೆ ರಜೆ ಸಮಯದಲ್ಲೂ ಬಸವರಾಜ್ ಬೋಧನೆಯನ್ನು ನಿಲ್ಲಿಸಲಿಲ್ಲ. ರಜಾ ಸಮಯದಲ್ಲಿ ಬಿಸಿಯೂಟ ನೀಡಲು ಅವಕಾಶವಿಲ್ಲದಿದ್ದರೂ, ಮಕ್ಕಳಿಗೆ ಬಿಸಿಯೂಟದ ಏರ್ಪಾಡು ಮಾಡಿದರು. ಮನೆಯಲ್ಲಿ ಓದಲು ಯಾವುದೇ ಪುಸ್ತಕವಾಗಲಿ ಓದುವ ಪೂರಕ ವಾತಾವರಣವಾಗಲಿ ಇರುವುದಿಲ್ಲ ಎಂಬುದು ಬಸವರಾಜ್‌ಗೆ ತಿಳಿದಿತ್ತು. ಭಾನುವಾರ ಮಕ್ಕಳು ಪೋಷಕರಿಗೆ ನೆರವಾಗಲೆಂದು ದನ ಮೇಯಿಸಲು ಹೋಗುತ್ತಿದ್ದರು. ಇದನ್ನು ತಪ್ಪಿಸಲು ಭಾನುವಾರವೂ ಕಲಿಸಲಾರಂಭಿಸಿದರು. ಮಕ್ಕಳಲ್ಲಿ ಪ್ರತಿದಿನ ಒಂದಿಷ್ಟು ಪ್ರಗತಿ ಕಾಣಲಾರಂಭಿಸಿತು. ಮಕ್ಕಳು ಬುದ್ಧಿಶಾಲಿಗಳೂ ಕುತೂಹಲಿಗಳೂ ಆಗಿದ್ದರು. ತಮಗೆ

ಕಲಿಸುತ್ತಿರುವ ಬಸವರಾಜ ಮೇಷ್ಟ್ರು ಮಕ್ಕಳಿಗೆ ಅಚ್ಚುಮೆಚ್ಚಿನವರಾದರು. ಶಾಲೆ ತಪ್ಪಿಸಿಕೊಳ್ಳುವ ಮಕ್ಕಳ ಸಂಖ್ಯೆ ಕಡಿಮೆಯಾಗತೊಡಗಿ 2010ರ ಹೊತ್ತಿಗೆ ತಾಂಡಾದ ಎಲ್ಲ ಮಕ್ಕಳೂ ತಪ್ಪದೆ ಶಾಲೆಗೆ ಬರತೊಡಗಿದವು. ಪಿ. ಎನ್. ತಾಂಡಾ ಶಾಲೆಯಲ್ಲಿ 2011ರ ಉದ್ದಕ್ಕೂ ಶೇ. 100 ಹಾಜರಿ ಇತ್ತು.

ಈ ಏಕೋಪಾಧ್ಯಾಯ ಶಾಲೆಯಲ್ಲಿ ಬಸವರಾಜ್ ಏನೆಲ್ಲ ಬದಲಾವಣೆಗಳನ್ನು ತಂದರೆಂಬುದನ್ನು ಒಂದೆರಡು ಸರಳ ನಿದರ್ಶನಗಳಿಂದಲೇ ತಿಳಿದುಕೊಳ್ಳಬಹುದು. ಪ್ರತಿ ವರ್ಷ 5ನೇ ತರಗತಿ ಮುಗಿಸಿದ ಎಂಟರಿಂದ ಒಂಬತ್ತು ಹೆಣ್ಣು ಮಕ್ಕಳು ಕಸ್ತೂರಬಾ ಗಾಂಧಿ ಬಾಲಿಕಾ ವಿದ್ಯಾಲಯ(ಕೆಜಿಬಿವಿ) ವಸತಿ ಶಾಲೆಯನ್ನು ಸೇರುತ್ತಿದ್ದಾರೆ. ಬಸವರಾಜ್ ವಿದ್ಯಾರ್ಥಿನಿಯರನ್ನು ತಾವೇ ಸ್ವತಃ ಕರೆದೊಯ್ದು ಬೆಂಗಳೂರು, ಬಾಗಲಕೋಟೆ ಹಾಗೂ ಕಲಬುರ್ಗಿಯ ಕೆಜಿಬಿವಿಗೆ ದಾಖಲಿಸುತ್ತಾರೆ. ಆಶ್ಚರ್ಯವೆಂದರೆ, ಅವರು ಯಾದಗಿರಿಯ ಕೆಜಿಬಿವಿಗೆ ಮಕ್ಕಳನ್ನು ಕರೆದೊಯ್ಯುವುದಿಲ್ಲ. ಮೊದಲ ಬಾರಿ ಅಲ್ಲಿಗೆ ಹೋದಾಗ ಸೂಕ್ತ ಸ್ಪಂದನ ಬಂದಿರಲಿಲ್ಲ. ಈ ತಾಂಡಾದ ಹಲವು ಮಕ್ಕಳು ಪ್ರವೇಶ ಪರೀಕ್ಷೆಯಲ್ಲಿ ತೇರ್ಗಡೆಯಾಗಿ, ಶಹಾಪುರ ಬ್ಲಾಕ್‌ನ ಮೊರಾರ್ಜಿ ಶಾಲೆಯನ್ನೂ ಸೇರಿದ್ದಾರೆ. ಕೆಎಸ್‌ಕ್ಯುಎಎಸಿ 2016ರ ಮೌಲ್ಯಮಾಪನದಲ್ಲಿ ಪಿ. ಎನ್. ತಾಂಡಾದ ಶಾಲೆ ತಾಲೂಕಿನಲ್ಲಿ ನಾಲ್ಕನೇ ಸ್ಥಾನ ಪಡೆಯಿತು. ಆ ತಾಂಡಾದಲ್ಲಿ 2007ಕ್ಕೆ ಹೋಲಿಸಿದರೆ ಇನ್ನೊಂದು ಅಚ್ಚರಿಯ ಬೆಳವಣಿಗೆ ನಡೆದಿದೆ; ಅಲ್ಲಿನ ಬಹುತೇಕ ಎಲ್ಲ ಪೋಷಕರೂ ಅನಕ್ಷರಸ್ಥರಾಗಿದ್ದರೂ, 10 ವರ್ಷಗಳ ನಂತರ ಶೇ. 70ರಷ್ಟು ಮಂದಿ ಮಕ್ಕಳ ಅಂಕಪಟ್ಟಿಯ ಮೇಲೆ ತಮ್ಮ ಸಹಿ ಹಾಕಬಲ್ಲರು. ಮಕ್ಕಳೇ ಅವರಿಗೆ ಅಕ್ಷರ ಕಲಿಸಿದ್ದಾರೆ.

ಬಸವರಾಜ್‌ಗೆ ತಮ್ಮ ಕಲಿಕೆಯ ಬಗೆಗೂ ತೀವ್ರಾಸಕ್ತಿ ಇದೆ. ಕಳೆದ ಏಳು ವರ್ಷಗಳಲ್ಲಿ ದೂರಶಿಕ್ಷಣದ ಮೂಲಕ ಬಿಎ ಹಾಗೂ ಬಿಎಡ್ ಪದವಿ ಪಡೆದಿದ್ದಾರೆ; ಅವರೀಗ ಕಂಪ್ಯೂಟರ್ ಸಾಕ್ಷರ ಕೂಡ. ಮನೆಯಲ್ಲಿ ಕಂಪ್ಯೂಟರ್ ಹೊಂದಿದ್ದು, ಅಂತರ್ಜಾಲ ಬಳಸುತ್ತಾರೆ. ಬ್ಲಾಕ್–ಜಿಲ್ಲಾ ಮಟ್ಟದ ಅಧಿಕಾರಿಗಳು ಕೇಳುವ ಮಾಹಿತಿಗಳನ್ನು ಅದರಲ್ಲಿ ಸಂಗ್ರಹಿಸಿ ಇಟ್ಟುಕೊಳ್ಳುತ್ತಾರೆ. ಮಾಹಿತಿ ಸಂಗ್ರಹಿಸುವ, ಸಂಸ್ಕರಿಸುವ ಸಾಮರ್ಥ್ಯದಿಂದಾಗಿ, ಬೆರಳ ತುದಿಯಲ್ಲಿ ಎಲ್ಲ ಅಂಕಿ ಅಂಶ ಹೊಂದಿದ್ದಾರೆ. ಸುರಪುರದಲ್ಲಿ ಸಿಎಫ್‌ಎಸ್‌ಐ ಅನುಷ್ಠಾನಗೊಳಿಸಿದಾಗ, ಆಸಕ್ತಿವಹಿಸಿ ಕಲಿತರು. ನಲಿ–ಕಲಿ ಬೋಧನೆ ಕ್ರಮವನ್ನು ಬಹಳ ಸಮರ್ಥವಾಗಿ ಬಳಸಲು ಕಲಿತುಕೊಂಡಿದ್ದಾರೆ. ಕಕ್ಕೇರಾದಲ್ಲಿ ಸ್ಥಾಪನೆಗೊಂಡ ಟಿಎಲ್‌ಸಿ ನಡೆಸಿದ ವಿಚಾರ ಸಂಕಿರಣದಲ್ಲೂ ಇತರ ಚಟುವಟಿಕೆಗಳಲ್ಲೂ ಸಕ್ರಿಯವಾಗಿ ಪಾಲ್ಗೊಂಡರು.

ಕಕ್ಕೇರಾದ ಟಿಎಲ್‌ಸಿ ಹಾಗೂ ಫೌಂಡೇಷನ್ ಆಯೋಜಿಸುತ್ತಿದ್ದ ಕಾರ್ಯಾಗಾರಗಳು ತರಗತಿಯಲ್ಲಿ ಬಳಸುವ ಕಲಿಕಾ ಸಾಧನಗಳನ್ನು ಅಭಿವೃದ್ಧಿಪಡಿಸಲು ನೆರವಾದವು; ಕೆಲವು ಪರಿಕಲ್ಪನೆಗಳನ್ನು ಹೇಗೆ ಕಲಿಸಬೇಕು ಎನ್ನುವುದು ಅಲ್ಲಿ ತಿಳಿಯಿತು ಎಂದು ಅವರು ಒಪ್ಪಿಕೊಳ್ಳುತ್ತಾರೆ. ಹಲವು ವರ್ಷಗಳಿಂದ ಜಿಲ್ಲೆಯಲ್ಲಿ ನಡೆಯುತ್ತಿರುವ ಕೋರ್ಸ್, ಕಾರ್ಯಾಗಾರಗಳಿಗೆ ತಪ್ಪದೆ ಹಾಜರಾಗುತ್ತಾರೆ. ಸನ್ನಿ ತಾರಪ್ಪನ್ ನಡೆಸಿಕೊಡುವ ಮುಖ್ಯ ಶಿಕ್ಷಕರ ಕಾರ್ಯಾಗಾರವಿರಲಿ, ಸಮಾಜಶಾಸ್ತ್ರ ಬೋಧನೆ ಕ್ರಮಕ್ಕೆ

ಸಂಬಂಧಿಸಿದ ಬೇಸಿಗೆ ಕಾರ್ಯಾಗಾರವಿರಲಿ ಅಲ್ಲಿ ಅವರು ಹಾಜರಿರುತ್ತಾರೆ.

ಕಕ್ಕೇರಾದಲ್ಲಿ ನವೋದಯ ಮತ್ತು ಮೊರಾರ್ಜಿ ಶಾಲೆಗಳಿಗೆ ಆಯ್ಕೆಗೆ ತರಬೇತಿ ನೀಡಲು ಪ್ರತಿ ಭಾನುವಾರ ಹಮ್ಮಿಕೊಳ್ಳುವ ಉಚಿತ ಕಾರ್ಯಕ್ರಮದಲ್ಲಿ ಗಣಿತಶಾಸ್ತ್ರದ ಸಂಪನ್ಮೂಲ ವ್ಯಕ್ತಿಯಾಗಿ ಪಾಲ್ಗೊಳ್ಳುತ್ತಾರೆ. ಗಣಿತವನ್ನು ಬೋಧಿಸುವ ತಮ್ಮ ಸಾಮರ್ಥ್ಯಕ್ಕೆ ಕಾರಣವಾದ ಹಿನ್ನೆಲೆಯನ್ನು ಅವರು ವಿವರಿಸುವುದು ಹೀಗೆ: "ಪಿಯುಸಿ ವರೆಗೆ ನಾನು ಗಣಿತದಲ್ಲಿ ಬಹಳ ದುರ್ಬಲನಿದ್ದೆ. ಶಿಕ್ಷಕನಾದ ಮೇಲೆ ಸ್ವಂತ ಶ್ರಮದಿಂದ ಗಣಿತವನ್ನು ಕಲಿತೆ. ನವೋದಯ ಪ್ರವೇಶ ಪರೀಕ್ಷೆಯಲ್ಲಿ ಮಕ್ಕಳು ಚೆನ್ನಾಗಿ ಮಾಡಬೇಕೆಂದರೆ, ನಾನು ಗಣಿತವನ್ನು ಅವರಿಗೆ ಚೆನ್ನಾಗಿ ಕಲಿಸಿಕೊಡಬೇಕಿತ್ತು. ಈಗ ನಾನು ಹೈಸ್ಕೂಲ್ ಮಕ್ಕಳಿಗೂ ಗಣಿತ ಹೇಳಿಕೊಡಬಲ್ಲೆ."

ಕಳೆದ ನಾಲ್ಕು ವರ್ಷಗಳಲ್ಲಿ ಬಸವರಾಜ ಮೂರು ಶಾಲಾ ಮೇಳಗಳನ್ನು ಸಂಘಟಿಸಿದ್ದಾರೆ–ಎರಡು ಸಮಾಜಶಾಸ್ತ್ರದ್ದು, ಒಂದು ಭಾಷೆಗೆ ಸಂಬಂಧಿಸಿದ್ದು. ಪಿ. ಎನ್. ತಾಂಡಾ ಶಾಲೆಯಲ್ಲಿ 2010ರಲ್ಲಿ ನಡೆದ ಮೊದಲ ಮೇಳವೇ ಮಕ್ಕಳ ಕಲಿಕೆಯನ್ನು ಸಮುದಾಯಕ್ಕೆ ಅದರಲ್ಲೂ ಮುಖ್ಯವಾಗಿ ಪೋಷಕರಿಗೆ ಸಾಬೀತು ಪಡಿಸಿತು, ಅದುವೇ ಈ ಶಾಲೆಯ ಅಭ್ಯುದಯಕ್ಕೆ ಶ್ರೀಕಾರವನ್ನು ಬರೆಯಿತು ಎಂದು ಈ ಶಾಲೆಯನ್ನು ಗಮನಿಸುತ್ತ ಬಂದವರು ಹೇಳುತ್ತಾರೆ. ಪಿ. ಎನ್. ತಾಂಡಾ ಶಾಲೆಯನ್ನು 2011ರಲ್ಲಿ ಸಿಎಫ್ಎಸ್ಐನ ಸುರಪುರದ ಶಾಲೆಗಳಲ್ಲಿ ಅತ್ಯುತ್ತಮವಾದದ್ದು ಎಂದು ಗುರುತಿಸಲಾಯಿತು.

ಬೆಳಗಾವಿಯಲ್ಲಿ ಜನಿಸಿದ ಬಸವರಾಜ ಈಗ ಸುರಪುರದವರೇ ಆಗಿದ್ದಾರೆ. ಈಗಲೂ ಕೃಷಿಯಲ್ಲಿ ತೊಡಗಿಸಿಕೊಂಡಿರುವ ಅವರ ತಂದೆ, ಗ್ರಾಮಲೆಕ್ಕಿಗನಾಗಿ ಕೆಲಸ ಮಾಡುತ್ತಿರುವ ಸಹೋದರನ ನೆರವಿನಿಂದ ಜಮೀನು ನೋಡಿಕೊಳ್ಳುತ್ತಾರೆ. ಬಸವರಾಜ್ ಅವರ ಮತ್ತೊಬ್ಬ ಸೋದರ ಸೇನೆಯಲ್ಲಿ ಹವಾಲ್ದಾರ್ ಆಗಿ ಸೇವೆ ಸಲ್ಲಿಸುತ್ತಿದ್ದು, ಮೂರನೇ ಸೋದರ ಪೊಲೀಸ್ ಕಾನ್ಸ್ಟೆಬಲ್ ಆಗಿದ್ದಾರೆ. ಪಿ. ಎನ್. ತಾಂಡಾಕ್ಕೆ ಬಂದಾಗ ಅವಿವಾಹಿತರಾಗಿದ್ದ ಬಸವರಾಜ್ ಅನಂತರ ಮದುವೆಯಾಗಿದ್ದು, ಅವರೀಗ ಏಳು ವರ್ಷದ ಮಗ ಹಾಗೂ ನಾಲ್ಕು ವರ್ಷ ವಯಸ್ಸಿನ ಮಗಳ ತಂದೆ. ಅವರ ಮಗ ಪಿ. ಎನ್. ತಾಂಡಾದ ಶಾಲೆಯಲ್ಲಿ ಎರಡನೇ ತರಗತಿಯಲ್ಲಿ ಓದುತ್ತಿದ್ದಾನೆ. ಮುಂದೆಂದೂ ಮುರಿಯಲು ಕಷ್ಟಸಾಧ್ಯವಾದ ದಾಖಲೆಯೊಂದನ್ನು ಅವರು ಬರೆದಿದ್ದಾರೆ – 2007ರಲ್ಲಿ ಕೆಲಸಕ್ಕೆ ಸೇರಿದ ಬಳಿಕ ಶಾಲೆ ನಡೆದ ಎಲ್ಲ ದಿನವೂ ಅವರು ಅಲ್ಲಿ ಹಾಜರಿದ್ದರು. ಕಳೆದ 4 ವರ್ಷಗಳಲ್ಲಿ ಒಂದೇ ಒಂದು ಸಾಂದರ್ಭಿಕ ರಜೆಯನ್ನೂ ಪಡೆದಿಲ್ಲ. ಪ್ರತಿ ದಿನ ಯೋಗಾಭ್ಯಾಸ ಮಾಡುತ್ತಾರೆ: ಬೆಳಗ್ಗೆ ಐದು ಗಂಟೆಗೆ ಏಳುತ್ತಾರೆ; ಒಂಭತ್ತು ಗಂಟೆಗೆ ಸರಿಯಾಗಿ ಶಾಲೆಯಲ್ಲಿರುತ್ತಾರೆ. ಸಂಜೆ 5.30ಕ್ಕೆ ಶಾಲೆ ಬಿಟ್ಟು ಮನೆಗೆ ವಾಪಸಾಗುತ್ತಾರೆ. ಪ್ರತಿದಿನ ಕನಿಷ್ಠ ಎರಡು ಗಂಟೆ ಓದುತ್ತಾರೆ, ರಾತ್ರಿ 10.30ಕ್ಕೆ ಮಲಗುತ್ತಾರೆ.

ವರ್ಷಗಳು ಕಳೆದಂತೆ ಅವರ ಶಿಷ್ಯರು ಅವರೊಂದಿಗೆ ದೀರ್ಘಕಾಲ ಉಳಿದುಕೊಳ್ಳುವ ಬಂಧವನ್ನು ಬೆಳೆಸಿಕೊಂಡಿದ್ದಾರೆ. ಪ್ರತಿದಿನ 7–8 ಹಳೆಯ ವಿದ್ಯಾರ್ಥಿಗಳು ಒಂದಲ್ಲ ಒಂದು ಕಾರಣ ಇಟ್ಟುಕೊಂಡು ಶಾಲೆಗೆ ಬರುತ್ತಾರೆ. ಆದರೆ,

ಭೇಟಿಯ ಮುಖ್ಯ ಉದ್ದೇಶ, ಬಸವರಾಜ್‌ರನ್ನು ನೋಡದೆ ಅವರ ದಿನ ಪೂರ್ಣಗೊಳ್ಳುವುದಿಲ್ಲ ಎಂಬುದೇ. ಇದು ಎಲ್ಲರಿಗೂ ತಿಳಿದಿರುವ ಸತ್ಯವೇ ಆಗಿದೆ. ಬಸವರಾಜ್ ಒಂದು ವೇಳೆ ಕಾರಣಾಂತರದಿಂದ ಶಾಲೆಯಲ್ಲಿ ಇಲ್ಲದೆ ಹೋದಲ್ಲಿ 'ಹಳೆಯ ವಿದ್ಯಾರ್ಥಿಗಳ ಸಂಘ'ದ ಸದಸ್ಯರು ಶಾಲೆಯ ಜವಾಬ್ದಾರಿಯನ್ನು ವಹಿಸಿಕೊಳ್ಳುತ್ತಾರೆ. ಬೇಸರದ ಸಂಗತಿಯೆಂದರೆ, ಯಾವೊಬ್ಬ ಸರ್ಕಾರಿ ಅಧಿಕಾರಿಯೂ ಈ ಶಾಲೆಯ ಕಡೆ ತಲೆಹಾಕುವುದಿಲ್ಲ. ಈಗಾಗಲೇ ಹೇಳಿದಂತೆ, ಕಕ್ಕೇರಾ ಅತ್ಯಂತ ಹೀನಾಯ ಸ್ಥಿತಿಯಲ್ಲಿರುವ ಪ್ರದೇಶ. ಇಂತಹ ಸನ್ನಿವೇಶದಲ್ಲಿ ಪಿ.ಎನ್. ತಾಂಡಾದ ಮಕ್ಕಳು ಉತ್ತಮ ಶಿಕ್ಷಣಪಡೆದು ಜೀವನದಲ್ಲಿ ಶ್ರೇಯಸ್ಸನ್ನು ಹೊಂದಿ ಸಾಮಾಜಿಕವಾಗಿ ಜವಾಬ್ದಾರಿಯುತ ನಾಗರಿಕರಾಗುವಂತೆ ಬಸವರಾಜ್ ನೋಡಿಕೊಳ್ಳುತ್ತಿದ್ದಾರೆ. ಶಾಲೆಯ ಮಕ್ಕಳೇ ತನ್ನ ಪ್ರಪಂಚ ಎಂದು ನಂಬಿರುವ ಬಸವರಾಜ್ ಹೇಳುತ್ತಾರೆ, "ಪ್ರಾಥಮಿಕ ಶಾಲೆಯ ಶಿಕ್ಷಕನಾಗುವುದಕ್ಕಿಂತ ಉತ್ತಮವೂ ಶ್ರೇಷ್ಠವೂ ಆದದ್ದು ಬೇರೊಂದು ಇಲ್ಲ. ನಾನು ಇಲ್ಲಿ ಪಡೆಯುತ್ತಿರುವ ಗೌರವಕ್ಕೆ ಬೇರಾವುದೂ ಸಾಟಿಯಲ್ಲ."

# ಕೊನೆಯ ಮಾತು : ಯಾಕೆ ಈ ಕಥನಗಳನ್ನು ಹೇಳಲೇಬೇಕು ?

ಸರಕಾರಿ ಶಾಲೆಯ ಶಿಕ್ಷಕರ ಕೆಲಸವು ಖಾಸಗಿ ವಾಣಿಜ್ಯೋದ್ಯಮದ ನೌಕರರ ಕೆಲಸಕ್ಕಿಂತಲೂ ಕೀಳೇ? ನಮ್ಮ ಶಿಕ್ಷಣರಂಗದ ಎಲ್ಲ ವೈಫಲ್ಯಗಳಿಗೂ ಶಿಕ್ಷಕರೇ ಕಾರಣರೆಂದು ಅವರನ್ನು ಸಮಾಜಕಂಟಕ ಕೊಳ್ಳಿದೆವ್ವಗಳ ಮಟ್ಟಕ್ಕೆ ಇಳಿಸಿದ್ದೇವೆ. ಅದೇವೇಳೆ ಖಾಸಗಿ ವಾಣಿಜ್ಯೋದ್ಯಮ ರಂಗದವರು ಉದ್ಯಮಶೀಲತೆಯ ಶಿಖರಪ್ರಾಯರು ಎಂಬ ತೀರ್ಮಾನಕ್ಕೂ ಬಂದಿದ್ದೇವೆ. ಇಂತಹ ಸನ್ನಿವೇಶದಲ್ಲಿ ಶಿಕ್ಷಕರ ಕೆಲಸದ ಕುರಿತಾದ ಮೇಲಿನ ಪ್ರಶ್ನೆ ಮೂರ್ಖತನದ್ದೆಂದು ಅನಿಸಬಹುದು. ಆದರೆ ಮೂರ್ಖಪ್ರಶ್ನೆಗಳನ್ನು ಎತ್ತಿಕೊಂಡು ಚರ್ಚಿಸುವ ಹವ್ಯಾಸವನ್ನು ಉತ್ತಮವೆಂದೇ ಬಗೆದು ನಾವು ಆಚರಿಸಿಕೊಂಡು ಬಂದಿದ್ದೇವಲ್ಲ; ಸೂರ್ಯನೂ ನಕ್ಷತ್ರಗಳೂ ನಿಜವಾಗಿಯೂ ಭೂಮಿಯ ಸುತ್ತ ತಿರುಗುತ್ತವೆಯೇ, ಕಾಲರಾ ರೋಗ ಮಾಟಗಾತಿಯಿಂದ ಹಬ್ಬಿತೇ? ಇತ್ಯಾದಿ.

ನಾವು, 2002ರಿಂದ 2016ರವರೆಗೆ ಸರ್ಕಾರಿ ಶಾಲೆಗಳ ಲಕ್ಷಾಂತರ ಶಿಕ್ಷಕರ ಜತೆಗೆ ಕೆಲಸ ಮಾಡಿದ್ದೇವೆ (ಈಗಲೂ ಮಾಡುತ್ತಿದ್ದೇವೆ). ಇವು ಸುದೀರ್ಘ, ನಿರಂತರ ಮುಖಾಮುಖಿಗಳು. ನಾವು ಈ 'ಕೊಳ್ಳಿದೆವ್ವ'ಗಳನ್ನು ದೇಶದ ಕಾಡುಗಳಲ್ಲೋ, ಬೆಟ್ಟ ಗುಡ್ಡಗಳಲ್ಲೋ ಮರಳುಗಾಡಿನಲ್ಲೋ ಭೇಟಿಯಾಗಲಿಲ್ಲ. ಈ ಶಿಕ್ಷಕರು ವಾಸಿಸುವ ಇಲ್ಲವೇ ಕೆಲಸ ಮಾಡುವ ಗ್ರಾಮಗಳಲ್ಲಿ ಹಾಗೂ ಸಣ್ಣ ಪಟ್ಟಣಗಳಲ್ಲಿ ಭೇಟಿ ಮಾಡಿದ್ದೇವೆ. ಅಲ್ಲೇ ನಮ್ಮ ಸಹೋದ್ಯೋಗಿಗಳು ಕೂಡಾ ವಾಸಿಸುತ್ತಾರೆ; ಸಾಮಾನ್ಯವಾಗಿ ಆ ಸ್ಥಳಗಳಿಗೆ ಹೊರಗಿನ ಯಾರೂ ಹೋಗುವುದಿಲ್ಲ; ಶಿಕ್ಷಕರ ಟೀಕಾಕಾರರೆಂದು ಪ್ರತಿಷ್ಠಾಪಿಸಿಕೊಂಡ ಜನರೂ ಹೋಗುವುದಿಲ್ಲ.

ಇತ್ತೀಚಿನ ವರ್ಷಗಳಲ್ಲಿ 'ಕೊಳ್ಳಿದೆವ್ವ'ದ ಕತೆಯ ಪ್ರವರ್ತಕರು ಪ್ರಚುರಪಡಿಸುವ ಶಿಕ್ಷಕರ ಗೈರುಹಾಜರಿಯ ಆರೋಪಕ್ಕೂ ನಾವು ಕಂಡುಕೊಂಡ ಸತ್ಯಕ್ಕೂ ಅಪಾರ ಅಂತರವಿದೆ. ಸರ್ಕಾರದ ಉನ್ನತ ಸ್ತರಗಳು ಸೇರಿದಂತೆ ಜನಸಾಮಾನ್ಯರ ಪ್ರಕಾರ, ಶಿಕ್ಷಕರ ಗೈರುಹಾಜರಿ ಪ್ರಮಾಣ ಶೇ.30ರಿಂದ ಶೇ.50ರಷ್ಟಿದೆ. ಇದನ್ನು ಕೆಲವು 'ಪಂಡಿತರ' ಸಂಶೋಧನೆ ಕೂಡ ಬೆಂಬಲಿಸುತ್ತದೆ. ನಾವು ಇಷ್ಟೊಂದು ಪ್ರಮಾಣದ ಗೈರುಹಾಜರಿಯನ್ನು ಯಾವತ್ತೂ ನೋಡಲಿಲ್ಲ. 'ಗೈರುಹಾಜರಿ' ಎಂದರೆ ಶಿಕ್ಷಕರು ಹೇಳದೆ ಕೇಳದೆ ತಪ್ಪಿಸಿಕೊಳ್ಳುವುದು: ಕೆಲಸಕ್ಕೆ ಬಾರದಿರುವುದು, ರಜೆ ತೆಗೆದುಕೊಳ್ಳದೆ ಅಥವಾ ಇನ್ನಿತರ ಸೂಕ್ತ ಕಾರಣ ನೀಡದೆ ಶಾಲೆಗೆ ಗೈರುಹಾಜರಾಗುವುದು.

ಗಾಳಿಸುದ್ದಿಯನ್ನು ಕೇಳಿಯೋ ಇಲ್ಲವೇ ಬರೇ ಐವತ್ತು ಜನರನ್ನು ಸೇರಿಸಿ ಮಾಡಿದ

ಸ್ಯಾಂಪಲ್ – ಸರ್ವೆಯ ಆಧಾರದಲ್ಲೋ ತೀರ್ಮಾನಕ್ಕೆ ಬಂದಿರಬಹುದಾದ ಸ್ವಯಂಘೋಷಿತ ಟೀಕಾಕಾರರು ಲಕ್ಷಾಂತರ ಶಿಕ್ಷಕರ ಜೊತೆಗಿನ 15 ವರ್ಷಗಳ ನಮ್ಮ ಅನುಭವವನ್ನು 'ದಂತಕಥೆ' ಎಂದು ತಳ್ಳಿಹಾಕಿದರು. ಈ ಹಿನ್ನೆಲೆಯಲ್ಲಿ ನಾವು ಶಿಕ್ಷಕರ ಗೈರುಹಾಜರಿಯ ಕುರಿತು ಸಂಶೋಧನಾ ಅಧ್ಯಯನವನ್ನು ನಡೆಸಲು ನಿರ್ಧರಿಸಿದೆವು. ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ಶೈಕ್ಷಣಿಕ ಕ್ಷೇತ್ರ ಅಧ್ಯಯನ ಸರಣಿಯ ಭಾಗವಾಗಿ 2017ರಲ್ಲಿ ಈ ಸಂಶೋಧನೆ ಪ್ರಕಟಗೊಂಡಿತು. ಇದರ ಪ್ರಕಾರ, ಶಿಕ್ಷಕರ ಗೈರುಹಾಜರಿ ಪ್ರಮಾಣ ಕೇವಲ ಶೇ.2.5 ಆಗಿದ್ದಿತು. ಈ ಅಧ್ಯಯನವು ತಮ್ಮನ್ನು ದೋಷಮುಕ್ತ ಗೊಳಿಸಿತು ಎಂದು ಶಿಕ್ಷಕರಿಗೆ ಸಮಾಧಾನವಾಯಿತು. ವಾಸ್ತವವನ್ನು ಕಡೆಗಣಿಸಿದ ಕೆಲವರು, ನಾವು ಶಿಕ್ಷಕರನ್ನು 'ರಕ್ಷಿಸಲು' ಪ್ರಯತ್ನಿಸುತ್ತಿದ್ದೇವೆ ಎಂದೇ ಹೇಳಿದರು.

ಅಧ್ಯಯನದ ವರದಿ ಪ್ರಕಟಗೊಂಡ ವಾರ ನಾನು ಉತ್ತರಕಾಶಿ ಜಿಲ್ಲೆಯಲ್ಲಿ ಪ್ರಯಾಣ ಮಾಡುತ್ತಿದ್ದೆ. ಹೆಚ್ಚು ಪ್ರಸರಣ ಸಂಖ್ಯೆಯುಳ್ಳ ಹಿಂದಿ ದಿನಪತ್ರಿಕೆಯೊಂದು ಆಕರ್ಷಕ ತಲೆಬರಹ ನೀಡಿ, ಜನಮನ ಕೆರಳಿಸುವ ಧಾಟಿಯಲ್ಲಿ ಈ ಸುದ್ದಿಯನ್ನು ಪ್ರಕಟಿಸಿತು: "ಜಿಲ್ಲೆಯಲ್ಲಿ ನಡೆದ ತನಿಖೆ : 26 ಶಿಕ್ಷಕರು ನಾಪತ್ತೆ!" "ನಾಪತ್ತೆ"ಗೆ ಹಿಂದಿಯಲ್ಲಿ ಆ ಪತ್ರಿಕೆ ಬಳಸಿದ ಪದ "ನದಾರದ್". ಇದು 'ನಾಪತ್ತೆ' ಅಥವಾ 'ಮಾಯ' ಎಂಬ ತೀವ್ರ ನಕಾರಾತ್ಮಕ ಅರ್ಥವನ್ನು ಕೊಡುವ ಪದ. ಮಾರನೇ ದಿನ ಆ ಸುದ್ದಿ ಪತ್ರಿಕೆಯು ಸ್ಪಷ್ಟನೆ ನೀಡಬೇಕಾಗಿ ಬಂತು. ಗೈರುಹಾಜರಾಗಿದ್ದುದು ಒಬ್ಬ ಶಿಕ್ಷಕ ಮಾತ್ರ, ಐವರ ರಜೆ ಮಂಜೂರಾಗಿತ್ತು. ಉಳಿದ ಇಪ್ಪತ್ತು ಮಂದಿಯನ್ನು ಶಿಕ್ಷಣ ಇಲಾಖೆ ತರಬೇತಿಗೆ ಬೇರೆಡೆಗೆ ಕಳುಹಿಸಿತ್ತು. 'ಕೊಳ್ಳಿದೆವ್ವ' ದ ಕಥನಕ್ಕೆ ಶಕ್ತಿ ತುಂಬಲು ಇಂತಹ ವ್ಯಾಖ್ಯಾನಗಳನ್ನು ನಿರಂತರವಾಗಿ ಬಳಸಿ ಹೇಗೆ ದಾರಿ ತಪ್ಪಿಸುತ್ತಾರೆ ಎನ್ನುವುದಕ್ಕೆ ಈ ಪ್ರಕರಣವು ಸಣ್ಣ ಉದಾಹರಣೆ ಮಾತ್ರ.

ನಮ್ಮ ಸಂಶೋಧನಾ ಅಧ್ಯಯನ ಕಂಡುಕೊಂಡ ಪ್ರಕಾರ ಶೇ.18 ಮಂದಿ ಶಿಕ್ಷಕರು ತಮ್ಮ ಶಾಲೆಗಳಲ್ಲಿ ಹಾಜರಿರಲಿಲ್ಲ. ಇನ್ನು ಶೇ.2.5 ಶಿಕ್ಷಕರು ಯಾವುದೇ ಕಾರಣ ನೀಡದೆ ಗೈರುಹಾಜರಾಗಿದ್ದರು (ತಪ್ಪಿಸಿಕೊಂಡಿದ್ದರು), ಶೇ.6ರಷ್ಟು ಶಿಕ್ಷಕರು ರಜೆಯಲ್ಲಿದ್ದರು ಹಾಗೂ ಶೇ.11ರಷ್ಟು ಶಿಕ್ಷಕರು ಇನ್ನಿತರ ಅಧಿಕೃತ ಕೆಲಸಗಳಿಗೆ, ಉದಾಹರಣೆಗೆ ತರಬೇತಿಗೆ ಹೋಗಿದ್ದರು. ನಮ್ಮ ವರದಿ ಮತ್ತು ಶೀರ್ಷಿಕೆಯನ್ನು ಬರೆಯುವಾಗ ಈ ಶೇ.18ರ 'ಗೈರುಹಾಜರಾತಿ ಪ್ರಮಾಣ' ಎಂದು ಹಣೆಪಟ್ಟಿ ಕಟ್ಟಿ ಹೇಳಲು ಆಸ್ಪದ ಇರಲಿಲ್ಲ. ಶೇ. 18ರ ಗೈರುಹಾಜರಿಯಲ್ಲಿ ಹುದುಗಿರುವ ಬೇರೆ ಬೇರೆ ಕಾರಣಗಳನ್ನು ಪ್ರತ್ಯೇಕವಾಗಿ ವಿಭಜಿಸಿ ಶೇ.18ರಷ್ಟು ಪ್ರಮಾಣ ಎಂದು ಗುರುತಿಸಿದ್ದೆವು. ನಿಖರವಾಗಿ ಇದುವೇ ಆ ಸುದ್ದಿ ಪತ್ರಿಕೆಯ ರೋಚಕ ಕಥೆಯ ಹಿಂದಿನ ರಹಸ್ಯವಾಗಿತ್ತು.

ಇಂದಿನ ಹಲವು ಕಳಪೆ ಗುಣಮಟ್ಟದ ಮಾಧ್ಯಮ ಪ್ರಸರಣ ಸಂಸ್ಥೆಗಳ ಕಾಲದಲ್ಲಿ ಇಂಥ ವರ್ತನೆ ಆಶ್ಚರ್ಯಕರವೇನೂ ಅಲ್ಲ. ಸುಳ್ಳು ಕಥನಗಳಿಗೆ ಆಹಾರ ಒದಗಿಸಿದ ಸಂಶೋಧಕರ ಅಧ್ಯಯನ ವರದಿಗಳಿಗೆ ನಾನು ಇದೇ ಕುಂಚವನ್ನು ಬಳಸುವುದಿಲ್ಲ. ಆದರೆ, ಈ ಸುದ್ದಿ ಪತ್ರಿಕೆಗಳು ಶಿಕ್ಷಕರನ್ನು ಬಲಿಪಶು ಮಾಡುವ ಕಾರ್ಯಕ್ಕೆ ತುಪ್ಪ ಸುರಿದಿವೆ. ಪತ್ರಿಕೆಯಲ್ಲಿನ ವರದಿಯಲ್ಲಿ ಶೇ.25–30ರಷ್ಟು ಗೈರುಹಾಜರಿಯಲ್ಲಿ,

ಸಕಾರಣದ ಅನುಪಸ್ಥಿತಿಯೂ ಒಳಗೊಂಡಿದ್ದು, ವಾಸ್ತವದಲ್ಲಿ ಗೈರುಹಾಜರಿಯ ಪ್ರಮಾಣ ಶೇ.3–4.5 ಇದೆ ಎನ್ನುವುದನ್ನು ಪುಟದ ಕೆಳಗೆ ಉಲ್ಲೇಖಿಸಿದ ಟಿಪ್ಪಣಿ ಅಥವಾ ನಂತರದ ಪುಟಗಳಲ್ಲಿನ ಕೋಷ್ಟಕಗಳಲ್ಲಿ ಹುದುಗಿಸಿ ಸಮಾಧಿ ಮಾಡಲಾಗಿರುತ್ತದೆ. ಇಂಥ ಲೇಖನಗಳನ್ನು ಬರೆದ ಕೆಲವು ಲೇಖಕರು ಸ್ಪಷ್ಟನೆ ಕೊಡುವ ಪ್ರಯತ್ನ ಕೂಡ ಮಾಡಿಲ್ಲ: ಬದಲಿಗೆ, ಅವರ ಲೇಖನಗಳ ಮೂಲಕ ಪತ್ರಿಕೆಗಳು ಸುಳ್ಳನ್ನು ಸಂತೋಷದಿಂದಲೇ ಪ್ರಸಾರ ಮಾಡಿವೆ.

ಶಿಕ್ಷಕರು ಇದು ಸುಳ್ಳು ಕಥನ ಎಂದು ಪ್ರತಿರೋಧಿಸಿದಾಗಲೆಲ್ಲ, 'ಅಪರಾಧಿಗಳ ಗೊಣಗಾಟ' ಎಂದು ಟೀಕಿಸಲಾಯಿತು. ಒಂದು ವೇಳೆ ಅಷ್ಟೊಂದು ಶಿಕ್ಷಕರು ಶಾಲೆಯಲ್ಲಿ ಇಲ್ಲದೇ ಹೋದರೆ, ಶಿಕ್ಷಣ ಸೊರಗುತ್ತದೆ. ಗಮನಿಸಬೇಕಾದ ಅಂಶವೇನೆಂದರೆ, ಇಂತಹ ಬಹುತೇಕ ಸಮಸ್ಯೆಗಳಿಗೆ ಶಿಕ್ಷಕರನ್ನು ದೂಷಿಸಲು ಸಾಧ್ಯವಿಲ್ಲ – ಸಂಪನ್ಮೂಲವನ್ನು ಹೇಗೆ ಯೋಜಿಸಿ ನಿರ್ವಹಣೆ ಮಾಡಬೇಕು ಎನ್ನುವುದನ್ನು ಕಂಡುಕೊಳ್ಳುವ ಮೂಲಕ ಈ ಸಮಸ್ಯೆಯನ್ನು ಬಗೆಹರಿಸಬೇಕಿರುವುದು ಶಿಕ್ಷಣ ವ್ಯವಸ್ಥೆಯ ಕೆಲಸ. ಉದಾಹರಣೆಗೆ, ಶಿಕ್ಷಕರು ರಜೆ ತೆಗೆದುಕೊಳ್ಳುವ ಪ್ರಮಾಣ, ಒದಗಿಬರಬಹುದಾದ ಬೇರೆ ಕೆಲಸಗಳನ್ನು ಮೊದಲೇ ನಿರೀಕ್ಷಿಸುವುದು ಮತ್ತು ಶಿಕ್ಷಕರನ್ನು ತರಬೇತಿಗಳಲ್ಲಿ ತೊಡಗಿಸಿಕೊಳ್ಳುವುದು ಇವುಗಳನ್ನು ಪರಿಗಣಿಸಿ ಎಷ್ಟು ಶಿಕ್ಷಕರು ಅಗತ್ಯವೆಂದು ಲೆಕ್ಕ ಹಾಕಬೇಕು.

ಕಾರ್ಖಾನೆ ಅಥವಾ ಬ್ಯಾಂಕ್‌ಗಳಲ್ಲಿ ಕೂಡ ಶೇ. 1–2ರಷ್ಟು ಗೈರುಹಾಜರಿ ಆಶ್ಚರ್ಯಕರವಲ್ಲ. ನೌಕರರು ಸೂಕ್ತ ಕಾರಣವಿಲ್ಲದೆ ರಜೆ ಹಾಕುವುದನ್ನು ತಡೆಯುವ ಪರಿಪೂರ್ಣ ಸಾಮರ್ಥ್ಯ ಇಂತಹ ವಾಣಿಜ್ಯ ಸಂಸ್ಥೆಗಳಿಗೆ ಇದೆ. ಗೈರುಹಾಜರಿಯ ಪರಿಣಾಮಗಳು (ವೇತನ ತಡೆಹಿಡಿಯುವಿಕೆ, ಶಿಸ್ತುಕ್ರಮ ಜರುಗಿಸುವುದು ಇತ್ಯಾದಿ) ಸ್ಪಷ್ಟವೂ ತೀವ್ರವೂ ಆಗಿರುತ್ತವೆ. ಹೆಚ್ಚಿನ ಶಾಲೆಗಳು ಬಹುದೂರದ ದುರ್ಗಮ ಮೂಲೆಗಳಲ್ಲಿ ಇರುವ ಕಾರಣದಿಂದ ಶೈಕ್ಷಣಿಕ ವ್ಯವಸ್ಥೆಯಲ್ಲಿ ಇಂಥ ಪ್ರವೃತ್ತಿಯನ್ನು ತಡೆಯುವ ಮತ್ತು ಶಿಕ್ಷಿಸುವ ಸಾಮರ್ಥ್ಯ ಬಹಳಷ್ಟು ಸೀಮಿತವಾಗಿದೆ. ಆದರೂ ಕೂಡಾ ಶಿಕ್ಷಕರಲ್ಲಿ ಗೈರುಹಾಜರಾತಿ ಪ್ರಮಾಣವು ಉದ್ಯಮದ ಸಮಪ್ರಮಾಣದಲ್ಲಷ್ಟೇ ಇರುವುದು ಆಶ್ಚರ್ಯಕರವೇ ಸರಿ.

ಸರಕಾರಿ ಶಿಕ್ಷಕರನ್ನು ಕುರಿತೇ ಇರುವ ಈ ಪುಸ್ತಕದ ಕೊನೆಯಲ್ಲಿ ಶಿಕ್ಷಕರ ಗೈರುಹಾಜರಿಯನ್ನು ಕುರಿತಾದ ವಾಸ್ತವಾಂಶ ನಿಮಗೆ, ಒಂದು ವೇಳೆ ಮೊದಲು ತಿಳಿದಿರದೇ ಇದ್ದರೂ, ಅಚ್ಚರಿ ಉಂಟುಮಾಡಿರಲಾರದು. ಈ ಶಿಕ್ಷಕರು ಎಂತಹವರು ಎಂದು ನಿಮಗೆ ಚೆನ್ನಾಗಿ ಅರ್ಥವಾಗಬೇಕು. ತಮ್ಮ ಕರ್ತವ್ಯಗಳ ಸಾಮಾನ್ಯ ಗ್ರಹಿಕೆಯ ಮಿತಿಯನ್ನೂ ಮೀರಿ, ಅಡ್ಡಿ–ಆತಂಕಗಳನ್ನು ಹಾಯ್ದು, ಸಂಪನ್ಮೂಲಗಳ ತೀವ್ರ ಕೊರತೆಯ ನಡುವೆಯೂ ಕೆಲಸ ಮಾಡುವ ಶಿಕ್ಷಕರಿಗೆ ನೀವು ಈ ಪುಸ್ತಕದ ಪುಟಪುಟಗಳಲ್ಲೂ ಮುಖಾಮುಖಿಯಾಗಿದ್ದೀರಿ.

ಇದೇನೋ ಒಂದಿಬ್ಬರು ಶಿಕ್ಷಕರ ಕಥನಗಳೂ ಅಲ್ಲ. ಇಂಥ ಶಿಕ್ಷಕರ ಸಂಖ್ಯೆ ಲೆಕ್ಕವಿಡಲು ಕಷ್ಟಸಾಧ್ಯವಾದಷ್ಟು ದೊಡ್ಡದು. ನಾವು ಐದು ರಾಜ್ಯಗಳ 50 ಜಿಲ್ಲೆಗಳ ಸಣ್ಣ ಪಟ್ಟಣಗಳಲ್ಲಿ ಹರಡಿಕೊಂಡ ಇನ್ನೂರಕ್ಕೂ ಹೆಚ್ಚು ಶಿಕ್ಷಕ ಕಲಿಕಾ ಕೇಂದ್ರ (ಟಿಎಲ್‌ಸಿ)ಗಳನ್ನು

ಹೊಂದಿದ್ದೇವೆ. ಈ ಟಿಎಲ್‌ಸಿಗಳಲ್ಲಿ ಗ್ರಂಥಾಲಯ, ಕೆಲವು ಕಂಪ್ಯೂಟರ್‌ಗಳು, ಶಿಕ್ಷಕರು ಮತ್ತು ಮಕ್ಕಳಿಗೆ ಆಸಕ್ತಿ ಹುಟ್ಟಿಸುವ ಕೆಲವು ಕ್ರೀಡಾ ಕಿಟ್‌ಗಳು, ಪ್ರಯೋಗದ ಕಿಟ್‌ಗಳು ಮತ್ತು ಸಂಪನ್ಮೂಲಗಳು ಮುಂತಾದ ವಸ್ತುಗಳಿವೆ. ಈ ಟಿಎಲ್‌ಸಿಗಳಲ್ಲಿ ನಾವು ಹಮ್ಮಿಕೊಳ್ಳುವ ಕಲಿಕಾ ಸಭೆಗಳಲ್ಲೂ ಕಾರ್ಯಾಗಾರಗಳಲ್ಲೂ ಭಾಗವಹಿಸಲು ಸಾವಿರಾರು ಶಿಕ್ಷಕರು ನಿಯಮಿತವಾಗಿ ಬರುತ್ತಾರೆ. ಗ್ರಂಥಾಲಯದಿಂದ ಪುಸ್ತಕ ತೆಗೆದುಕೊಳ್ಳಲು ಇಲ್ಲವೇ ಬೇರೆ ಶಿಕ್ಷಕರೊಂದಿಗೆ ಮಾತುಕತೆಯಾಡಲೂ ಬರುತ್ತಿರುತ್ತಾರೆ.

ಬಹುತೇಕ ಚಟುವಟಿಕೆಗಳು ಶಾಲೆಯ ಅವಧಿ ಮುಗಿದ ಬಳಿಕ ಅಥವಾ ರಜಾದಿನಗಳಂದು ನಡೆಯುತ್ತವೆ. ಶಿಕ್ಷಕ/ಶಿಕ್ಷಕಿಯರು ಇವುಗಳಲ್ಲಿ ಸ್ವಂತಇಚ್ಛೆಯಿಂದ ಪಾಲ್ಗೊಳ್ಳುತ್ತಾರೆ; ಶಿಕ್ಷಕರಿಗೆ ಪಾಲ್ಗೊಳ್ಳುವಂತೆ ಯಾರೂ 'ಆದೇಶ' ನೀಡುವುದಿಲ್ಲ. ಅವರು ತಮ್ಮ ವೈಯಕ್ತಿಕ ಸಮಯವನ್ನು ಇದಕ್ಕೆ ಬಳಸುತ್ತಾರೆ. ಪ್ರಯಾಣಕ್ಕೆ ತಮ್ಮದೇ ಹಣ ವೆಚ್ಚ ಮಾಡುತ್ತಾರೆ. ಕೆಲವರಿಗೆ ವೆಚ್ಚ ಸ್ವಲ್ಪ ಹೊರೆ ಎನ್ನಿಸಿದರೂ ಸ್ವ ಇಚ್ಛೆಯಿಂದಲೇ ಹೀಗೆ ತೊಡಗಿಸಿಕೊಳ್ಳುತ್ತಾರೆ.

ನನಗೆ ಉತ್ತರ ಗೊತ್ತಿದ್ದರೂ ನಾನು ಅಂಥ ಶಿಕ್ಷಕರಿಗೆ "ನೀವು ಇಲ್ಲಿಗೇಕೆ ಬರುತ್ತೀರಿ?" ಎನ್ನುವ ಪ್ರಶ್ನೆಯನ್ನು ಕೇಳುತ್ತಲೇ ಇರುತ್ತೇನೆ. ಇದಕ್ಕೆ ಉತ್ತರವನ್ನು ಕೆಲವರು ಹೆಚ್ಚು ಸ್ಫುಟವಾಗಿ ನೀಡಬಹುದು. ಆದರೆ, ಎಲ್ಲ ಉತ್ತರಗಳ ಸಾರವಿಷ್ಟೇ. "ಇನ್ನಷ್ಟು ಚೆನ್ನಾಗಿ ಪಾಠ ಮಾಡಲು ನಾವು ಕಲಿಯಬೇಕು." ಇನ್ನಷ್ಟು ಆಳವಾಗಿ ಪರೀಕ್ಷಿಸಲು, "ಏಕೆ ನೀವು ಇನ್ನಷ್ಟು ಚೆನ್ನಾಗಿ ಪಾಠ ಮಾಡಬೇಕು?" ಎಂದು ಕೇಳಿದರೆ, ಬರುವ ಉತ್ತರಗಳು ವೈವಿಧ್ಯಮಯ: "ನಾವು ನಮ್ಮ ಕೆಲಸವನ್ನು ಗರಿಷ್ಠ ಸಾಮರ್ಥ್ಯ ಬಳಸಿ ಮಾಡಬೇಕು" ಎನ್ನುವ ಉತ್ತರದಿಂದ ಹಿಡಿದು, "ಮಕ್ಕಳ ಭವಿಷ್ಯವು ನಮ್ಮ ಕೈಯಲ್ಲಿದೆ" ಹಾಗೂ "ನಮ್ಮ ಕೆಲಸ ಸಮಾಜವನ್ನು ರೂಪಿಸುತ್ತದೆ. ಆದ್ದರಿಂದ ಇದು ನಮ್ಮ ಕರ್ತವ್ಯ" ಹಲವಾರು. ಇಂತಹ ಉತ್ತರಗಳು ಹಲವಾರು.

ಇದ್ಯಾವುದೂ ಔದ್ಯಮಿಕ ಸಂಸ್ಥೆಗಳಲ್ಲಿ ನಡೆಯುವುದಿಲ್ಲ. ಉದ್ಯಮಗಳ ನೌಕರರು ತಮ್ಮ ಕೆಲಸವನ್ನು ಇನ್ನಷ್ಟು ಉತ್ತಮವಾಗಿ ಮಾಡಲು ಸ್ವಂತ ಸಮಯ (ಉದಾಹರಣೆಗೆ, ಭಾನುವಾರ)ದಲ್ಲಿ ಕಲಿಕೆಯಲ್ಲಿ ತೊಡಗುವುದಿಲ್ಲ. ಕಲಿಕೆಯ ಅವಕಾಶವನ್ನು ಬಳಸಿಕೊಳ್ಳಲು ಸ್ವಂತ ಹಣವನ್ನು ವೆಚ್ಚ ಮಾಡುವುದೂ ಇಲ್ಲ.

ಫೌಂಡೇಷನ್‌ನಲ್ಲಿ ಪೂರ್ಣಾವಧಿ ತೊಡಗಿಸಿಕೊಳ್ಳುವ ಮುನ್ನ ಹಲವು ದಶಕಗಳ ಕಾಲ ವಾಣಿಜ್ಯ ವ್ಯವಹಾರ ಕ್ಷೇತ್ರದಲ್ಲಿ ಕಳೆದಿದ್ದೇನೆ. ನಿಮ್ಮಲ್ಲಿ ಹೆಚ್ಚಿನವರಿಗೆ ಇಂಥದ್ದೇ ಅನುಭವ ಆಗಿರಬಹುದು. ನಮ್ಮ ಸಹೋದ್ಯೋಗಿಗಳು (ಒಬ್ಬ ಸಾಮಾನ್ಯ ಉದ್ಯೋಗಿ) ಕೆಲಸವನ್ನು ಇನ್ನಷ್ಟು ಚೆನ್ನಾಗಿ ಮಾಡಲು, ಯಾವುದೇ ಹೊರಗಣ ಆಮಿಷಗಳಿಲ್ಲದೆ, ತನ್ನ ಭಾನುವಾರಗಳನ್ನು ಬಳಸುತ್ತಾನೆ–ಅದೂ ನಿಯಮಿತವಾಗಿ–ಎಂದರೆ ಹಾಸ್ಯಾಸ್ಪದ ಮಾತ್ರವಲ್ಲದೆ ಆಲೋಚನೆಗೆ ನಿಲುಕದ್ದು ಎನ್ನುವುದು ನಮಗೆಲ್ಲರಿಗೂ ಗೊತ್ತಿರುವಂಥದ್ದೇ.

ಶಿಕ್ಷಕರು ಇಂಥ ಕೆಲಸ ಏಕೆ ಮಾಡುತ್ತಾರೆ? ಅವರು ಇದಕ್ಕೆ ಕೊಡುವ ಉತ್ತರಗಳನ್ನು ಇನ್ನಷ್ಟು ಆಳವಾಗಿ ಶೋಧಿಸೋಣ.

ಹೆಚ್ಚಿನ ಶಿಕ್ಷಕರು ತಮ್ಮ ವೃತ್ತಿ ಜೀವನದ ಕರೆ ಎನ್ನುವ ಏಕಮಾತ್ರ ಉದ್ದೇಶದಿಂದ ಶಿಕ್ಷಕರಾಗಿರುವುದಿಲ್ಲ ಎನ್ನುವುದು ನಿಜ. ಕೆಲವರನ್ನು ಹೊರತುಪಡಿಸಿ, ಉಳಿದವರು ಜಗತ್ತನ್ನು ಬದಲಿಸಲು ಬಂದವರಲ್ಲ ಎನ್ನುವುದು ಕೂಡ ಸತ್ಯ. ಬಹುತೇಕರು ಗೌರವಾರ್ಹ ವೇತನ ನೀಡುವ ಭದ್ರವಾದ ಕೆಲಸ ಎಂದೇ ಶಿಕ್ಷಕ ವೃತ್ತಿಗೆ ಬಂದಿರುತ್ತಾರೆ. ಭದ್ರವಾದ, 'ಒಳ್ಳೆಯ' ಉದ್ಯಮ ಸಂಸ್ಥೆಗಳಲ್ಲಿ ಕೆಲಸ ಮಾಡುವುದು ಕೂಡ ಇಂಥ ಪ್ರೇರಣೆಯಿಂದಲೇ. ಆದ್ದರಿಂದ, ಸಾಮಾನ್ಯ ಶಿಕ್ಷಕನೊಬ್ಬ ದೇಶದ ಸಾಮಾನ್ಯ ನಾಗರಿಕನಿದ್ದಂತೆಯೇ – ಶಿಕ್ಷಕ ವೃತ್ತಿಯನ್ನು ಸೇರುವಾಗ ಆತ ಉನ್ನತ ಉದ್ದೇಶಗಳನ್ನು ಹೊಂದಿರಲೇಬೇಕು ಎಂದೇನಿಲ್ಲ.

ಹಾಗಾದರೆ ಇಲ್ಲಿ ನಡೆದಿರುವುದಾದರೂ ಏನು? ಅರ್ಥ ಮಾಡಿಕೊಳ್ಳಲು ಕಷ್ಟವೇನಲ್ಲ.

ಶಿಕ್ಷಕರನ್ನು ಮಕ್ಕಳು ಸದಾಕಾಲ ಸುತ್ತುವರಿದಿರುತ್ತಾರೆ. ಇದರಲ್ಲಿ ಆಶ್ಚರ್ಯವೇನೂ ಇಲ್ಲ. ಇದು ಅವರ ವೃತ್ತಿಜೀವನದ ನಿತ್ಯ ದಿನಚರಿ. ಮಕ್ಕಳಿಗೆ ಸಂಬಂಧಿಸಿದಂತೆ ಸಾಮಾನ್ಯ ಮನುಷ್ಯರ ಪ್ರತಿಕ್ರಿಯೆ ಹಲವು ಕಾರಣಗಳಿಂದಾಗಿ ಬೇರೆ ಬೇರೆಯಾಗಿದ್ದರೂ, ಆಳದಲ್ಲಿ, ಮನಸ್ಸಿನ ಕೇಂದ್ರದಲ್ಲಿ, ತಮ್ಮ ಮಾನವ ಪ್ರಭೇದದ ಎಳೆಯರನ್ನು ರಕ್ಷಿಸಬೇಕೆಂಬ ತುಡಿತ ಜೀವವಿಕಸನೀಯ ಸ್ವಭಾವದಿಂದ ನಿರ್ಧಾರವಾಗಿರುತ್ತದೆ. ಸರಳವಾಗಿ ಹೇಳಬೇಕೆಂದರೆ, ಪ್ರೌಢವಯಸ್ಕರು ಮಕ್ಕಳ ಬಗ್ಗೆ ಸ್ವಾಭಾವಿಕವಾಗಿ ಭಾವನಾತ್ಮಕವಾಗಿ ಸ್ಪಂದಿಸುತ್ತಾರೆ; ಒಂದು ವೇಳೆ ಅವರು ಪ್ರತಿದಿನವೂ ಮಕ್ಕಳನ್ನು ನೋಡುತ್ತಿದ್ದರೆ, ಅವರ ಜೊತೆಗೆ ಸಂಬಂಧವನ್ನು ಬೆಳೆಸಿಕೊಳ್ಳುತ್ತಾರೆ, ಅವರ ಬಗ್ಗೆ ಕಾಳಜಿ ವಹಿಸಲು ಆರಂಭಿಸುತ್ತಾರೆ. ವ್ಯಕ್ತಿತ್ವದ ಗುಣಲಕ್ಷಣಗಳ ನಮೂನೆಗಳ ಒಂದು ಅತಿಯಲ್ಲಿರುವ ಕೆಲವರನ್ನು ಹೊರತುಪಡಿಸಿದರೆ, ಹೆಚ್ಚಿನ ಶಿಕ್ಷಕರು ತಮ್ಮ ವಿದ್ಯಾರ್ಥಿಗಳ ಬಗ್ಗೆ ಕಾಳಜಿ ವಹಿಸುತ್ತಾರೆ. ಏಕೆಂದರೆ, ಅದು ಸ್ವಾಭಾವಿಕವಾದದ್ದು. ಸಿಡುಕುವ ಶಿಕ್ಷಕರು ಅಥವಾ ಪದೇಪದೇ ಶಾರೀರಿಕ ದಂಡನೆ ವಿಧಿಸುವ (ಹೆಚ್ಚಿನ) ಶಿಕ್ಷಕರು ಕೂಡ, ತಮ್ಮ ವಿದ್ಯಾರ್ಥಿಗಳ ಜೊತೆಗೆ ಕಾಳಜಿಯುತ ಸಂಬಂಧ ಹೊಂದಿರುತ್ತಾರೆ. ಸಿಡುಕು, ದೇಹ ದಂಡನೆ ಇತ್ಯಾದಿಗೆ ಕ್ಷಮೆ ಇಲ್ಲವಾದರೂ, ಇದು ಶಿಕ್ಷಕ–ವಿದ್ಯಾರ್ಥಿಗಳ ಸಂಬಂಧದಲ್ಲಿ ಅಂತರ್ಗತವಾಗಿರುವ ಮನುಷ್ಯ ಬಾಂಧವ್ಯ ಸಂಕೀರ್ಣವಾದುದು ಎಂಬುದನ್ನು ಹೇಳುತ್ತದೆ.

ಉತ್ತಮವಾದ ಶಿಕ್ಷಣವು ಮಕ್ಕಳ ಬದುಕನ್ನು ಬದಲಿಸುತ್ತದೆ ಎನ್ನುವ ಅರಿವು ಶಿಕ್ಷಕರಿಗೆ ಚೆನ್ನಾಗಿಯೇ ಇರುತ್ತದೆ. ಸರ್ಕಾರಿ ಶಾಲೆಯಲ್ಲಿ ಇವರು ಕಲಿಸುವಂಥ ಮಕ್ಕಳಲ್ಲಿ ಹೆಚ್ಚಿನವರು ಪ್ರತಿಕೂಲ ಪರಿಸ್ಥಿತಿಯಿಂದ ಬಂದವರಾಗಿರುವುದರಿಂದ, ಇಂಥ ಶಿಕ್ಷಕರ ವಿಚಾರದಲ್ಲಿ ಇದು ಇನ್ನಷ್ಟು ಸತ್ಯ. ಇಂಥ ಮಕ್ಕಳಲ್ಲಿ ಹೆಚ್ಚಿನವರಿಗೆ ಬಡತನದಿಂದ ಮುಕ್ತಿ ಮಾತ್ರವಲ್ಲದೆ, ಸಾಮಾಜಿಕ ಶ್ರೇಣೀಕರಣದ ಸಂಕೋಲೆಯಿಂದ ತಪ್ಪಿಸಿಕೊಳ್ಳಲು ಉಳಿದಿರುವ ಏಕೈಕ ಮಾರ್ಗವೇ ಶಿಕ್ಷಣ.

ಈಗ ಇವೆರಡನ್ನೂ ಜೊತೆಗಿರಿಸಿ ಪರಿಶೀಲಿಸೋಣ. ಶಿಕ್ಷಕರು ತಮ್ಮ ವಿದ್ಯಾರ್ಥಿಗಳ ಬಗ್ಗೆ ಕಾಳಜಿ ವಹಿಸುತ್ತಾರೆ. ಅವರ ಜೀವನವನ್ನು ಉತ್ತಮಗೊಳಿಸಲು ಇರುವ ಕೆಲವೇ ಮಾರ್ಗಗಳಲ್ಲಿ ತಮ್ಮ ಕೆಲಸ ಕೂಡ ಒಂದು ಎನ್ನುವುದು ಅವರಿಗೆ ಗೊತ್ತಿರುತ್ತದೆ. ಆದ್ದರಿಂದ, ತಮಗೆ ಎಷ್ಟು ಸಾಧ್ಯವೋ ಅಷ್ಟನ್ನು ಮಾಡೋಣ ಎನ್ನುವ ಹಂಬಲ

ಬಹುತೇಕ ಎಲ್ಲ ಶಿಕ್ಷಕರಿಗೆ ಇರುವುದು ಸ್ವಾಭಾವಿಕವಲ್ಲವೇ? ಎಲ್ಲ ಶಿಕ್ಷಕರೂ ಎಲ್ಲ ಕಾಲಗಳಲ್ಲೂ ಇದನ್ನು ಮಾಡುತ್ತಾರೆ ಎಂದಲ್ಲ. ಆದರೆ ಕೆಲವರನ್ನು ಮಾತ್ರ ಹೊರತುಪಡಿಸಿ ಹೆಚ್ಚಿನ ಶಿಕ್ಷಕಕರಲ್ಲಿ ಈ ಪರಿಣಾಮಕಾರಿ ಶಕ್ತಿ ಇದೆ. ಆ ಶಕ್ತಿ ಅವರನ್ನು ಪ್ರೇರೇಪಿಸುತ್ತದೆ.

ಇಲ್ಲಿ ಇನ್ನೊಂದು ವಿಷಯವಿದೆ. ಬೇರೆಯವರಿಗೆ ಇದು ಗೊತ್ತಿರುತ್ತದೆಯೋ ಇಲ್ಲವೋ ತಿಳಿಯದು– ಆದರೆ, ಶಿಕ್ಷಕನು ತಾನು ಶಿಕ್ಷಕನಾಗಿ ಎಷ್ಟು ಯಶಸ್ವಿ ಎನ್ನುವುದು ಆತನಿಗೆ/ಆಕೆಗೆ ಗೊತ್ತಿರುತ್ತದೆ. ವಾಸ್ತವವಾಗಿ, ಮಕ್ಕಳು ಎಷ್ಟು ಕಲಿಯುತ್ತಿದ್ದಾರೆ, ಅಂದರೆ, ತಮ್ಮ ಪಾತ್ರವನ್ನು ಎಷ್ಟು ಪರಿಣಾಮಕಾರಿಯಾಗಿ ನಿರ್ವಹಿಸುತ್ತಿದ್ದೇವೆ ಎಂದು ತೂಗಿನೋಡಬಲ್ಲರು. ಈ ಜ್ಞಾನವು ಶಿಕ್ಷಕನಿಗೆ ಪ್ರೇರಣಾ ಶಕ್ತಿಯಾಗಿ ದಿಕ್ಕನ್ನು ತೋರಿಸುತ್ತದೆ – ಇನ್ನಷ್ಟು ಉತ್ತಮವಾಗಿ ಬೋಧಿಸಲು ನೆರವಾಗುತ್ತದೆ.

ಶಿಕ್ಷಕನ ಪಾತ್ರದ ಸಾಮಾಜಿಕ, ಮನೋವೈಜ್ಞಾನಿಕ ಮತ್ತು ನೈತಿಕ ಭೂಮಿಕೆಯನ್ನು ನೋಡಿದರೆ, ಅದಕ್ಕೆ ಸಮಾನವಾದ 'ಕೆಲಸ' ಜಗತ್ತಿನಲ್ಲಿ ಬೇರೆ ಯಾವುದೂ ಇಲ್ಲ. ಶಿಕ್ಷಕನ ಪಾತ್ರ ವೈಶಿಷ್ಟ್ಯಪೂರ್ಣವಾದುದು. ಶಿಕ್ಷಕನಿಗೆ ತೀರಾ ಹತ್ತಿರದ ಹೋಲಿಕೆ ಎಂದರೆ, ವ್ಯವಹಾರಜ್ಞಾನದಿಂದ ಇದನ್ನು ಯಾರೂ ಊಹಿಸಬಹುದು – ಅವರೇ ಪೋಷಕರು. ಆತ/ಆಕೆಗೆ ಅದು ಬೇಕಿರದಿದ್ದರೂ ಅಥವಾ ಗೊತ್ತಿಲ್ಲದೆ ಇದ್ದರೂ ಶಿಕ್ಷಕರು 'ಭಾಗಶಃ– ಪೋಷಕರು'. ಹಾಗಾಗಿ, ಅವರು ತಮ್ಮ ವಿದ್ಯಾರ್ಥಿಗಳ ಒಳಿತಿಗಾಗಿಯೇ ಕೆಲಸ ಮಾಡುತ್ತಾರೆ. ಶಿಕ್ಷಕರ ಪಾತ್ರದ ವಿಶಿಷ್ಟತೆಯನ್ನು ಅರಿಯದೇ ಹೋದರೆ ಅದನ್ನು ಯಾಕೆ ಎಂದು ವಿವರಿಸಲು ಇಲ್ಲವೇ ಅರ್ಥ ಮಾಡಿಕೊಳ್ಳಲು ಸಾಧ್ಯವಿಲ್ಲ.

ಈ ಶಕ್ತಿಯುತ, ಸಕಾರಾತ್ಮಕ ಮಾನವ ಪ್ರೇರಣಾಶಕ್ತಿಯನ್ನು ಉಪಯೋಗಿಸಿಕೊಳ್ಳುವ ಬದಲು, ಅದನ್ನು ದುರ್ಬಲಗೊಳಿಸಿ ಕುಗ್ಗಿಸುವ ಮೂಲಕ ನಮ್ಮ ಶಿಕ್ಷಣ ವ್ಯವಸ್ಥೆ ಅಣಕವಾಡುತ್ತಿದೆ. ಶಿಕ್ಷಕನ ಪಾತ್ರವನ್ನು ಕುಂದಿಸಿ, ಅವರು ವಿಸ್ತಾರವಾದ ಸರ್ಕಾರಿ ವ್ಯವಸ್ಥೆಯ ಅತ್ಯಂತ ಕೆಳ ಹಂತಕ್ಕೆ ಸೇರಿದವರೆಂಬಂತೆ ಪರಿಗಣಿಸಲಾಗುತ್ತದೆ, ಅವರ ಬಲ ಕುಗ್ಗಿಸಲಾಗುತ್ತದೆ. ಅವರಿಗೆ ಕನಿಷ್ಠ ಮೂಲಭೂತ ಸಂಪನ್ಮೂಲಗಳನ್ನು ಹಾಗೂ ಪೂರಕ ಕೆಲಸದ ಪರಿಸರವನ್ನು ನಿರಾಕರಿಸಿ, ಪರಿಶೀಲನಾಧಿಕಾರಿಗಳ ತನಿಖಾಸಂಸ್ಕೃತಿಯನ್ನು ಬೆಳೆಸಿ, ಪದೇಪದೇ ಅಗೌರವದಿಂದ ನಡೆಸಿಕೊಂಡು ಧೃತಿಗೆಡಿಸಲಾಗುತ್ತದೆ.

ಸಕಾರಾತ್ಮಕ ಮಾನವ ಪ್ರೇರಣಾಶಕ್ತಿಯ ಅಂತರ್ಗತ ಬಲದೊಡನೆ ಶಿಕ್ಷಕರ ಶುದ್ಧ ಚೈತನ್ಯ ಒಡಗೂಡಿದ್ದರಿಂದ, ಕೆಲವೊಮ್ಮೆ ಕೆಲವು ಉತ್ತಮ ಅಧಿಕಾರಿಗಳ ಅಥವಾ ಸಮುದಾಯದ ಬೆಂಬಲದಿಂದ, ಈ ಪುಸ್ತಕದಲ್ಲಿ ನೀವು ಕಂಡ ಶಿಕ್ಷಕರ ಕಥನಗಳು ರೂಪುಗೊಂಡಿವೆ.

ನಾವು ಹಾಗೂ ಈ ದೇಶ ಮಾಡಬೇಕಾದ ಕೆಲಸವೇನು ಎನ್ನುವುದನ್ನು ಸೂಚಿಸುವ ಮೂಲಕ ಮುಕ್ತಾಯಗೊಳಿಸುತ್ತಿದ್ದೇನೆ – ಶೈಕ್ಷಣಿಕ ನೀತಿಯು, ಶಿಕ್ಷಕರಿಗೆ ಸಂಬಂಧಪಟ್ಟಂತೆ, ಕ್ಷೇತ್ರದಲ್ಲಿ ನೈಜ ಕ್ರಿಯೆಗೆ ದಾರಿ ಮಾಡಬೇಕು. ಈ ಮೂಲಕ ಶಿಕ್ಷಣವು ಸಮತೆಯನ್ನೂ ಅತ್ಯುತ್ತಮ ಗುಣಮಟ್ಟವನ್ನೂ ಸಾಧಿಸಬೇಕು.

ಮೊದಲಿಗೆ, ಶಿಕ್ಷಕರು ಕೆಲಸಮಾಡುವ ಮೂಲಭೂತ ಭೌತಿಕ ಪರಿಸರ

ಅಸಮರ್ಪಕವೂ ಗಾಬರಿ ಹುಟ್ಟಿಸುವಂತೆಯೂ ಇದ್ದರೆ ಅವರು ಸದಾ ಕಾರ್ಯಪ್ರವೃತ್ತರೂ ಉತ್ಸಾಹಭರಿತರೂ ಆಗಿರಬೇಕು ಎಂದು ನಿರೀಕ್ಷಿಸುವುದು ಎಷ್ಟು ಸರಿ? ಶುಚಿಯಾಗಿರುವ ಸಮರ್ಪಕ ಶೌಚಾಲಯಗಳು, ನೀರಿನ ವ್ಯವಸ್ಥೆ, ವಿದ್ಯುತ್ ಪೂರೈಕೆ, ಸ್ವಂತದ ಸಣ್ಣದೊಂದು ಕೆಲಸದ ಜಾಗ ಕೂಡ ಇಲ್ಲದೇ ಹೋದರೆ ಅವರು ಹೇಗೆ ಕೆಲಸ ಮಾಡುತ್ತಾರೆ? ನಾವು ಶಿಕ್ಷಕ ವೃತ್ತಿಯನ್ನು ಗೌರವಿಸುವುದೇ ಹೌದಾದರೆ ಶಿಕ್ಷಣ ವ್ಯವಸ್ಥೆಯಲ್ಲಿ ಈ ಮೂಲಭೂತ ಸಂಗತಿಗಳನ್ನು ಪೂರೈಸುವ ಮೂಲಕವೇ ಆ ಗೌರವ ಪ್ರಕಟಗೊಳ್ಳಬೇಕು.

ಎರಡನೆಯದಾಗಿ, ಅತ್ಯಂತ ಮೂಲಭೂತ ಸ್ವರೂಪದ ಕಲಿಕಾ ಸಂಪನ್ಮೂಲಗಳನ್ನು ಹಾಗೂ ಸಾಧನಗಳನ್ನು ಪಡೆಯಲೂ ಅವರು ಪರದಾಡುವುದು ನಿಲ್ಲಬೇಕು. ಎಲ್ಲ ಶಿಕ್ಷಕರಿಗೂ ಪಠ್ಯಕ್ರಮವನ್ನು ಪೂರ್ಣಗೊಳಿಸಲು ಅಗತ್ಯವಾದ ಕಲಿಕಾ ಸಾಮಗ್ರಿ ಲಭ್ಯವಾಗಬೇಕು. ಪುಸ್ತಕಗಳಿಂದ ಹಿಡಿದು ಪ್ರಯೋಗದ ಕಿಟ್‌ಗಳು, ಪೆನ್ಸಿಲ್ ಮತ್ತು ಕಾಗದ ಇದರಲ್ಲಿ ಸೇರಬೇಕು.

ಮೂರನೆಯದಾಗಿ, ಶಿಕ್ಷಕರಿಗೆ ಬೇರೆ ಕೆಲಸಗಳನ್ನು ವಹಿಸಬಾರದು. ಅವರನ್ನು ಬೋಧನೆ ಹಾಗೂ ವಿದ್ಯಾರ್ಥಿಗಳ ಮೇಲೆ ಗಮನವಿರಿಸಲು ಬಿಡಬೇಕು. ಶಿಕ್ಷಕರನ್ನು ಸಮೀಕ್ಷೆಗಳು, ಸಾರ್ವಜನಿಕ ಸೇವೆಗಳ ವಿತರಣೆ, ಸ್ಥಳೀಯ ಚುನಾವಣೆ ಇತ್ಯಾದಿ ಕೆಲಸಗಳಿಗೆ ನಿಯೋಜಿಸುವುದನ್ನು ನಿಲ್ಲಿಸಬೇಕು. ಶಿಕ್ಷಕರಿಂದ ಮತ್ತೆ ಮತ್ತೆ ಅಂಕಿ–ಅಂಶಗಳನ್ನು ಕೇಳುವ ಪರಿಪಾಠವನ್ನು, ಮಾಹಿತಿ ತಂತ್ರಜ್ಞಾನದ ಸಾಧನಗಳ ಜಾಣ್ಮೆಯ ಬಳಕೆಯ ಮೂಲಕ ನಿವಾರಿಸಬೇಕು.

ನಾಲ್ಕನೆಯದಾಗಿ, ಅಗತ್ಯವಿರುವಷ್ಟು ಶಿಕ್ಷಕರನ್ನು ನೇಮಕ ಮಾಡಿಕೊಳ್ಳಬೇಕು. ದೇಶದಲ್ಲಿ ಅಂದಾಜು ಇಪ್ಪತ್ತು ಲಕ್ಷ ಶಿಕ್ಷಕ ಹುದ್ದೆಗಳು ಖಾಲಿ ಉಳಿದಿದ್ದು, ಈಗ ಸೇವೆಯಲ್ಲಿ ಇರುವುದು ಒಟ್ಟು ತೊಂಭತ್ತು ಲಕ್ಷ ಶಿಕ್ಷಕರು ಮಾತ್ರ. ಕೊರತೆ ಬಹಳ ದೊಡ್ಡದಿದೆ. ಹಲವು ತರಗತಿಗಳನ್ನೂ ಒಳಗೊಂಡಂತೆ ತಮಗೆ ನಿರ್ವಹಿಸಲು ಸಾಧ್ಯವಾಗದಷ್ಟು ವಿದ್ಯಾರ್ಥಿಗಳನ್ನು, ಶಿಕ್ಷಕರು ನೋಡಿಕೊಳ್ಳುತ್ತಿದ್ದು, ಕೆಲವೊಮ್ಮೆ ತಾವು ಓದಿಯೇ ಇರದ ವಿಷಯಗಳನ್ನು ಕೂಡ ಕಲಿಸಬೇಕಾದ ಪರಿಸ್ಥಿತಿ ಇದೆ.

ಐದನೆಯದಾಗಿ, ಶಿಕ್ಷಕರು ಸೇವಾ ನಿಯಮಗಳಲ್ಲಿ ತಾರತಮ್ಯವನ್ನು ಎದುರಿಸಬಾರದು. ದೇಶದೆಲ್ಲೆಡೆ ಲಕ್ಷಾಂತರ 'ಅರೆಕಾಲಿಕ–ಶಿಕ್ಷಕರು' ಶಾಲೆಗಳಲ್ಲಿ ಪೂರ್ಣಾವಧಿ ಶಿಕ್ಷಕರು ಮಾಡುವ ಕೆಲಸವನ್ನೇ ಮಾಡುತ್ತಿದ್ದಾರೆ. ಆದರೆ, ಅವರಿಗೆ ಸಿಗುತ್ತಿರುವ ವೇತನ ಅರ್ಧದಿಂದ ಕಾಲು ಭಾಗ ಮಾತ್ರ. ಅಂಥ ಎಲ್ಲ ಅರೆಕಾಲಿಕ ಶಿಕ್ಷಕರು ಅಗತ್ಯ ವಿದ್ಯಾರ್ಹತೆ ಪಡೆದಿದ್ದಲ್ಲಿ ಅವರಿಗೆ ಸೇವಾ ನಿಯಮಗಳು ಅನ್ವಯವಾಗಬೇಕು; ಪೂರ್ಣಾವಧಿ ಶಿಕ್ಷಕರ ವೇತನವೂ ಸಿಗಬೇಕು. ಪ್ರಾಥಮಿಕ ಹಂತದಿಂದ ಹೈಸ್ಕೂಲ್‌ವರೆಗೆ ಸೇವಾ ನಿಯಮಗಳು ಮತ್ತು ಪರಿಹಾರ ಭತ್ಯೆಗಳು ಸಮನಾಗಿರಬೇಕು.

ಆರನೆಯದಾಗಿ, ಶಿಕ್ಷಕರಿಗೆ ವೃತ್ತಿಯಲ್ಲಿ ಪ್ರಗತಿ ಹಾಗೂ ಬೆಳವಣಿಗೆಗೆ ಬೆಂಬಲ ಕೊಡಬೇಕು. ಇದು ಅವರ ಅಗತ್ಯವನ್ನು ಆಧರಿಸಿರಬೇಕೇ ಹೊರತು ಕೇಂದ್ರೀಕೃತ,

ಅವೈಯಕ್ತಿಕವಾದ ವ್ಯವಸ್ಥೆ ಆಗಬಾರದು. ಇದಕ್ಕಾಗಿ ಉನ್ನತ ಗುಣಮಟ್ಟದ ಶಿಕ್ಷಣವನ್ನು ನಿರಂತರವಾಗಿ ಕೊಡಬೇಕಾಗುವುದಲ್ಲದೆ ಸಮಾನಸ್ಕಂಧರ ಜೊತೆ ಕಲಿಕೆಗೆ ಅವಕಾಶ ನೀಡಬೇಕಾಗುತ್ತದೆ. ಅಭಿವೃದ್ಧಿ ಆಧರಿತ ಮೇಲುಸ್ತುವಾರಿ ಮೂಲಕ ಅವರ ಕೆಲಸಗಳ ವಸ್ತುನಿಷ್ಠ ಮೌಲ್ಯಮಾಪನ ಆಗಬೇಕು. ಉತ್ತಮ ಕೆಲಸವನ್ನು ಗುರುತಿಸಬೇಕು. ಶಿಕ್ಷಣ ವ್ಯವಸ್ಥೆಯ ಇನ್ನಿತರ ಮುಖ್ಯಸ್ಥರು ಹಾಗೂ ಶಾಲಾ ಮುಖ್ಯಸ್ಥರ ಸೂಕ್ತ ಸಾಮರ್ಥ್ಯ ಅಭಿವೃದ್ಧಿ ಮೂಲಕ ಇದಕ್ಕೆ ಬಲ ತುಂಬಬಹುದಾಗಿದೆ.

ಏಳನೆಯದಾಗಿ, 18,000ಕ್ಕೂ ಅಧಿಕ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ (ಟಿಇಐ)ಗಳಲ್ಲಿ ಶಿಕ್ಷಕರನ್ನು ಸಿದ್ಧಗೊಳಿಸುವ ವ್ಯವಸ್ಥೆಯಾದ ಬಿ.ಎಡ್.ನಲ್ಲಿ ತಾಂಡವವಾಡುತ್ತಿರುವ ಭ್ರಷ್ಟಾಚಾರ ಮತ್ತು ಅಕ್ರಮಗಳನ್ನು ನಿವಾರಿಸಬೇಕು. 'ಪದವಿಯನ್ನು ಮಾರುವ ಸಂಸ್ಥೆ'ಗಳಾಗಿರುವ ಟಿಇಐಗಳನ್ನು ಮುಚ್ಚಬೇಕು. ಶಿಕ್ಷಕರು ವಹಿಸುವ ಸಂಕೀರ್ಣ ಹಾಗೂ ಮುಖ್ಯ ಪಾತ್ರಕ್ಕೆ ಅನುಗುಣವಾಗಿ, ಸೂಕ್ತ ಪಠ್ಯಕ್ರಮವನ್ನು ರೂಪಿಸಬೇಕು. ಎಲ್ಲ ಟಿಇಐಗಳು ಉತ್ತಮ ಗುಣಮಟ್ಟದ ಬೋಧನೆ–ಕಲಿಕೆಯನ್ನು ಹೊಂದಿರಬೇಕು.

ಎಂಟನೆಯದಾಗಿ, ಬಹಳ ಮುಖ್ಯವಾಗಿ, ಶಾಲೆಗಳೂ ಸೇರಿದಂತೆ ಶಿಕ್ಷಣ ವ್ಯವಸ್ಥೆಯ ಸಂಸ್ಕೃತಿಯು ವಿಶ್ವಾಸವನ್ನು ಆಧರಿಸಿರಬೇಕು. ಇಂಥ ಸಂಸ್ಕೃತಿ ಶಿಕ್ಷಕರನ್ನು ಸಬಲರನ್ನಾಗಿಸಬೇಕು. ಅವರ ಮಾತಿಗೆ ಬೆಲೆಯಿರಬೇಕು. ಸೃಜನಶೀಲತೆ, ಮುಂದಾಳ್ತನ ಹಾಗೂ ಪಠ್ಯಕ್ರಮದಲ್ಲಿ ಅನ್ವೇಷಕ ಪ್ರವೃತ್ತಿಯನ್ನು ಪೋಷಿಸಬೇಕು. ಶಿಕ್ಷಕರನ್ನು ಸರ್ಕಾರದ ಶ್ರೇಣೀಕರಣ ವ್ಯವಸ್ಥೆಯ ಅತಿ ಕೆಳಗಿನ ಹಂತದ ಸಿಬ್ಬಂದಿಯಂತೆ ಕಾಣದೆ, ಮೌಲ್ಯಯುತ ವೃತ್ತಿಪರರಂತೆ ಪರಿಗಣಿಸಬೇಕು. ಶಿಕ್ಷಣ ವ್ಯವಸ್ಥೆಯ ಮುಂದಾಳುಗಳ ದಿನನಿತ್ಯದ ವರ್ತನೆಯಲ್ಲಿ ಇದು ಪ್ರತಿಫಲಿಸಬೇಕು.

ಇದು ಸಂಪೂರ್ಣವೂ ಸಮಗ್ರವೂ ಆದ ವಿಷಯಗಳ ಪಟ್ಟಿಯಲ್ಲ. ಆದರೆ, ಬಹಳ ಮುಖ್ಯವಾದ ಅಂಶಗಳನ್ನು ಒಳಗೊಂಡಿದೆ.

ನಮ್ಮ ಶಿಕ್ಷಣ ವ್ಯವಸ್ಥೆಯನ್ನು ಆಮೂಲಾಗ್ರವಾಗಿ ಪರಿವರ್ತಿಸುವುದು ನಮ್ಮ ಉದ್ದೇಶವಾಗಿದ್ದರೆ, ನಾವು ಶಿಕ್ಷಕರಲ್ಲಿನ ಮಾನವ ಧನಾತ್ಮಕತೆಯನ್ನು ಗರಿಷ್ಠ ಪ್ರಮಾಣದಲ್ಲಿ ಸಜೀವಗೊಳಿಸಬೇಕು. ಆಗ ನಾವು ಬೇರೆಯದೇ ಒಂದು ದೇಶವಾಗಲಿದ್ದೇವೆ. ಈ ಕೃತಿ ಅಂಥ ದೇಶ ಹೇಗೆ ಇರಬಹುದು ಎಂಬುದರ ಒಂದು ಸುಂದರ ಮುನ್ನೋಟ.

**ಅನುರಾಗ್ ಬೆಹಾರ್**

ಮುಖ್ಯ ನಿರ್ವಹಣಾಧಿಕಾರಿ

ಅಜೀಂ ಪ್ರೇಮ್‌ಜಿ ಫೌಂಡೇಷನ್

# ಸಂಕ್ಷೇಪಾಕ್ಷರ ಪದಸೂಚಿ

**ಬಿಇಒ** : ಬ್ಲಾಕ್ ಎಜುಕೇಷನ್ ಆಫೀಸರ್, ಕ್ಷೇತ್ರ ಶಿಕ್ಷಣಾಧಿಕಾರಿ

**ಬಿಆರ್‌ಸಿ** : ಬ್ಲಾಕ್ ರಿಸೋರ್ಸ್ ಸೆಂಟರ್, ಕ್ಷೇತ್ರ ಸಂಪನ್ಮೂಲ ಕೇಂದ್ರ/ಕ್ಷೇತ್ರ ಸಂಪನ್ಮೂಲ ಕೇಂದ್ರದ ಸಂಯೋಜಕ

**ಬಿಆರ್‌ಸಿಎಫ್** : ಬ್ಲಾಕ್ ರಿಸೋರ್ಸ್ ಸೆಂಟರ್ ಫೆಸಿಲಿಟೇಟರ್, ಕ್ಷೇತ್ರ ಸಂಪನ್ಮೂಲ ಕೇಂದ್ರದ ಸುಗಮಗಾರ

**ಬಿಆರ್‌ಪಿ** : ಬ್ಲಾಕ್ ರಿಸೋರ್ಸ್ ಪರ್ಸನ್, ಕ್ಷೇತ್ರ ಸಂಪನ್ಮೂಲ ವ್ಯಕ್ತಿ

**ಬಿಎಸ್‌ಟಿಸಿ** : ಬೇಸಿಕ್ ಸ್ಕೂಲ್ ಟ್ರೈನಿಂಗ್ ಸರ್ಟಿಫಿಕೇಟ್, ಮೂಲ ಶಾಲಾ ತರಬೇತಿ ಪ್ರಮಾಣಪತ್ರ

**ಬಿಟಿಸಿ** : ಬೇಸಿಕ್ ಟೀಚಿಂಗ್ ಸರ್ಟಿಫಿಕೇಟ್, ಮೂಲ ಬೋಧನಾ ಪ್ರಮಾಣಪತ್ರ

**ಸಿಬಿಎಸ್‌ಸಿ** : ಸೆಂಟ್ರಲ್ ಬೋರ್ಡ್ ಫಾರ್ ಸೆಕೆಂಡರಿ ಎಜುಕೇಷನ್, ಕೇಂದ್ರೀಯ ಪ್ರೌಢ ಶಿಕ್ಷಣ ಮಂಡಳಿ

**ಸಿಸಿಇ** : ಕಂಟಿನ್ಯುಯಸ್ ಆಂಡ್ ಕಾಂಪ್ರೆಹೆನ್ಸಿವ್ ಇವ್ಯಾಲ್ಯುಯೇಷನ್, ನಿರಂತರ ಮತ್ತು ಸಮಗ್ರ ಮೌಲ್ಯಮಾಪನ

**ಸಿಆರ್‌ಸಿ** : ಕ್ಲಸ್ಟರ್ ರಿಸೋರ್ಸ್ ಸೆಂಟರ್, ಸಮೂಹ ಸಂಪನ್ಮೂಲ ಕೇಂದ್ರ

**ಸಿಆರ್‌ಪಿ** : ಕ್ಲಸ್ಟರ್ ರಿಸೋರ್ಸ್ ಪರ್ಸನ್, ಸಮೂಹ ಸಂಪನ್ಮೂಲ ವ್ಯಕ್ತಿ

**ಸಿಆರ್‌ಸಿಎಫ್** : ಕ್ಲಸ್ಟರ್ ರಿಸೋರ್ಸ್ ಸೆಂಟರ್ ಫೆಸಿಲಿಟೇಟರ್, ಸಮೂಹ ಸಂಪನ್ಮೂಲ ಕೇಂದ್ರದ ಸುಗಮಗಾರ

**ಡಿಡಿಪಿಐ** : ಡೆಪ್ಯುಟಿ ಡೈರೆಕ್ಟರ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್, ಸಾರ್ವಜನಿಕ ಶಿಕ್ಷಣ ಇಲಾಖೆ ಉಪ ನಿರ್ದೇಶಕ

**ಡಿಇಒ** : ಡಿಸ್ಟ್ರಿಕ್ಟ್ ಎಜುಕೇಷನ್ ಆಫೀಸರ್, ಜಿಲ್ಲಾ ಶಿಕ್ಷಣಾಧಿಕಾರಿ

**ಡಿಐಇಟಿ** : ಡಿಸ್ಟ್ರಿಕ್ಟ್ ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನ್ ಆಂಡ್ ಟ್ರೈನಿಂಗ್, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ

**ಡಿಪಿಇಪಿ** : ಡಿಸ್ಟ್ರಿಕ್ಟ್ ಪ್ರೈಮರಿ ಎಜುಕೇಷನ್ ಪ್ರೋಗ್ರಾಂ, ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ

**ಡಿಎಸ್‌ಇಆರ್‌ಟಿ** : ಡಿಪಾರ್ಟ್‌ಮೆಂಟ್ ಆಫ್ ಸ್ಟೇಟ್ ಎಜುಕೇಷನಲ್ ರಿಸರ್ಚ್ ಆಂಡ್ ಟ್ರೈನಿಂಗ್, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ

**ಇಸಿಸಿಇ** : ಅರ್ಲಿ ಚೈಲ್ಡ್‌ಹುಡ್ ಕೇರ್ ಆಂಡ್ ಎಜುಕೇಷನ್, ಆರಂಭಿಕ ಬಾಲ್ಯಾವಸ್ಥೆಯ ಆರೈಕೆ ಮತ್ತು ಶಿಕ್ಷಣ

**ಕೆಎಸ್‌ಕ್ಯುಎಎಸಿ** : ಕರ್ನಾಟಕ ಸ್ಕೂಲ್ ಕ್ವಾಲಿಟಿ ಅಸೆಸ್‌ಮೆಂಟ್ ಆಂಡ್ ಅಕ್ರೆಡಿಟೇಷನ್ ಕೌನ್ಸಿಲ್, ಕರ್ನಾಟಕ ಶಾಲಾ ಗುಣಮಟ್ಟ ಮೌಲ್ಯಮಾಪನ ಮತ್ತು ಮಾನ್ಯತಾ ಪರಿಷತ್ತು

**ಎಲ್‌ಜಿಪಿ** : ಲರ್ನಿಂಗ್ ಗ್ಯಾರಂಟಿ ಪ್ರೋಗ್ರಾಂ, ಕಲಿಕಾ ಖಾತ್ರಿ ಕಾರ್ಯಕ್ರಮ

**ಎಲ್‌ಆರ್‌ಸಿ** : ಲರ್ನಿಂಗ್ ರಿಸೋರ್ಸ್ ಸೆಂಟರ್, ಕಲಿಕಾ ಸಂಪನ್ಮೂಲ ಕೇಂದ್ರ

**ಎಂಇಒ** : ಮಂಡಲ್ ಎಜುಕೇಷನ್ ಆಫೀಸರ್, ಮಂಡಲ ಶಿಕ್ಷಣಾಧಿಕಾರಿ

**ಎಂಎಚ್‌ಆರ್‌ಡಿ** : ಮಿನಿಸ್ಟ್ರಿ ಆಫ್ ಹ್ಯೂಮನ್ ರಿಸೋರ್ಸ್ ಡೆವಲಪ್‌ಮೆಂಟ್, ಮಾನವ ಸಂಪನ್ಮೂಲ ಅಭಿವೃದ್ಧಿ ಮಂತ್ರಾಲಯ

**ಎಂಎಲ್‌ಎ** : ಮೆಂಬರ್ ಆಫ್ ಲೆಜಿಸ್ಲೇಟಿವ್ ಅಸೆಂಬ್ಲಿ, ವಿಧಾನಸಭೆ ಸದಸ್ಯ

**ಎಂಪಿ** : ಮೆಂಬರ್ ಆಫ್ ಪಾರ್ಲಿಮೆಂಟ್, ಸಂಸತ್ ಸದಸ್ಯ

**ಎಂಆರ್‌ಪಿ** : ಮಂಡಲ್ ರಿಸೋರ್ಸ್ ಪರ್ಸನ್, ಮಂಡಲ ಸಂಪನ್ಮೂಲ ವ್ಯಕ್ತಿ

**ಎನ್‌ಸಿಇಆರ್‌ಟಿ** : ನ್ಯಾಷನಲ್ ಕೌನ್ಸಿಲ್ ಫಾರ್ ಎಜುಕೇಷನಲ್ ರಿಸರ್ಚ್ ಆಂಡ್ ಟ್ರೈನಿಂಗ್, ರಾಷ್ಟ್ರೀಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಮಂಡಲಿ

**ಎನ್‌ಸಿಎಫ್** : ನ್ಯಾಷನಲ್ ಕರಿಕ್ಯುಲಂ ಫ್ರೇಮ್‌ವರ್ಕ್, ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು

**ಒಬಿಸಿ** : ಅದರ್ ಬ್ಯಾಕ್‌ವರ್ಡ್ ಕ್ಲಾಸಸ್, ಇನ್ನಿತರ ಹಿಂದುಳಿದ ವರ್ಗಗಳು

**ಪಿಆರ್‌ಐ** : ಪಂಚಾಯತ್ ರಾಜ್ ಇನ್‌ಸ್ಟಿಟ್ಯೂಷನ್ಸ್, ಪಂಚಾಯತಿ ರಾಜ್ ಸಂಸ್ಥೆಗಳು

**ಪಿಎಸ್** : ಪ್ರೈಮರಿ ಸ್ಕೂಲ್, ಪ್ರಾಥಮಿಕ ಶಾಲೆ

**ಪಿಟಿಎ** : ಪೇರೆಂಟ್ ಟೀಚರ್ ಅಸೋಸಿಯೇಷನ್, ಪೋಷಕರು–ಶಿಕ್ಷಕರ ಸಂಘ

**ಪಿಟಿಆರ್** : ಪ್ಯೂಪಿಲ್ ಟೀಚರ್ ರೇಷಿಯೋ, ವಿದ್ಯಾರ್ಥಿ–ಶಿಕ್ಷಕರ ಅನುಪಾತ

**ಪಿಯುಸಿ** : ಪ್ರಿಯೂನಿವರ್ಸಿಟಿ ಕೋರ್ಸ್, ಪದವಿಪೂರ್ವ ಕೋರ್ಸ್

**ಆರ್‌ಇಇಟಿ** : ರಾಜಸ್ಥಾನ್ ಎಲಿಜಿಬಿಲಿಟಿ ಎಕ್ಸಾಮಿನೇಷನ್ ಫಾರ್ ಟೀಚರ್ಸ್(ಈ ಹಿಂದೆ ಆರ್‌ಟಿಇಟಿ), ರಾಜಸ್ಥಾನ್ ಶಿಕ್ಷಕರ ಅರ್ಹತಾ ಪರೀಕ್ಷೆ

**ಆರ್‌ಟಿಇ** : ರೈಟ್ ಟು ಎಜುಕೇಷನ್, ಶಿಕ್ಷಣದ ಹಕ್ಕು

**ಎಸ್‌ಸಿ** : ಶೆಡ್ಯೂಲ್ಡ್ ಕಾಸ್ಟ್, ಪರಿಶಿಷ್ಟ ಜಾತಿ

**ಎಸ್‌ಸಿಇಆರ್‌ಟಿ** : ಸ್ಟೇಟ್ ಕೌನ್ಸಿಲ್ ಫಾರ್ ಎಜುಕೇಷನಲ್ ರಿಸರ್ಚ್ ಆಂಡ್ ಟ್ರೈನಿಂಗ್, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಪರಿಷತ್ತು

**ಎಸ್‌ಡಿಸಿ** : ಸ್ಕೂಲ್ ಡೆವಲಪ್‌ಮೆಂಟ್ ಕಮಿಟಿ, ಶಾಲಾಭಿವೃದ್ಧಿ ಸಮಿತಿ

**ಎಸ್‌ಡಿಎಂಸಿ** : ಸ್ಕೂಲ್ ಡೆವಲಪ್‌ಮೆಂಟ್ ಆಂಡ್ ಮಾನಿಟರಿಂಗ್ ಕಮಿಟಿ, ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ

**ಎಸ್‌ಡಿಪಿ** : ಸ್ಟೇಟ್ ಡೊಮೆಸ್ಟಿಕ್ ಪ್ರಾಡಕ್ಟ್, ಒಟ್ಟು ರಾಜ್ಯ ಉತ್ಪನ್ನ

**ಎಸ್‌ಇಸಿ** : ಸ್ಕೂಲ್ ಎಜುಕೇಷನ್ ಕಮಿಟಿ, ಶಾಲಾ ಶಿಕ್ಷಣ ಸಮಿತಿ

**ಎಸ್‌ಜಿಟಿ** : ಸೆಕೆಂಡರಿ ಗ್ರೇಡ್ ಟೀಚರ್, ಪ್ರೌಢಶಾಲಾ ಹಂತದ ಶಿಕ್ಷಕ

**ಎಸ್‌ಐಡಿಎ** : ಸ್ವೀಡಿಷ್ ಇಂಟರ್‌ನ್ಯಾಷನಲ್ ಡೆವಲಪ್‌ಮೆಂಟ್ ಏಜೆನ್ಸಿ, ಸ್ವೀಡಿಷ್ ಅಂತಾರಾಷ್ಟ್ರೀಯ ಅಭಿವೃದ್ಧಿ ಏಜೆನ್ಸಿ

**ಎಸ್‌ಐಇಆರ್‌ಟಿ** : ಸ್ಟೇಟ್ ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನಲ್ ರಿಸರ್ಚ್ ಆಂಡ್ ಟ್ರೈನಿಂಗ್, ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಸಂಸ್ಥೆ

**ಎಸ್‌ಐಐಡಿಯುಸಿಎಲ್** : ಸ್ಟೇಟ್ ಇನ್‌ಫ್ರಾಸ್ಟ್ರಕ್ಚರ್ ಆಂಡ್ ಇಂಡಸ್ಟ್ರಿಯಲ್ ಡೆವಲಪ್‌ಮೆಂಟ್ ಕಾರ್ಪೊರೇಷನ್ ಆಫ್ ಉತ್ತರಾಖಂಡ್ ಎಂಟರ್‌ಪ್ರೈಸ್, ಉತ್ತರಾಖಂಡ್ ರಾಜ್ಯ ಮೂಲಸೌಕರ್ಯ ಮತ್ತು ಕೈಗಾರಿಕಾಭಿವೃದ್ಧಿ ಮಂಡಳಿ

**ಎಸ್‌ಎಲ್‌ಡಿಪಿ** : ಸ್ಕೂಲ್ ಲೀಡರ್‌ಶಿಪ್ ಡೆವಲಪ್‌ಮೆಂಟ್ ಪ್ರೋಗ್ರಾಂ, ಶಾಲಾ ನಾಯಕತ್ವ ಅಭಿವೃದ್ಧಿ ಕಾರ್ಯಕ್ರಮ

**ಎಸ್‌ಎಂಸಿ** : ಸ್ಕೂಲ್ ಮ್ಯಾನೇಜ್‌ಮೆಂಟ್ ಕಮಿಟಿ, ಶಾಲಾ ನಿರ್ವಹಣೆ ಸಮಿತಿ

**ಎಸ್‌ಎಸ್‌ಎ** : ಸರ್ವ ಶಿಕ್ಷಾ ಅಭಿಯಾನ್, ಸರ್ವ ಶಿಕ್ಷಣ ಅಭಿಯಾನ

**ಎಸ್‌ಎಸ್‌ಎಲ್‌ಸಿ** : ಸೆಕೆಂಡರಿ ಸ್ಕೂಲ್ ಲೀವಿಂಗ್ ಸರ್ಟಿಫಿಕೇಟ್

**ಎಸ್‌ಟಿ** : ಶೆಡ್ಯೂಲ್ಡ್ ಟ್ರೈಬ್ಸ್, ಪರಿಶಿಷ್ಟ ವರ್ಗಗಳು

**ಟಿಸಿಎಚ್** : ಟೀಚರ್ ಸರ್ಟಿಫಿಕೇಟ್ ಹೈಯರ್, ಶಿಕ್ಷಕ ಉನ್ನತ ಪ್ರಮಾಣಪತ್ರ

**ಟಿಇಟಿ** : ಟೀಚರ್ ಎಲಿಜಬಿಲಿಟಿ ಟೆಸ್ಟ್, ಶಿಕ್ಷಕರ ಅರ್ಹತಾ ಪರೀಕ್ಷೆ

**ಟಿಎಲ್‌ಸಿ** : ಟೀಚರ್ಸ್ ಲರ್ನಿಂಗ್ ಸೆಂಟರ್, ಶಿಕ್ಷಕರ ಕಲಿಕಾ ಕೇಂದ್ರ

**ಟಿಎಲ್‌ಎಂ** : ಟೀಚಿಂಗ್ ಲರ್ನಿಂಗ್ ಮಟೀರಿಯಲ್, ಬೋಧನೆ–ಕಲಿಕಾ ಸಾಮಗ್ರಿಗಳು

**ಟಿಪಿಆರ್** : ಟೀಚರ್ ಪ್ಯೂಪಿಲ್ ರೇಷಿಯೋ, ಶಿಕ್ಷಕ–ವಿದ್ಯಾರ್ಥಿ ಅನುಪಾತ

**ಯುಪಿಎಸ್** : ಅಪ್ಪರ್ ಪ್ರೈಮರಿ ಸ್ಕೂಲ್, ಹಿರಿಯ ಪ್ರಾಥಮಿಕ ಶಾಲೆ

**ವಿಟಿಎಫ್** : ವಾಲಂಟರಿ ಟೀಚರ್ಸ್ ಫೋರಂ, ಸ್ವಯಂಪ್ರೇರಿತ ಶಿಕ್ಷಕರ ವೇದಿಕೆ

# ಪದವಿವರಣ ಸೂಚಿ

ಅ

**ಅಂಗನವಾಡಿ :** ಎಂದರೆ, 'ಅಂಗಳದಲ್ಲಿನ ಆಶ್ರಯ'. ಭಾರತ ಸರ್ಕಾರದ ಮಕ್ಕಳು ಹಾಗೂ ಮಹಿಳೆಯರ ಕಲ್ಯಾಣ ಅಭಿವೃದ್ಧಿ ಮಂತ್ರಾಲಯ 1975ರಲ್ಲಿ ಗ್ರಾಮೀಣ ಪ್ರದೇಶದಲ್ಲಿ ಆರಂಭಿಸಿದ ಸಮಗ್ರ ಮಕ್ಕಳ ಅಭಿವೃದ್ಧಿ ಕಾರ್ಯಕ್ರಮದ ಒಂದು ಭಾಗ. ಮೂರರಿಂದ ಆರು ವರ್ಷದ ಮಕ್ಕಳಲ್ಲಿ ಹಸಿವು ಹಾಗೂ ಪೌಷ್ಟಿಕಾಂಶ ಕೊರತೆ ನೀಗಿಸಲು ಪೂರಕ ಪೋಷಕಾಂಶಗಳನ್ನು ನೀಡುವುದು ಕಾರ್ಯಕ್ರಮದ ಉದ್ದೇಶ. ಶಾಲಾ ಪೂರ್ವ ಚಟುವಟಿಕೆ ಹಾಗೂ ಔಪಚಾರಿಕೇತರ ಶಾಲಾಪೂರ್ವ ಶಿಕ್ಷಣವನ್ನೂ ಇಲ್ಲಿ ಕೊಡಲಾಗುತ್ತದೆ.

ಆ

**ಆದರ್ಶ ವಿದ್ಯಾಲಯ (ಕೆಲವು ರಾಜ್ಯಗಳಲ್ಲಿ ಮಾದರಿ ಶಾಲೆ ಅಥವಾ ಉತ್ಕೃಷ್ಟ ವಿದ್ಯಾಲಯ ಎನ್ನಲಾಗುತ್ತದೆ):** ಕೆಲವು ರಾಜ್ಯಗಳಲ್ಲಿ ವಿದ್ಯಾರ್ಥಿಗಳಿಗೆ ಉನ್ನತ ಗುಣಮಟ್ಟದ ಶಿಕ್ಷಣವನ್ನು ನೀಡಲು ಸರ್ಕಾರ ಆರಂಭಿಸಿರುವ ಮಾದರಿ ಶಾಲೆಗಳು.

ಉ

**ಉತ್ಕೃಷ್ಟ ವಿದ್ಯಾಲಯ :** ಆದರ್ಶ ವಿದ್ಯಾಲಯ ನೋಡಿ.

ಕ

**ಕರ್ನಾಟಕ ರಾಜ್ಯ ಗುಣಮಟ್ಟ ಮೌಲ್ಯಮಾಪನ ಹಾಗೂ ಮಾನ್ಯತಾ ಪರಿಷತ್ತು (ಕೆಎಸ್‌ಕ್ಯುಎಸಿಸಿ):** ಕರ್ನಾಟಕ ಸರ್ಕಾರದ ಶಾಲಾ ಶಿಕ್ಷಣ ಇಲಾಖೆಯಡಿ ಇರುವ ಈ ಮಂಡಳಿಗೆ ಶಿಕ್ಷಣದ ಗುಣಮಟ್ಟದ ಮೌಲ್ಯಮಾಪನ ಹಾಗೂ ಮಾನ್ಯತೆ ನೀಡುವ ಜವಾಬ್ದಾರಿಯನ್ನು ವಹಿಸಲಾಗಿದೆ. ಈ ಮೊದಲು 2006ರಲ್ಲಿ ರಚನೆಯಾಗಿದ್ದ ಕರ್ನಾಟಕ ಶಾಲೆಗಳ ಗುಣಮಟ್ಟ ಮೌಲ್ಯಮಾಪನ ಸಂಘಟನೆ(ಕೆಎಸ್‌ಕ್ಯುಎಓ), ಇದೇ ಕೆಲಸ ನಿರ್ವಹಿಸುತ್ತಿತ್ತು.

**ಕಸ್ತೂರಬಾ ಗಾಂಧಿ ಬಾಲಿಕಾ ವಿದ್ಯಾಲಯ (ಕೆಜಿಬಿವಿ):** ದೇಶದ ದುರ್ಬಲ ವರ್ಗದವರಿಗಾಗಿ ಸರ್ಕಾರ ನಡೆಸಿಕೊಡುತ್ತಿರುವ ಹೆಣ್ಣುಮಕ್ಕಳ ಸೆಕೆಂಡರಿ ವಸತಿ ಶಾಲೆ. ಭಾರತ ಸರ್ಕಾರ ಆಗಸ್ಟ್ 2004ರಲ್ಲಿ ಪರಿಚಯಿಸಿದ ಈ ಯೋಜನೆಯನ್ನು ಸರ್ವ ಶಿಕ್ಷಾ ಅಭಿಯಾನದೊಡನೆ ಸಂಯೋಜಿಸಲಾಯಿತು. ಶೈಕ್ಷಣಿಕವಾಗಿ ಹಿಂದುಳಿದ ವಲಯಗಳ ಪರಿಶಿಷ್ಟ ಜಾತಿ/ವರ್ಗಗಳು, ಇತರ ಹಿಂದುಳಿದ ವರ್ಗಗಳು, ಅಲ್ಪಸಂಖ್ಯಾತ ಸಮುದಾಯಗಳು ಮತ್ತು ಬಡತನ ರೇಖೆಯಿಂದ ಕೆಳಗಿರುವ ಕುಟುಂಬಗಳ ಹೆಣ್ಣು ಮಕ್ಕಳಿಗೆ ಶೈಕ್ಷಣಿಕ ಸೌಲಭ್ಯ ಕಲ್ಪಿಸುವುದು ಇದರ ಉದ್ದೇಶ.

**ಕಲಿಕೋತ್ಸವ :** ಎಂದರೆ, ಕಲಿಕೆಯ ಮೇಳ. ಕರ್ನಾಟಕ ಸರ್ಕಾರದ ಈ ಉಪಕ್ರಮವು ಪ್ರಾಥಮಿಕ ಶಾಲೆಗಳ ಮಕ್ಕಳ ಭಾಷೆ, ಗಣಿತ, ವಿಜ್ಞಾನ ವಿಷಯದಲ್ಲಿ ವಿಶೇಷ ಕಲಿಕೆಯನ್ನು ಗುರುತಿಸಲು ಹಾಗೂ ಸಮುದಾಯದ ಮುಂದೆ ಪ್ರದರ್ಶಿಸುವ ಮೂಲಕ ಅವರಲ್ಲಿ ಸಕಾರಾತ್ಮಕ ಪ್ರತಿಕ್ರಿಯೆಯನ್ನು ಮೂಡಿಸುವ ಉದ್ದೇಶ ಹೊಂದಿದೆ. ವಲಯ ಮಟ್ಟದಲ್ಲಿ ಜಯಶಾಲಿಗಳಾದವರಿಗೆ ಪ್ರಶಸ್ತಿ ಹಾಗೂ ಪ್ರಮಾಣಪತ್ರ ನೀಡಲಾಗುತ್ತದೆ. ಪಾಲ್ಗೊಂಡ ಎಲ್ಲರಿಗೂ ಪ್ರಮಾಣಪತ್ರ ನೀಡಲಾಗುತ್ತದೆ.

**ಕಲಿಕಾ ಖಾತ್ರಿ ಕಾರ್ಯಕ್ರಮ (ಎಲ್‌ಜಿಪಿ) :** 2003 ಮತ್ತು 2008ರ ಅವಧಿಯಲ್ಲಿ ಅನುಷ್ಠಾನಗೊಂಡ, ಕರ್ನಾಟಕ, ಮಧ್ಯಪ್ರದೇಶ, ಗುಜರಾತ್, ಉತ್ತರಾಖಂಡ್, ರಾಜಸ್ಥಾನ್ ಸರ್ಕಾರಗಳು ಹಾಗೂ ಅಜೀಂ ಪ್ರೇಮ್‌ಜಿ ಫೌಂಡೇಷನ್ ನಡುವಿನ ಜಂಟಿ ಉಪಕ್ರಮ. ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣ(ಯುಇಇ)ದ ಮೂರು ಮಾನಕಗಳಾದ ದಾಖಲಾತಿ, ಹಾಜರಿ ಮತ್ತು ಕಲಿಕೆಯನ್ನು ಆಧರಿಸಿ, ಪಾಲ್ಗೊಳ್ಳುವ ಶಾಲೆಗಳ ಗುಣಮಟ್ಟವನ್ನು ನಿರ್ಧರಿಸುವ ಸ್ವತಂತ್ರ ಮೌಲ್ಯಮಾಪನ ಕಾರ್ಯಕ್ರಮ. ಮಕ್ಕಳ ಕಲಿಕೆಯ ಮೌಲ್ಯಮಾಪನವನ್ನು ಬೇರೆಯದೇ ರೀತಿಯಲ್ಲಿ ಮಾಡುವುದು ಈ ಕಾರ್ಯಕ್ರಮದ ಮುಖ್ಯ ಉದ್ದೇಶ. ಕಂಠಪಾಠದ ಬದಲು ಪರಿಕಲ್ಪನೆಗಳನ್ನು ಎಷ್ಟು ಅರ್ಥಮಾಡಿ ಕೊಳ್ಳಲಾಗಿದೆ ಎನ್ನುವುದರ ಪರೀಕ್ಷೆ ಹಾಗೂ ಈ ಮಾನದಂಡಗಳನ್ನು ಪಾಲಿಸಿದ ಶಾಲೆಗಳನ್ನು ಗುರುತಿಸುವುದು ಇದರ ಉದ್ದೇಶ.

**ಕಲಿಕಾ ಸಂಪನ್ಮೂಲ ಕೇಂದ್ರ (ಲರ್ನಿಂಗ್ ರಿಸೋರ್ಸ್ ಸೆಂಟರ್, ಎಲ್‌ಆರ್‌ಸಿ):** ತನ್ನ ಕ್ಷೇತ್ರ ಸಂಸ್ಥೆಗಳು ಸ್ಥಾಪನೆಯಾಗಿರುವ ಜಿಲ್ಲೆಗಳಲ್ಲಿ ಅಜೀಂ ಪ್ರೇಮ್‌ಜಿ ಫೌಂಡೇಷನ್ ಆರಂಭಿಸಿರುವ ಕೇಂದ್ರಗಳು. ಶಿಕ್ಷಕರು ಹೆಚ್ಚು ಸಂಖ್ಯೆಯಲ್ಲಿ ನೆಲೆಸಿರುವ ಪಟ್ಟಣಗಳಲ್ಲಿ ಇವನ್ನು ಸ್ಥಾಪಿಸಿ, ಒಂದೆಡೆ ಸೇರಲು, ಶೈಕ್ಷಣಿಕ ವಿಷಯಗಳನ್ನು ಚರ್ಚಿಸಲು ಹಾಗೂ ಬೋಧನಾ ಸಾಮಗ್ರಿಗಳು ಸುಲಭವಾಗಿ ಸಿಗುವಂತೆ ಮಾಡುವ ವೇದಿಕೆ ಇದಾಗಿದೆ. ಶಿಕ್ಷಣದ ಎಲ್ಲ ಹಂತಗಳಲ್ಲೂ ಶೈಕ್ಷಣಿಕ ಅಭಿವೃದ್ಧಿಯ ಗುಣಮಟ್ಟವನ್ನು ಉತ್ತಮಗೊಳಿಸುವ ಉದ್ದೇಶದಿಂದ ಆರಂಭಿಸಿದ ಈ ಕೇಂದ್ರಗಳನ್ನು ರಾಜಸ್ಥಾನದಲ್ಲಿ ಎಲ್‌ಆರ್‌ಸಿ ಹಾಗೂ ಇನ್ನುಳಿದ ರಾಜ್ಯಗಳಲ್ಲಿ ಶಿಕ್ಷಕ ಕಲಿಕಾ ಕೇಂದ್ರ(ಟಿಎಲ್‌ಸಿ) ಎಂದು ಕರೆಯಲಾಗುತ್ತದೆ.

**ಕೇಳಿ–ಕಲಿ:** ಕರ್ನಾಟಕ ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆಯ ಶೈಕ್ಷಣಿಕ ವಿಭಾಗವಾದ ಡಿಎಸ್‌ಆರ್‌ಇಟಿ ವಿನ್ಯಾಸಗೊಳಿಸಿ, ನಡೆಸಿಕೊಟ್ಟ ರೇಡಿಯೋ ಕಾರ್ಯಕ್ರಮ. ಆಕಾಶವಾಣಿಯ 13 ಬಾನುಲಿ ಕೇಂದ್ರಗಳ ಮೂಲಕ ಒಂದರಿಂದ 8ನೇ ತರಗತಿ ವಿದ್ಯಾರ್ಥಿಗಳಿಗಾಗಿ ಸೋಮವಾರದಿಂದ ಶುಕ್ರವಾರದವರೆಗೆ ಪ್ರಸಾರಗೊಳ್ಳುತ್ತಿದ್ದ ಕಾರ್ಯಕ್ರಮ. ಹೊಸ ಶೈಕ್ಷಣಿಕ ವರ್ಷದ ಆರಂಭದಲ್ಲೇ

ಎಲ್ಲ ಶಾಲೆಗಳು, ಶಿಕ್ಷಕರು/ವಿಷಯ ಶಿಕ್ಷಕರಿಗೆ ಯಾವ ವಿಷಯ, ಎಂದು ಪ್ರಸಾರವಾಗಲಿದೆ ಎನ್ನುವ ಮಾಹಿತಿ ನೀಡಲಾಗುತ್ತಿತ್ತು.

**ಕ್ಷೇತ್ರ ಸಂಪನ್ಮೂಲ ಕೇಂದ್ರ (ಬಿಆರ್‌ಸಿ) :** ಸರ್ವ ಶಿಕ್ಷಾ ಅಭಿಯಾನದಡಿ ದೇಶದ ಪ್ರತಿ ಜಿಲ್ಲೆಯ ಎಲ್ಲ ಬ್ಲಾಕ್‌ಗಳಲ್ಲಿ ಶಿಕ್ಷಕರಿಗೆ ತರಬೇತಿ, ಶಿಕ್ಷಕರು ಹಾಗೂ ಶಾಲೆಗಳಿಗೆ ನಿಯಮಿತವಾಗಿ ಶೈಕ್ಷಣಿಕ ಬೆಂಬಲ ಮತ್ತು ಸಮುದಾಯವನ್ನು ಸಂಘಟಿಸಿ ಚಟುವಟಿಕೆಗಳನ್ನು ಕೈಗೊಳ್ಳಲು ಆರಂಭಿಸಿದ ಕೇಂದ್ರಗಳು.

**ಕ್ಲಸ್ಟರ್ ರಿಸೋರ್ಸ್ ಸೆಂಟರ್ (ಸಿಆರ್‌ಸಿ) :** ಪ್ರತಿ ಬ್ಲಾಕ್‌ನಲ್ಲಿ ಸುಲಭವಾಗಿ ತಲುಪಬಹುದಾದಷ್ಟು ದೂರದಲ್ಲಿರುವ ಸಣ್ಣ ಸಂಖ್ಯೆಯ ಶಾಲೆಗಳ ಗುಂಪು. ಪ್ರತಿಯೊಂದು ಸಿಆರ್‌ಸಿಯಲ್ಲಿ ಸಮೂಹ ಸಂಪನ್ಮೂಲ ವ್ಯಕ್ತಿ/ ಸಮೂಹ ಸಂಪನ್ಮೂಲ ಕೇಂದ್ರದ ಸಂಯೋಜಕ ಇರಲಿದ್ದು, ಇವರು ಶಾಲೆಗಳು ಹಾಗೂ ಶಿಕ್ಷಕರಿಗೆ ನಿಯತವಾಗಿ ಶೈಕ್ಷಣಿಕ ಬೆಂಬಲ ನೀಡುತ್ತಾರೆ ಹಾಗೂ ಸಮುದಾಯದ ನೆರವಿನಿಂದ ಸಂಘಟನಾತ್ಮಕ ಚಟುವಟಿಕೆಗಳನ್ನು ಆರಂಭಿಸಲು ನೆರವಾಗುತ್ತಾರೆ.

## ಗ

**ಗರಾಸಿಯಾ :** ರಾಜಸ್ಥಾನ ಹಾಗೂ ಗುಜರಾತಿನಲ್ಲಿ ವಾಸಿಸುವ ಸಾಮಾನ್ಯ ಇಲ್ಲವೇ ಮುಕ್ತ ವಿಧದ ಆಡಳಿತ ನಡೆಸುವ ಮೂಲವಾಸಿಗಳು. ಗರಾಸಿಯಾಗಳ ಆವಾಸಸ್ಥಾನಗಳು ರಾಜಸ್ಥಾನದ ಪಾಲಿ, ಸಿರೋಹಿ, ಉದಯಪುರ ಮತ್ತು ಡೂಂಗರ್‌ಪುರದಲ್ಲಿ ಹಾಗೂ ಗುಜರಾತಿನ ಸಬರ್‌ಕಾಂತ ಮತ್ತು ಬನಸ್ಕಾಂತದಲ್ಲಿ ಕಂಡುಬರುತ್ತವೆ.

## ಜ

**ಜವಾಹರ್ ನವೋದಯ ವಿದ್ಯಾಲಯ (ಜೆಎನ್‌ವಿ) :** ರಾಷ್ಟ್ರೀಯ ಶಿಕ್ಷಣ ನೀತಿ 1986(ಎನ್‌ಇಪಿ 1986)ರ ಭಾಗವಾಗಿ ಗ್ರಾಮೀಣ ಪ್ರದೇಶದ ಪ್ರತಿಭಾವಂತ ಮಕ್ಕಳಿಗೆಂದು ಈ ಪರ್ಯಾಯ ವಸತಿ ಶಾಲೆ ವ್ಯವಸ್ಥೆಯನ್ನು ರೂಪಿಸಲಾಗಿದೆ. ಹೊಸದಿಲ್ಲಿಯ ಕೇಂದ್ರ ಸೆಕೆಂಡರಿ ಶಿಕ್ಷಣ ಮಂಡಳಿ(ಸಿಬಿಎಸ್‌ಸಿ)ಗೆ ಸಂಯೋಜಿತವಾಗಿರುವ ಪೂರ್ಣಾವಧಿಯ ವಸತಿ ಹಾಗೂ ಸಹ ಶಿಕ್ಷಣ ಶಾಲೆಗಳಾಗಿದ್ದು, ಆರರಿಂದ 12ನೇ ತರಗತಿವರೆಗೆ ಇರಲಿವೆ. ಈ ಯೋಜನೆಯಡಿ ದೇಶದ ಪ್ರತಿ ಜಿಲ್ಲೆಯಲ್ಲೂ ಒಂದು ಜೆಎನ್‌ವಿಯನ್ನು ತೆರೆಯಬಹುದು. ಸಿಬಿಎಸ್‌ಸಿ ರೂಪಿಸಿ, ಅಭಿವೃದ್ಧಿಪಡಿಸಿ ನಡೆಸಿಕೊಡುವ ಪ್ರವೇಶ ಪರೀಕ್ಷೆಯಲ್ಲಿನ ಸಾಧನೆಯನ್ನು ಆಧರಿಸಿ, ಜೆಎನ್‌ವಿಯ 6ನೇ ತರಗತಿಗೆ ಪ್ರವೇಶಾವಕಾಶ ಕಲ್ಪಿಸಿಕೊಡಲಾಗುತ್ತದೆ.

**ಜಿಲ್ಲಾ ಶಿಕ್ಷಣ ಹಾಗೂ ತರಬೇತಿ ಸಂಸ್ಥೆ (ಡಿಸ್ಟ್ರಿಕ್ಟ್ ಇನ್‌ಸ್ಟಿಟ್ಯೂಟ್ ಫಾರ್ ಎಜುಕೇಷನ್ ಆಂಡ್ ಟ್ರೈನಿಂಗ್, ಡಯಟ್) :** ಭಾರತ ಸರ್ಕಾರ ದೇಶದ ಎಲ್ಲ ಜಿಲ್ಲೆಗಳಲ್ಲಿ ಆಯಾ ಜಿಲ್ಲೆಯಲ್ಲಿರುವ ಶಿಕ್ಷಣ ಸಂಸ್ಥೆಗಳು ಹಾಗೂ ಶಾಲೆಗಳಿಗೆ ಮಾರ್ಗದರ್ಶನ ನೀಡಲು ಆರಂಭಿಸಿದ ಕೇಂದ್ರ. ಡಯಟ್‌ಗಳು ತಮ್ಮ

ಉದ್ದೇಶಕ್ಕೆ ಅನುಗುಣವಾಗಿ ಶಿಕ್ಷಕರಿಗೆ ಸೇವಾ–ಪೂರ್ವ ಶಿಕ್ಷಣದ ಡಿಪ್ಲೊಮಾ ಹಾಗೂ ಗ್ರಾಮೀಣ ಮಟ್ಟದಲ್ಲಿ ಶಿಕ್ಷಕರಿಗೆ ಶಾಲೆಯಲ್ಲೇ ತರಬೇತಿ ನೀಡಲು ಶೈಕ್ಷಣಿಕ ಹಾಗೂ ಸಂಪನ್ಮೂಲದ ಬೆಂಬಲ ನೀಡುತ್ತವೆ.

## ನ

**ನಲಿ–ಕಲಿ :** ಕರ್ನಾಟಕ ಸರ್ಕಾರ 2001ರಲ್ಲಿ ಮೈಸೂರು ಜಿಲ್ಲೆಯ ಎಚ್.ಡಿ.ಕೋಟೆ ತಾಲೂಕಿನಲ್ಲಿ ಆರಂಭಿಸಿದ ಯುನಿಸೆಫ್ ಪ್ರಾಯೋಜಿತ ಮೊದಲ ಪ್ರಾಯೋಗಿಕ ಯೋಜನೆ. ಇದರರ್ಥ– ಸಂತಸಭರಿತ ಕಲಿಕೆ. ರಿಷಿ ವ್ಯಾಲಿ ಶೈಕ್ಷಣಿಕ ಸಂಪನ್ಮೂಲ ಸಂಸ್ಥೆ(ರಿವರ್) ಅಭಿವೃದ್ಧಿಪಡಿಸಿದ ಬಹು ವರ್ಗದ ಬಹು ಹಂತದ (ಎಂಜಿಎಂಎಲ್) ಚಟುವಟಿಕೆ ಆಧರಿಸಿದ, ಪ್ರಾಥಮಿಕ ತರಗತಿಗಳಿಗೆ ಮೀಸಲಾದ ಕಲಿಕಾ ಕಾರ್ಯಕ್ರಮ. 2009ರ ಹೊತ್ತಿಗೆ ಕಾರ್ಯಕ್ರಮವನ್ನು ಸುಮಾರು 14,000 ಶಾಲೆಗಳಿಗೆ ವಿಸ್ತರಿಸಲಾಯಿತು ಮತ್ತು ರಾಜ್ಯ ಶಿಕ್ಷಣ ಇಲಾಖೆಯು ಕಾರ್ಯಕ್ರಮದಲ್ಲಿ ಗಮನಾರ್ಹ ಬದಲಾವಣೆಗಳನ್ನು ಪರಿಗಣಿಸುತ್ತಿದೆ.

**ನಿರಂತರ ಮತ್ತು ಸಮಗ್ರ ಮೌಲ್ಯಮಾಪನ (ಕಂಟಿನ್ಯುಯಸ್ ಆಂಡ್ ಕಾಂಪ್ರೆಹೆನ್ಸಿವ್ ಇವ್ಯಾಲ್ಯುಯೇಷನ್,** ಸಿಸಿಇ) : 2009ರ ಶಿಕ್ಷಣ ಹಕ್ಕುಗಳ ಕಾಯಿದೆ ಕಡ್ಡಾಯಗೊಳಿಸಿರುವ ಮೌಲ್ಯಮಾಪನ ಪ್ರಕ್ರಿಯೆ. ಇದರ ಮುಖ್ಯ ಉದ್ದೇಶವೆಂದರೆ, ಶಾಲೆಯಲ್ಲಿರುವ ಪ್ರತಿ ಮಗುವಿನ ಪ್ರತಿಯೊಂದು ಆಯಾಮವನ್ನು ಮೌಲ್ಯಮಾಪನ ಮಾಡುವ ಮೂಲಕ ಮಗುವಿನ ಮೇಲಿನ ಕೆಲಸದ ಭಾರವನ್ನು ಇಳಿಸುವುದು. ಶೈಕ್ಷಣಿಕ ವರ್ಷದ ಅಂತ್ಯದಲ್ಲಿ ಒಮ್ಮೆ ಪರೀಕ್ಷೆ ನಡೆಸುವ ಬದಲು ವರ್ಷವಿಡೀ ಸಣ್ಣ ಸಣ್ಣ ಪರೀಕ್ಷೆಗಳ ಮೂಲಕ ನಿರಂತರ ಮೌಲ್ಯಮಾಪನ ಮಾಡುವುದು ಇದರ ಉದ್ದೇಶ. ಈ ಪ್ರಕ್ರಿಯೆಯ ಭಾಗವಾಗಿ, ವಿದ್ಯಾರ್ಥಿಗಳಿಗೆ ಅಂಕಗಳ ಬದಲು ದರ್ಜೆ(ಗ್ರೇಡ್) ಕೊಡಲಾಗುತ್ತದೆ. ಶೈಕ್ಷಣಿಕ ಸಾಧನೆ ಜೊತೆಗೆ ಸರಣಿಯಲ್ಲಿ ಪಠ್ಯ ಹಾಗೂ ಪಠ್ಯೇತರ ಚಟುವಟಿಕೆ ನಡೆಸಿ, ಮೌಲ್ಯಮಾಪನ ಮಾಡಲಾಗುತ್ತದೆ.

**ನವೋದಯ ವಿದ್ಯಾಲಯ :** ಜವಾಹರ್ ನವೋದಯ ವಿದ್ಯಾಲಯ ನೋಡಿ.

## ಪ

**ಪರಿಹಾರ ಬೋಧನೆ ಕಾರ್ಯಕ್ರಮ (ರೆಮೆಡಿಯಲ್ ಟೀಚಿಂಗ್ ಪ್ರೋಗ್ರಾಂ) :** ಶಾಲೆಗೆ ಈವರೆಗೆ ದಾಖಲಾಗದ, ಶಾಲೆಯನ್ನು ತೊರೆದ ಅಥವಾ ಹೆಚ್ಚುವರಿ ಬೆಂಬಲದ ಅಗತ್ಯವಿರುವ ಮಕ್ಕಳಿಗೆ ಅಧಿಕ ಶೈಕ್ಷಣಿಕ ನೆರವು ನೀಡಲು ಮತ್ತು ಕಲಿಕೆಯ ವೇಗವನ್ನು ವರ್ಧಿಸಲು ಕರ್ನಾಟಕ ಸರ್ಕಾರ ಆರಂಭಿಸಿದ ಕಾರ್ಯಕ್ರಮ. ಬಳಿಕ ಇದಕ್ಕೆ ಆಕ್ಸಿಲರೇಟೆಡ್ ಲರ್ನಿಂಗ್ ಪ್ರೋಗ್ರಾಮ್– (ವೇಗವರ್ಧಿತ ಕಲಿಕಾ ಕಾರ್ಯಕ್ರಮ) ಎಂದು ಮರುನಾಮಕರಣ ಮಾಡಲಾಯಿತು. ಕಾರ್ಯಕ್ರಮವನ್ನು 'ಪರಿಹಾರ' ಬೋಧನೆ ಎಂದು ಕರೆದಲ್ಲಿ ಮಕ್ಕಳಿಗೆ

ಅನಪೇಕ್ಷಣೀಯ ಹಣೆಪಟ್ಟಿ ಕಟ್ಟಿದಂತಾಗುತ್ತದೆ ಎಂದು ಶಿಕ್ಷಣ ತಜ್ಞರು ಹೇಳಿದ್ದು ಇದಕ್ಕೆ ಕಾರಣ.

**ಪ್ರತಿಭಾ ಕಾರಂಜಿ :** ಕರ್ನಾಟಕ ರಾಜ್ಯ ಸರ್ಕಾರವು ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳಿಗೆ ಕ್ಲಸ್ಟರ್, ಬ್ಲಾಕ್, ಜಿಲ್ಲೆ ಹಾಗೂ ರಾಜ್ಯ ಮಟ್ಟದಲ್ಲಿ ನಡೆಸುವ ಸಾಂಸ್ಕೃತಿಕ ಮತ್ತು ಸಾಹಿತ್ಯಿಕ ಕಾರ್ಯಕ್ರಮ. ಮಕ್ಕಳು ಸ್ಪರ್ಧೆಗಳಲ್ಲಿ ಪಾಲ್ಗೊಳ್ಳಲು ಹಾಗೂ ತಮ್ಮ ಪ್ರತಿಭೆ ಪ್ರದರ್ಶಿಸಲು ವೇದಿಕೆ ಕಲ್ಪಿಸುತ್ತಿದೆ.

### ಬ

**ಬುಕ್ಸಾ :** ಉತ್ತರಾಖಂಡ್ ಹಾಗೂ ಉತ್ತರಪ್ರದೇಶ ರಾಜ್ಯಗಳಲ್ಲಿ ವಾಸಿಸುವ ಮೂಲವಾಸಿ ಜನರು. ಇವರಿಗೆ ಪರಿಶಿಷ್ಟ ವರ್ಗದ ಸ್ಥಾನಮಾನ ನೀಡಲಾಗಿದೆ.

### ಭ

**ಭಿಲ್ :** ಪಶ್ಚಿಮ ಭಾರತದಲ್ಲಿ ವಾಸಿಸುವ, ಇಂಡೋ–ಆರ್ಯನ್ ಭಾಷೆಗಳ ಉಪಭಾಷೆಯಾದ ಭಿಲ್ ಅನ್ನು ಮಾತನಾಡುವ ಬುಡಕಟ್ಟು ಜನಾಂಗ. 2013ರಲ್ಲಿ ಇದು ದೇಶದ ಅತ್ಯಂತ ದೊಡ್ಡ ಬುಡಕಟ್ಟು ಗುಂಪಾಗಿತ್ತು.

### ಮ

**ಮಾಡೆಲ್ ಸ್ಕೂಲ್ (ಮಾದರಿ ಶಾಲೆ) :** ಆದರ್ಶ ವಿದ್ಯಾಲಯ ನೋಡಿ.

**ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು :** ಆರರಿಂದ ಹತ್ತನೇ ತರಗತಿವರೆಗೆ ವಸತಿ ಸಹಿತ ಶಿಕ್ಷಣ ನೀಡಲು ಕರ್ನಾಟಕ ಸರ್ಕಾರ ಆರಂಭಿಸಿದ ಶಾಲೆಗಳು. ಅಲ್ಪಸಂಖ್ಯಾತ ಇಲಾಖೆಯಡಿ ಬರುವ ಈ ಶಾಲೆಗಳು ಅಲ್ಪಸಂಖ್ಯಾತರಿಗೆ ಶೇ.50ರಷ್ಟು ಮೀಸಲು ಹಾಗೂ ಜಿಲ್ಲಾ ಪಂಚಾಯತ್ ಅಡಿ ಬರುವ ಶಾಲೆಗಳು ಎಸ್‌ಸಿ/ ಎಸ್‌ಟಿ ವಿದ್ಯಾರ್ಥಿಗಳಿಗೆ ಮೀಸಲು ನೀಡುತ್ತವೆ. ಐದನೇ ತರಗತಿಯಲ್ಲಿ ತೇರ್ಗಡೆ ಹೊಂದಿದ ವಿದ್ಯಾರ್ಥಿಗಳು, ಆರನೇ ತರಗತಿಗೆ ಸೇರಲು ಪ್ರವೇಶ ಪರೀಕ್ಷೆ ಬರೆಯುವ ಅರ್ಹತೆ ಹೊಂದಿರುತ್ತಾರೆ. ಪ್ರವೇಶ ದೊರೆಯಲು ಕುಟುಂಬದ ಆದಾಯ ಕೂಡ ಒಂದು ಮಾನದಂಡ.

**ಮ್ಯಾಥ್ಸ್ ವಿಜಾರ್ಡ್ (ಗಣಿತಶಾಸ್ತ್ರ ಮಾಂತ್ರಿಕ) :** ಉತ್ತರಾಖಂಡ್ ಸರ್ಕಾರದ ಶಿಕ್ಷಣ ಇಲಾಖೆ ಗಣಿತದಲ್ಲಿ ಆಸಕ್ತಿ ಇರುವ ಐದನೇ ತರಗತಿಯ ಮಕ್ಕಳಿಗಾಗಿ ನಡೆಸುವ ಸ್ಪರ್ಧೆ. ಮಕ್ಕಳು ಕ್ಲಸ್ಟರ್‌ನಿಂದ ಬ್ಲಾಕ್, ಅನಂತರ ಜಿಲ್ಲಾ ಮಟ್ಟದ ಸ್ಪರ್ಧೆಗೆ ಆಯ್ಕೆಯಾಗುತ್ತಾರೆ. ಇಲಾಖೆ ಇದೇ ರೀತಿಯ 'Spelling Genius'ಸ್ಪರ್ಧೆಯನ್ನು ಇಂಗ್ಲಿಷ್‌ನಲ್ಲೂ ಆಯೋಜಿಸುತ್ತದೆ.

### ರ

**ರಾಜೀವ್ ಗಾಂಧಿ ಸ್ವರ್ಣ ಜಯಂತಿ ಪಾಠಶಾಲೆ :** ಪ್ರಾಥಮಿಕ ಶಾಲೆಗಳು ಇಲ್ಲದೆ ಇರುವ ವಸತಿ ಪ್ರದೇಶ/ಹಾಡಿಗಳಲ್ಲಿ ಶಾಲೆಗಳನ್ನು ಆರಂಭಿಸುವ ಉದ್ದೇಶದ ಈ ಯೋಜನೆಯಡಿ ಆಗಸ್ಟ್ 1999ರೊಳಗೆ 12,000 ಶಾಲೆಗಳನ್ನು ಆರಂಭಿಸಲಾಯಿತು. ಇದು ಮಧ್ಯಪ್ರದೇಶ ಸರ್ಕಾರದ ಶಿಕ್ಷಣ ಖಾತ್ರಿ ಯೋಜನೆಯಡಿ ಇದ್ದ ಶಿಕ್ಷಾಕರ್ಮಿ ಕಾರ್ಯಕ್ರಮದ ರೂಪಾಂತರ.

**ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಇಲಾಖೆ(ಡಿಪಾರ್ಟ್‌ಮೆಂಟ್ ಆಫ್ ಸ್ಟೇಟ್ ಎಜುಕೇಷನಲ್ ರಿಸರ್ಚ್ ಆಂಡ್ ಟ್ರೈನಿಂಗ್, ಡಿಎಸ್‌ಇಆರ್‌ಟಿ, ಎಸ್‌ಸಿಇಆರ್‌ಟಿ ಅಥವಾ ಎಸ್‌ಐಇಆರ್‌ಟಿ ಎಂದೂ ಕರೆಯುತ್ತಾರೆ) :** ಪ್ರಾಥಮಿಕ ಹಾಗೂ ಪ್ರೌಢ ಶಾಲಾ ಶಿಕ್ಷಣಕ್ಕೆ ಒಟ್ಟಾರೆ ಶೈಕ್ಷಣಿಕ ನಾಯಕತ್ವ ನೀಡಲು ಮತ್ತು ಶಿಕ್ಷಣದ ಗುಣಮಟ್ಟವನ್ನು ಉತ್ತಮಗೊಳಿಸಲು ರಾಜ್ಯ ಮಟ್ಟದಲ್ಲಿ ಸ್ಥಾಪಿಸಲಾಗಿದೆ.

**ರಾಷ್ಟ್ರೀಯ ಮಕ್ಕಳ ವಿಜ್ಞಾನ ಕಾಂಗ್ರೆಸ್ (ರಾಷ್ಟ್ರೀಯ ಬಾಲ ವಿಜ್ಞಾನ ಕಾಂಗ್ರೆಸ್) :** ಭಾರತ ಸರ್ಕಾರದ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ 1993ರಲ್ಲಿ ಆರಂಭಿಸಿದ ರಾಷ್ಟ್ರೀಯ ಮಟ್ಟದ ವಿಜ್ಞಾನ ಸಂವಹನ ಕಾರ್ಯಕ್ರಮ. ವೈಜ್ಞಾನಿಕ ವಿಧಾನಗಳ ಮೂಲಕ ಸ್ಥಳೀಯವಾಗಿ ಕಂಡುಬರುವ ಸಾಮಾಜಿಕ ಸಮಸ್ಯೆಗಳನ್ನು ತಮ್ಮ ಕ್ರಿಯಾಶೀಲತೆ ಹಾಗೂ ಸಾಮರ್ಥ್ಯವನ್ನು ಬಳಸಿ ಬಗೆಹರಿಸಲು 10–17 ವರ್ಷದ ಮಕ್ಕಳಿಗೆ ವೇದಿಕೆಯೊಂದನ್ನು ಒದಗಿಸುವುದು ಇದರ ಪ್ರಾಥಮಿಕ ಉದ್ದೇಶ.

**ರಾಷ್ಟ್ರೀಯ ಬಾಲ ವಿಜ್ಞಾನ ಕಾಂಗ್ರೆಸ್ :** ರಾಷ್ಟ್ರೀಯ ಮಕ್ಕಳ ವಿಜ್ಞಾನ ಕಾಂಗ್ರೆಸ್ ನೋಡಿ.

**ರಿಷಿ ವ್ಯಾಲಿ ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನಲ್ ರಿಸೋರ್ಸಸ್ (ರಿವರ್) :** ರಿಷಿ ವ್ಯಾಲಿ ಗ್ರಾಮೀಣ ಶಿಕ್ಷಣ ಕೇಂದ್ರದ ಶಿಕ್ಷಕರ ತರಬೇತಿ ಹಾಗೂ ಸಂಪನ್ಮೂಲ ಅಭಿವೃದ್ಧಿ ವಿಭಾಗ ವಿನ್ಯಾಸಗೊಳಿಸಿದ ಬಹು ವರ್ಗದ ಬಹು ಹಂತ(ಎಂಜಿಎಂಎಲ್)ದ ಕಾರ್ಯಕ್ರಮದ ಸಾರವೆಂದರೆ, ಇದು ಚಟುವಟಿಕೆ ಹಾಗೂ ಕ್ರಿಯೆಯನ್ನು ಆಧರಿಸಿದ ಬೋಧನಾ ಕ್ರಮ. ಕಲಿಕೆ–ಬೋಧನೆ ಪ್ರಕ್ರಿಯೆಯು ಸಂತಸಕರವಾಗಿದ್ದರೆ, ಮಕ್ಕಳು ತಮ್ಮದೇ ಆದ ವೇಗದಲ್ಲಿ ಕಲಿಯುತ್ತಾರೆ ಮತ್ತು ಕಲಿಕೆಯನ್ನು ತಾವೇ ನಿರ್ವಹಿಸುತ್ತಾರೆ ಎನ್ನುವುದು ಇದರ ಹಿಂದಿನ ತತ್ವ. ಕರ್ನಾಟಕದ ನಲಿ–ಕಲಿ, ತಮಿಳುನಾಡು ಹಾಗೂ ಮತ್ತಿತರ ರಾಜ್ಯಗಳ ಚಟುವಟಿಕೆ ಆಧಾರಿತ ಕಾರ್ಯಕ್ರಮಗಳು ಇದೇ ತತ್ವವನ್ನು ಆಧರಿಸಿವೆ.

**ರೂಮ್ ಟು ರೀಡ್ :** ಶಿಕ್ಷಣದಲ್ಲಿ ಲಿಂಗ ಸಮಾನತೆ ಹಾಗೂ ಸಾಕ್ಷರತೆಯನ್ನು ಗುರಿಯಾಗಿಸಿಕೊಂಡು, ಕಡಿಮೆ ಆದಾಯದ ಸಮುದಾಯಗಳ ಕೋಟ್ಯಂತರ ಮಕ್ಕಳ ಬದುಕಿನಲ್ಲಿ ಸ್ಥಿತ್ಯಂತರ ತರಲು ಪ್ರಯತ್ನಿಸುತ್ತಿರುವ ಸ್ವಯಂ ಸೇವಾ ಸಂಘಟನೆ. ಸ್ಥಳೀಯ ಸಮುದಾಯದೊಟ್ಟಿಗೆ ಕಾರ್ಯ ನಿರ್ವಹಿಸುತ್ತ, ಸಂಘಟನೆಗಳು ಮತ್ತು ಸರ್ಕಾರದೊಟ್ಟಿಗೆ ಸಹಭಾಗಿತ್ವ ವಹಿಸುತ್ತ, ಪ್ರಾಥಮಿಕ ಶಾಲೆಯ ಮಕ್ಕಳಲ್ಲಿ ಸಾಹಿತ್ಯಕ ಕೌಶಲ ಹಾಗೂ ಓದುವ ಹವ್ಯಾಸವನ್ನು ಬೆಳೆಸುವುದು; ಪ್ರೌಢ ಶಾಲೆಯನ್ನು ಸಂಪೂರ್ಣ ಜೀವನ ಕೌಶಲ ಪಡೆದು ಪೂರ್ಣಗೊಳಿಸಿ, ಶಾಲೆ ಹಾಗೂ ಅದರಾಚೆ ಯಶಸ್ಸು ಸಾಧಿಸುವಂತೆ ಹೆಣ್ಣು ಮಕ್ಕಳನ್ನು ಸನ್ನದ್ಧಗೊಳಿಸುವುದು ಇದರ ಆಶಯ.

## ವ

**ವಾಲಂಟರಿ ಟೀಚರ್ ಫೋರಮ್ (ವಿಟಿಎಫ್) :** ಅಜೀಂ ಪ್ರೇಮ್‌ಜಿ ಫೌಂಡೇಷನ್ ಸಂಘಟಿಸಿ, ನಡೆಸುತ್ತಿರುವ ಸರ್ಕಾರಿ ಶಾಲೆಗಳ ಶಿಕ್ಷಕರ ನಿರಂತರ ವೃತ್ತಿಪರ ಅಭಿವೃದ್ಧಿಗೆ ರೂಪಿಸಿರುವ ಸ್ವಯಂ ಹಾಗೂ ಸಮಾನಸ್ಕಂದರ ಕಲಿಕಾ ವೇದಿಕೆ. ಇದೊಂದು ಸ್ವಇಚ್ಛೆಯಿಂದ ಪಾಲ್ಗೊಳ್ಳುವ ಶಿಕ್ಷಕರ ಕಾರ್ಯಜಾಲ. ಈ ಅನೌಪಚಾರಿಕ ಗುಂಪು ಇಲಾಖೆಯ ನಿರ್ದೇಶನದ ಭಾಗವಾಗದೆ, ತನ್ನದೇ ಸ್ವಯಂ ಆಸಕ್ತಿಯಿಂದ ಆಗಾಗ ಸಭೆ ಸೇರುತ್ತದೆ.

## ಸ

**ಸರ್ವ ಶಿಕ್ಷಾ ಅಭಿಯಾನ (ಎಸ್‌ಎಸ್‌ಎ) :** ಆರರಿಂದ 14 ವರ್ಷದವರೆಗಿನ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣ ಮೂಲಭೂತ ಹಕ್ಕು: ಉಚಿತ ಹಾಗೂ ಕಡ್ಡಾಯ ಎಂದಿರುವ ಭಾರತೀಯ ಸಂವಿಧಾನದ 86ನೇ ತಿದ್ದುಪಡಿಗೆ ಅನುಗುಣವಾಗಿ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣದ ಗುರಿಯುಳ್ಳ ಕಾರ್ಯಕ್ರಮ. ಕೇಂದ್ರ ಸರ್ಕಾರವು ರಾಜ್ಯ ಸರ್ಕಾರಗಳ ಸಹಭಾಗಿತ್ವದಲ್ಲಿ ಸ್ಥಳೀಯ ಸಂಸ್ಥೆಗಳನ್ನು ಒಳಗೊಂಡಂತೆ ಜಿಲ್ಲಾ ಮಟ್ಟದ ವಿಕೇಂದ್ರೀಕೃತ ಆಡಳಿತ ಚೌಕಟ್ಟಿನಡಿ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುತ್ತಿದೆ.

**ಸಿಎಫ್‌ಎಸ್‌ಐ (ಚೈಲ್ಡ್ ಫ್ರೆಂಡ್ಲಿ ಸ್ಕೂಲ್ ಇನಿಷಿಯೇಟಿವ್) :** ಯಾದಗಿರಿ ಜಿಲ್ಲೆಯ ಸುರಪುರ ಬ್ಲಾಕ್‌ನಲ್ಲಿ ಕರ್ನಾಟಕ ಸರ್ಕಾರ ಹಾಗೂ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯ ಜಂಟಿಯಾಗಿ ಆರಂಭಿಸಿದ ಕಾರ್ಯಕ್ರಮ. ಶಿಕ್ಷಕರ ಸಾಮರ್ಥ್ಯಗಳು, ಶಾಲಾ ವಾತಾವರಣ, ಮಕ್ಕಳ ಕಲಿಕೆ, ಯೋಗಕ್ಷೇಮ ಹಾಗೂ ಸರ್ವತೋಮುಖ ಬೆಳವಣಿಗೆಯನ್ನು ಉತ್ತೇಜಿಸಲು ಆರಂಭಿಸಿದ ಸಮಗ್ರ ಶಾಲಾಭಿವೃದ್ಧಿ ಕಾರ್ಯಕ್ರಮ.

## ಶ

**ಶಾಲಾಭಿವೃದ್ಧಿ ಮತ್ತು ಮೇಲ್ವಿಚಾರಣೆ ಸಮಿತಿ (ಎಸ್‌ಡಿಎಂಸಿ ಅಥವಾ ಶಾಲೆ ನಿರ್ವಹಣೆ ಸಮಿತಿ, ಎಸ್‌ಎಂಸಿ) :** ಸರ್ಕಾರಿ ಶಾಲೆಗಳ ಪರಿಣಾಮಕಾರಿ ನಿರ್ವಹಣೆಗೆ ಪೋಷಕರು ಹಾಗೂ ಶಿಕ್ಷಕರನ್ನು ಒಳಗೊಂಡ, ಸಮುದಾಯದ ಸಹಭಾಗಿತ್ವ ಮತ್ತು ಒಡೆತನವನ್ನು ಪ್ರೋತ್ಸಾಹಿಸುವ ಸಮಿತಿಗಳು. ಮುಖ್ಯ ಶಿಕ್ಷಕ ಸಮಿತಿಯ ಕಾರ್ಯದರ್ಶಿಯಾಗಿದ್ದು, ಪೋಷಕರೊಬ್ಬರು ಅಧ್ಯಕ್ಷರಾಗಿರುತ್ತಾರೆ. ಶಾಲೆಯ ವಿದ್ಯಾರ್ಥಿಗಳ ಪೋಷಕರು ಸಮಿತಿಯ ಸದಸ್ಯರನ್ನು ಆಯ್ಕೆ ಮಾಡುತ್ತಾರೆ.

**ಶಾಲಾ ನಾಯಕತ್ವ ಅಭಿವೃದ್ಧಿ ಕಾರ್ಯಕ್ರಮ (ಎಸ್‌ಎಲ್‌ಡಿಪಿ) :** ಕರ್ನಾಟಕ ಸರ್ಕಾರ ಹಾಗೂ ಅಜೀಂ ಪ್ರೇಮ್‌ಜಿ ಫೌಂಡೇಷನ್ ಈ ಕಾರ್ಯಕ್ರಮವನ್ನು ಸಂಯೋಜಿಸಿ, ಅನುಷ್ಠಾನಗೊಳಿಸುತ್ತಿದೆ. ದೀರ್ಘಾವಧಿಯಲ್ಲಿ ಹಾಗೂ ನಿರಂತರವಾಗಿ ಶಾಲೆಗಳ ಮುಖ್ಯಸ್ಥರ ಸಾಮರ್ಥ್ಯ ನಿರ್ಮಾಣ ಹಾಗೂ ಬೆಳವಣಿಗೆ ಇದರ ಉದ್ದೇಶ. ಇದೇ ಕಾರ್ಯಕ್ರಮವನ್ನು ಅಗತ್ಯ ಬದಲಾವಣೆಗಳೊಂದಿಗೆ

ಉತ್ತರಾಖಂಡ್‌ದ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳ ಮುಖ್ಯ ಶಿಕ್ಷಕರಿಗಾಗಿ ಅನುಷ್ಠಾನಗೊಳಿಸಲಾಗಿದೆ.

**ಶಾಲಾ ಮುಖ್ಯ ಶಿಕ್ಷಕರ ಕಾರ್ಯಕ್ರಮ :** 2004ರಲ್ಲಿ ಶಿಕ್ಷಣ ಇಲಾಖೆ ಹಾಗೂ ಅಜೀಂ ಪ್ರೇಮ್‌ಜಿ ಫೌಂಡೇಷನ್ ಸುರಪುರ ವಿಭಾಗದಲ್ಲಿ ಜಂಟಿಯಾಗಿ ಆಯೋಜಿಸಿದ ಮುಖ್ಯ ಶಿಕ್ಷಕರ ಹತ್ತು ದಿನಗಳ ತರಬೇತಿ ಕಾರ್ಯಕ್ರಮ. ಇದು ಬಾಲಸ್ನೇಹಿ ಶಾಲಾ ಉಪಕ್ರಮದ ಭಾಗ.

**ಶಿಕ್ಷಕ ತರಬೇತಿ ಕೇಂದ್ರಗಳು (ಟಿಎಲ್‌ಸಿ) :** ಕಲಿಕಾ ಸಂಪನ್ಮೂಲ ಕೇಂದ್ರ(ಎಲ್‌ಆರ್‌ಸಿ) ನೋಡಿ.

**ಶಿಕ್ಷಕ ಉನ್ನತ ತರಬೇತಿ (ಟಿಸಿಎಚ್) :** ಕರ್ನಾಟಕದಲ್ಲಿ 2002ರವರೆಗೆ ಪಿಯುಸಿ/12ನೇ ತರಗತಿ ನಂತರ ನೀಡಲಾಗುತ್ತಿದ್ದ ಎರಡು ವರ್ಷಗಳ ಶಿಕ್ಷಕ ತರಬೇತಿ ಡಿಪ್ಲೊಮಾ ಕೋರ್ಸ್. ಆನಂತರ ಇದನ್ನು ಎರಡು ವರ್ಷಗಳ ಡಿಎಡ್(ಶಿಕ್ಷಣ ಡಿಪ್ಲೊಮಾ) ಎಂದು ಬದಲಿಸಲಾಯಿತು.

# ಕೃತಜ್ಞತೆಗಳು

ಈ ಅಧ್ಯಯನಕ್ಕಾಗಿ ಉತ್ತಮ ಶಿಕ್ಷಕರ ಸಮೂಹವೊಂದನ್ನು ಸೂಚಿಸಿದ, ಕ್ಷೇತ್ರಕಾರ್ಯದಲ್ಲಿ ತೀವ್ರವಾಗಿ ಹಾಗೂ ನಿರಂತರವಾಗಿ ತೊಡಗಿಸಿಕೊಂಡಿರುವ ನನ್ನ ಸಹೋದ್ಯೋಗಿಗಳಿಗೆ ಧನ್ಯವಾದ ಅರ್ಪಿಸುತ್ತೇನೆ. ಹೆಚ್ಚಿನವರು ತಮ್ಮ ಬಿಡುವಿಲ್ಲದ ಕೆಲಸದ ನಡುವೆಯೂ ಶಾಲೆಗಳಿಗೆ ನನ್ನೊಂದಿಗೆ ಭೇಟಿ ನೀಡಿದರು. ಅಂಥ ಸಮಯದಲ್ಲಿ ಅವರು ನೀಡಿದ ಒಳನೋಟಗಳು ಹಾಗೂ ಪ್ರಾಸಂಗಿಕ ಅಭಿಪ್ರಾಯಗಳಿಗೆ ಬೆಲೆ ಕಟ್ಟಲು ಸಾಧ್ಯವಿಲ್ಲ. ಅಷ್ಟಲ್ಲದೆ, ನಮ್ಮ ದಿನವನ್ನು ಆರಂಭಿಸಲು ಇಲ್ಲವೇ ಅಂತ್ಯಗೊಳಿಸಲು ಎಲ್ಲಿ ಅತ್ಯುತ್ತಮ ರಸ್ತೆ ಬದಿ ಹೋಟೆಲ್‌ಗಳು ಇವೆ ಎನ್ನುವುದೂ ಅವರಿಗೆ ಗೊತ್ತಿತ್ತು.

**ಸಿರೋಹಿ ಜಿಲ್ಲೆ :** ರಾಕೇಶ್ ತಿವಾರಿ, ವಿನೋದ್, ವಿಕ್ರಂ ಶರ್ಮಾ, ತಿರಂಗ್ ರಂಗಸನಮೆ, ಅಲಿ ಮೊಹಮದ್ ಖಾನ್, ಅಮೋಲ್ ಕಾಟೆ, ಜ್ಯೋತಿ ಶ್ರೀವಾಸ್ತವ

**ಟೋಂಕ್ ಜಿಲ್ಲೆ :** ವಿಕಾಸ್ ಚಂದ್ರ ರಾಯ್, ರಾಕೇಶ್ ತಿವಾರಿ, ದೇವೇಂದ್ರ ಜೋಷಿ, ನರೇಂದ್ರ ಜಾಟ್, ದಿಲೀಪ್ ಝುಗ್, ಕೈಲಾಶ್ ಬರೋಡಾ, ಮಹೇಶ್ ಶರ್ಮಾ, ರಾಜೇಂದ್ರ, ಅನಿಲ್ ಗುಪ್ತಾ, ಉಮಾಕಾಂತ್ ಶರ್ಮಾ, ರಾಜೇಂದರ್ ಸಿಂಗ್

**ಉಧಮ್‌ಸಿಂಗ್ ನಗರ್ ಜಿಲ್ಲೆ :** ರಾಜೀವ್ ಶರ್ಮಾ, ಅಜರ್ ಜುಬೇರ್, ಜೈಶಂಕರ್ ಚೌಬೆ, ಸಂಜಯ್ ಯಾದವ್, ಅಮಿತ್ ಚಂದ್ರ, ಕುಲ್ವಂತ್ ಸಿಂಗ್ ಕಾಂತಾ, ಅಶ್ವಿನಿ, ರಾಜ್ ಕುಮಾರ್, ವಿಜಯ್ ಕುಮಾರ್ ಪಾಂಡೆ, ಅರುಣ್‌ಕುಮಾರ್ ನೌಟಿಯಾಲ್, ದೀಪಾ ರಾಣಿ

**ಉತ್ತರಕಾಶಿ ಜಿಲ್ಲೆ :** ಆಶಿಶ್ ತ್ರಿಪಾಠಿ, ಪ್ರಮೋದ್ ಪೆನ್ಯುಲಿ, ಸಂಜಯ್ ರಾವತ್, ಸಂಜಯ್ ಸೆಮ್ವಾಲ್, ಸಂಜೀವ್ ಬಿಜ್ಲಿಯಾನ್, ಸೌರಭ್ ಠಾಕೂರ್

**ಯಾದಗಿರಿ ಜಿಲ್ಲೆ :** ರುದ್ರೇಶ್ ಎಸ್, ಗುರುರಾಜ ರಾವ್ ಕುಲಕರ್ಣಿ, ಅಡಿವೆಪ್ಪ ಕುರಿ, ರಮೇಶ್ ಎಸ್. ಪಾಟೀಲ್, ಅನ್ವರ್ ಎಂ, ಹುಲಗಪ್ಪ ಎಸ್. ಗೌಂಡಿ, ಗುರುರಾಜ ಕುಲಕರ್ಣಿ, ಶಿವಾನಂದ ಹಡಪದ, ವಿನೋದ್ ಕುಮಾರ್, ರಮೇಶ್ ಎಂ. ಕುಲಕರ್ಣಿ, ಖಾಜಾ ಅಜೀಮುದ್ದೀನ್ ಫರೀದಿ, ಮಲ್ಲಪ್ಪ ಹಡಪದ

**ವಿಶ್ವವಿದ್ಯಾಲಯದಲ್ಲಿ :** ಉಮಾಶಂಕರ್ ಪೆರಿಯೋಡಿ, ಏಣಾಕ್ಷಿ ಭಾರ್, ಹರಿಣಿ ನಾಗೇಂದ್ರ, ಸೈಯದ್ ಶಂಶದ್ ಹುಸೇನ್, ರಿಷಿಕೇಶ್ ಬಿ.ಎಸ್., ಸುಜಾತ ಪುರಾಣಿಕ್, ಸುಬ್ರತ್ ಕುಮಾರ್ ಮಿಶ್ರಾ

* * *

ಶಾಲೆಗೆ ಹೋದಾಗ, ಭೇಟಿಯಾದ ಎಲ್ಲ ಶಿಕ್ಷಕರಿಗೆ ಧನ್ಯವಾದ ಸಲ್ಲಿಸುತ್ತೇನೆ. ತಮ್ಮ ಶಾಲೆ ಹಾಗೂ ತರಗತಿಗಳಿಗೆ ಭೇಟಿ ನೀಡಲು, ಗಮನಿಸಲು ಹಾಗೂ ಟಿಪ್ಪಣಿ ಮಾಡಿಕೊಳ್ಳಲು ಅನುಮತಿ ನೀಡಿದ್ದಕ್ಕಾಗಿ ಅವರಿಗೆ ವಂದನೆಗಳು. ಕೆಲವೊಮ್ಮೆ ಶಾಲೆ ಅವಧಿ ಮುಗಿದ ಬಳಿಕವೂ ನನ್ನೊಡನೆ ಮಾತನಾಡುತ್ತ ಸಮಯ ಕಳೆದ ಅವರಿಗೆ ನಾನು ಸದಾ ಕೃತಜ್ಞನಾಗಿರುತ್ತೇನೆ. ಅವರೆಲ್ಲರೂ ಮುಕ್ತವಾಗಿ, ಹಾರ್ದಿಕವಾಗಿ ತಮ್ಮ ಬಗ್ಗೆ, ಶಾಲೆಗಳ ಬಗ್ಗೆ, ಭರವಸೆ ಮತ್ತು ಅಭಿಲಾಷೆಗಳ ಬಗ್ಗೆ, ಕಷ್ಟ ಹಾಗೂ ನಿರಾಶೆಗಳ ಬಗ್ಗೆ ನನ್ನೊಡನೆ ಮಾತನಾಡಿದ್ದಾರೆ. ಅವರ ಜತೆ ಇದ್ದುದು ನನ್ನ ಪಾಲಿಗೆ ಗೌರವದ ವಿಷಯವಾಗಿತ್ತು. ಈ ಶಿಕ್ಷಕರು ನನ್ನೊಂದಿಗೆ ವಿನಯಶೀಲತೆಯಿಂದ ಹಂಚಿಕೊಂಡ ವಿಷಯಗಳಿಗೆ ನ್ಯಾಯ ಒದಗಿಸಿದ್ದೇನೆ ಎನ್ನುವ ಭರವಸೆ ನನಗಿದೆ.

**ಸಿರೋಹಿ ಜಿಲ್ಲೆ:**

**ರೇವದರ್ ಬ್ಲಾಕ್ :** ರಮೇಶ್ ಚಂದ್ರ ಪಾಲ್, ರಾಮರಾಜ್ ಗುಜ್ಜರ್, ಯೂನುಸ್ ಗೌರಿ, ಗೀತಾ ಸಿಂಗ್

**ಅಬು ರೋಡ್ ಬ್ಲಾಕ್ :** ಮಹೇಂದ್ರ ಕುಮಾರ್ ಡಾಬಿ, ಶಂಕರ್ ಲಾಲ್ ಬರೋತ್, ಕಮಲೇಶ್ ರಾಜಪುರೋಹಿತ್, ಸತ್ಯನಾರಾಯಣ್ ಬೈರ್ವಾ, ಚೇತನಾ ವಿಶ್ವ, ಶ್ವೇತಾ, ಜಗದೀಶ್ ಕುಮಾರ್ ಬರೋತ್, ಪಂಕಜ್ ಮಾಥುರ್, ಪಕಾರಾಂ ಮೀನಾ

**ಶಿಯೋಗಂಜ್ ಬ್ಲಾಕ್ :** ತಿಲೋಕ್ ಚಂದ್, ವೀರೇಂದ್ರ ರಾತೊಯ್, ವೀರಾ ರಾಮ್, ನಹರ್ ಸಿಂಗ್, ವೀಣಾ ರಾಥೋಡ್, ಶೈತಾನ್ ಸಿಂಗ್, ಮಹಿಂದರ್ ಕುಮಾರ್, ಭೂಪೇಂದರ್ ಕುಮಾರ್ ದೇತಾ

**ಸಿರೋಹಿ ಬ್ಲಾಕ್ :** ಮೇವಾರಾಮ್ ಚೌಧರಿ, ದಿನೇಶ್ ಪ್ರಜಾಪತ್, ಪಂಕಜ್ ಕುಮಾರ್ ಶರ್ಮಾ, ಘನಿ ಖಾನ್, ಭನ್ವರ್ ಲಾಲ್ ಚೌಧರಿ, ದುರ್ಜಂದನ್ ಚರಣ್

**ಪಿಂಡ್ವಾರಾ ಬ್ಲಾಕ್ :** ಸುಮಿತ್ ಪಂಜಾಬಿ, ಗೋಪಾಲ್ ರಾವಲ್, ದೇವಾರಾಂ

**ಟೋಂಕ್ ಜಿಲ್ಲೆ:**

**ಉನ್ನಿಯಾರಾ ಬ್ಲಾಕ್ :** ಅಶೋಕ್ ಕುಮಾರ್ ಸೋಯಲ್, ಕೈಲಾಶ್ ಚಂದ್ ಜಾಟ್

**ಮಲ್ಪುರ ಬ್ಲಾಕ್ :** ಕಮಲ್‌ಚಂದ್ ಮಾಲಿ, ರಾಧೇಶ್ಯಾಮ್ ಚೌಧರಿ, ಮಹಾವೀರ್ ಸ್ವಾಮಿ, ಅಬ್ದುಲ್ ಹಮೀದ್, ಖಿಶನ್‌ಲಾಲ್ ಗುಜ್ಜರ್, ವಿಷ್ಣುಕಾಂತ ಪರಾಶರ್

**ನೇವೈ ಬ್ಲಾಕ್ :** ಲಾದುಲಾಲ್ ಬೈರ್ವಾ, ರಾಜೇಶ್ ಗುರ್ಜರ್, ನಿರಂಜನ್ ಸಾವರಿಯಾ, ಜೈನಾರಾಯಣ್ ಮೀನಾ, ರಾಮಪ್ರಸಾದ್ ಕೋಲಿ, ಧನ್ನಾಲಾಲ್ ವರ್ಮಾ, ಶಂಕರ್‌ಲಾಲ್ ಮೀನಾ, ಭಗವತಿ ರಮನ್ವಾಲ್, ಸುಭಾಶ್ ಕುಮಾವತ್, ದೇವೇಂದ್ರ ಶರ್ಮಾ

**ಪೀಪ್ಲು ಬ್ಲಾಕ್ :** ಮುಖೇಶ್ ಕುಮಾರ್ ಶರ್ಮಾ, ಅಬ್ದುಲ್ ವಾಜೀದ್

**ಟೋಂಕ್ ಬ್ಲಾಕ್ :** ಪ್ರಕಾಶ್‌ಚಂದ್ರ ರೇಗರ್, ನರೇಂದ್ರ ಕುಮಾರ್ ಗೌತಮ್, ಸೂರಜ್‌ಭಾನ್ ಚೌಧರಿ, ಮೋಹನ್‌ಲಾಲ್ ಹರ್‍ರಾವತ್, ಕಾಲುರಾಮ್ ಯಾದವ್

**ತೊದರೈ ಸಿಂಗ್ ಬ್ಲಾಕ್ :** ಸತ್ಯನಾರಾಯಣ ಮಾಲಿ, ಮಾಯಾ ಜಾಟ್, ಓಂಪಾಲ್ ಪ್ರಜಾಪತ್, ಮಥುರಾಲಾಲ್ ರಾಯ್ಗರ್, ರಮೇಶ್ ಚಂದ್ರ ಮೀನಾ, ರಾಜಾರಾಂ ಮೀನಾ, ಪಂಕಜ್ ಕುಮಾರ್ ವರ್ಮಾ, ಪ್ರಧಾನ್ ಕುಮಾರ್ ಭೈರ್ವಾ, ಯೋಗೇಶ್ ಪ್ರಸಾದ್ ಮಹಾವರ್

**ದಿಯೋಲಿ ಬ್ಲಾಕ್ :** ವಿಜಯ್ ಬಿಶ್ತ್, ಕೈಲಾಸಚಂದ್ರ ಪಂಚೋಲಿ, ಕಾಲೂರಾಂ ಯಾದವ್, ಮನ್ಸೌರ್ ಭಾಯ್ ಚೌಧರಿ, ಗೋವಿಂದ್ ಪ್ರಜಾಪತ್

**ಉಧಮ್‌ಸಿಂಗ್ ನಗರ ಜಿಲ್ಲೆ :**

**ಜಸ್ಪುರ ಬ್ಲಾಕ್ :** ಧರ್ಮೇಂದರ್ ಕುಮಾರ್, ಅವನೀಶ್ ಕುಮಾರ್ ಚೌಹಾಣ್, ಅಲೋಕ್ ಕುಮಾರ್, ಜಿತೇಂದ್ರ ಸಿಂಗ್

**ಖತೀಮಾ ಬ್ಲಾಕ್ :** ತಪನ್‌ಶೀಲ್, ಈಶ್ವರಚಂದ್ರ ಮೌರ್ಯ, ಕಮಲಾ ಭಂಡಾರಿ, ಧರಂಪಾಲ್ ಗಂಗ್ವಾರ್, ಅನಿತಾ ರಾವತ್, ಗೋಬಿ ಲಾಲ್, ಸಿಯಾನಂದ್, ಸುಮನ್

**ರುದ್ರಪುರ್ ಬ್ಲಾಕ್ :** ಶಿಖಾ ಗಂಗ್ವಾರ್, ಕೃಷ್ಣಕುಮಾರ್ ಶರ್ಮಾ, ಕೀರ್ತಿನಿಧಿ ಶರ್ಮಾ, ಪಂಕಜ್ ಪಾಂಡೆ, ರವಿಮೋಹನ್, ಮಂಜು ಬಿಷ್ಟ್, ವಿನಯ್‌ಪ್ರಭಾ ಪಾಠಕ್, ಪ್ರದೀಪ್ ಪಾಂಡೆ

**ಕಾಶೀಪುರ ಬ್ಲಾಕ್ :** ಹರೀಶ್ ಚಂದ್ರ ಸಿಂಗ್ ರಾವತ್, ಕಿರಣ್ ಶರ್ಮಾ, ಅನಿಲ್ ಕುಮಾರ್ ಶರ್ಮಾ, ಜಹೀರುದ್ದೀನ್, ಸೊಹೈಲ್ ಖಾನ್, ಉಷಾ ಶರ್ಮಾ

**ಗದರ್‌ಪುರ ಬ್ಲಾಕ್ :** ರಘುವೇಂದ್ರ ಸಿಂಗ್, ಅಂಕುರ್ ಅರೋರಾ, ಅಮನ್‌ದೀಪ್ ಕೌರ್

**ಸಿತಾರ್‌ಗಂಜ್ ಬ್ಲಾಕ್ :** ಮೀನಾ ರಾಣಾ, ರಾಮ್‌ಜನಮ್ ಚೌಹಾಣ್, ಸಂಗೀತಾ ಗುಪ್ತಾ, ರಾಮ ಕಿಶೋರ್, ದಯಾಶಂಕರ್ ಶರ್ಮ, ಜಗಜೀತ್ ಕೌರ್, ಮೊಬಿನಾ ಮಲಿಕ್, ಓಂಪಾಲ್, ರವಿಕುಮಾರ್, ದಲೇರ್ ಸಿಂಗ್

**ಬಾಜ್ಪುರ ಬ್ಲಾಕ್ :** ಧರಂವೀರ್ ಸಿಂಗ್ ಚೌಹಾಣ್, ವಿದ್ಯಾ ಲೋಹರಿ, ಶಿವಾನಿ ಅಗರವಾಲ್, ರಾಜೆಂದರ್ ಸಕ್ಸೇನಾ, ಸಬೀನಾ ಖಾತುಂ, ಭರತ್ ರಾವಲ್, ರಚನಾ ವರ್ಮಾ

**ಉತ್ತರಕಾಶಿ ಜಿಲ್ಲೆ :**

**ಭಟ್ವಾರಿ ಬ್ಲಾಕ್ :** ರೇಖಾ ಚಮೋಲಿ, ಮಂಜು ರಾಣಾ, ರಾಮೇಶ್ವರಿ ಲಿಂಗ್ವಾಲ್, ದರ್ಬೇಶ್ವರಿ ಬಹುಗುಣ, ಶೂರ್‌ವೀರ್‌ಸಿಂಗ್ ಖರೋಲಾ, ಚಂದ್ರಮೋಹನ್ ಸಿಂಗ್, ನರೇಂದ್ರ ಚೌಹಾಣ್, ಕುಶ್ಲಾಪ್ರಸಾದ್ ಭಟ್, ಬಲವಂತ್‌ಸಿಂಗ್ ಬಿಷ್ತ್, ಸಾಯಿರಾ ಬಾನು, ಮಧುಲಿಕಾ ತಪ್ಲಿಯಾಲ್, ಪವಿತ್ರಾ ರಾವತ್

**ದುಂಡಾ ಬ್ಲಾಕ್ :** ಅಜಯ್ ನೌಟಿಯಾಲ್, ಸುನೀತಾ ರಾಣಾ, ಚಂದನ್ ಸಿಂಗ್, ಜೈವೀರ್ ಅಗರವಾಲ್, ರೇಖಾ ಅಸ್ವಾಲ್, ಊರ್ಮಿಳಾ ನೌಟಿಯಾಲ್

**ಚಿನ್ಯಾಲಿ ಬ್ಲಾಕ್ :** ರಜನಿ ನೇಗಿ, ಮುಖೇಶ್ ನೌಟಿಯಾಲ್, ಮುರಾರಿ ರಾಣಾ, ಸುಶೀಲಾ ರಾವತ್, ಮೀನಾ ಭಟ್, ಬಿಂದು ಗುಸೈನ್ ಪಡಿಯಾರ್, ಸಂಜಯ್ ಕುಕ್ಸಲ್

**ಪುರೋಲಾ ಬ್ಲಾಕ್ :** ಚಂದ್ರಭೂಷಣ್ ಬಿಜ್ಲವಾನ್, ಸುರೇಶ್ ಶಾ, ಶಾಂತಿ ಪ್ರಸಾದ್, ಚರಣ್‌ಸಿಂಗ್ ಅಸ್ವಾಲ್, ಮಾರ್ಕಂಡೇಯ ಪ್ರಸಾದ್ ಸೆಮ್ವಾಲ್, ಜಗತ್ ಮಿಶ್ರವಾನ್, ಕುಲವಂತಿ ರಾವತ್

**ನೌಗಾಂವ್ ಬ್ಲಾಕ್ :** ಸರಿತಾ, ವಿನೋದ್ ಮೈಥಾನಿ, ಯಶ್‌ಪಾಲ್ ಸಿಂಗ್, ಪುನೀತಾ ರಾಣಾ, ಪ್ರವೀಣಾ ಪುರಿ, ಸೂರತ್ ಲಾಲ್ (ಮಾರ್ಚ್ ೨೦೧೮ರಲ್ಲಿ ನಿವೃತ್ತರಾದರು), ಧ್ಯಾನ್‌ಸಿಂಗ್ ರಾವತ್, ಮನ್‌ಬೀರ್‌ಸಿಂಗ್ ಚೌಹಾಣ್, ಜಗಬೀರ್‌ಸಿಂಗ್ ಜಯದ, ಪ್ರಭಾ ಭಟ್, ವಿಜಯಾ ರಾವತ್, ದುರ್ಗೇಶ್ ನಂದಿನಿ ಯಾದವ್, ಸವಿತಾ ಚಮೋಲಿ, ಉಷಾಕಿರಣ್ ಬಿಷ್ಟ್, ಸಂಗೀತಾ ಬಹುಗುಣ

**ಯಾದಗಿರಿ ಜಿಲ್ಲೆ :**

**ಸುರಪುರ ಬ್ಲಾಕ್ :** ಶರಣಬಸಯ್ಯ ಹಿರೇಮಠ್, ಬಾಬು ಲಮಾಣಿ, ಜಿ.ಎನ್.ಬಿರಾದಾರ್, ಕಾಶಿಲಿಂಗಯ್ಯ ಗಣಾಚಾರಿ, ಚನ್ನಬಸಯ್ಯ ಬಿ. ನವಣಿ, ರಮೇಶ್ ಒಣಕಿಹಾಳ್, ಶ್ರೀಶೈಲ ಎಂ.ಜಿ. ಬಸಪ್ಪ ಅಬ್ಯಾಳ್, ಗಿರಿಯಪ್ಪ ಅಸಂಗಿ, ಮಂಜುನಾಥ ಕಟ್ಟೀಮನಿ, ವೀರೇಶ ಹಿರೇಮಠ್, ಪ್ರಭುದೇವ ಯಾದವ್, ರಾಜುಗೌಡ ಮುದಿಗೌಡರ್, ಅಚ್ಚಪ್ಪ ಗೌಡರ್, ಸಂಗಯ್ಯ ಬಚಾಳ್, ರೇಣುಕಾ ಪೂಜಾರಿ, ಮಂಜುನಾಥ್ ಸಿದ್ಧಣ್ಣ, ಮಲ್ಲಪ್ಪ ಗುಳಿ, ಶರಣಗೌಡ ಪಾಟೀಲ್, ಬಸವರಾಜು ದಳವಾಯಿ, ಬಸವಗೌಡ ಚೌಧರಿ, ಅಯೂಬ್ ಜಮಾದಾರ್, ಮಲ್ಲಿಕಾರ್ಜುನ ನಂದೆಲ್ಲಿ, ಸಿದ್ಧರಾಮ ಬಿರಾದಾರ್, ಪರಮೇಶ್ವರಯ್ಯ ಹಿರೇಮಠ್, ಮಲ್ಲಣ್ಣ ಸಜ್ಜನ್, ಸುಷ್ಮಾ ಜಿ., ಅಶೋಕ್ ಕೆ., ರಾಜಣ್ಣ ಗೋಟೂರ್, ಶಿವಾನಂದ ಬಿರಾದಾರ್, ಶರಣಗೌಡ ಪಾಟೀಲ್, ದುಂಡಪ್ಪ ಕೋಲ್ಕರ್, ಬಸವರಾಜ ನೀಲಗಾರ್, ಶಿವಪ್ಪ ಸಜ್ಜನ, ಶಂಕರ್ ಗೌಡ ಪಾಟೀಲ್, ರಾಜೇಶ್ ಮುಜಾವರ್, ಅಣ್ಣಪ್ಪ ಗೌಡ ಪಾಟೀಲ್, ಶಿವಕುಮಾರ್ ಬಂಡೋಳಿ, ಕಾಂತೇಶ ಹಲಗಿಮನಿ, ಶ್ರೀಧರ ಮಲ್ಜಿ, ಯಮನಪ್ಪ ಕುರಿ, ಸೋಮಶೇಖರ ಬಕ್ಲಿ, ಶಾಖಾಂಬರಿ ಹಿರೇಮಠ್, ಮರಿಯಪ್ಪ ಹೊಸಮನಿ, ಯಲಗುಡ್ಡಪ್ಪ ತಿಪ್ಪಣ್ಣ, ಗೀತಾ ಹತ್ರಿಕಿಹಾಳ್, ರಾಜಶೇಖರ ಚಿಲ್ಲಾಳ್, ಕಾಶೀಬಾ ಬಸರಕೋಡ್, ಜಯಶ್ರೀ ಹಿರೇಮಠ್, ಕೌಸರ್ ಬಾನು, ಶೋಭಾ ಭಂಡಾರಿ, ಫರೀದಾ ಬೇಗಂ, ಲಿಂಗಯ್ಯ ಕಲ್ಲೂರ್‌ಮಠ.

* * *

ವಿಶೇಷವಾಗಿ, ನನ್ನ ಸಹೋದ್ಯೋಗಿ ಹಾಗೂ ಪ್ರಸಿದ್ಧ ಲೇಖಕರೂ ಆಗಿರುವ ಶೆಫಾಲಿ ತ್ರಿಪಾಠಿ ಮೆಹ್ತಾ ಅವರಿಗೆ ನಾನು ಧನ್ಯವಾದಗಳನ್ನು ಸಲ್ಲಿಸಲು ಇಚ್ಛಿಸುತ್ತೇನೆ. ಮೂಲ ಇಂಗ್ಲಿಷ್ ಆವೃತ್ತಿಯನ್ನು ಅಂತಿಮ ರೂಪಕ್ಕೆ ತರಲು ಅವರು ನನಗೆ ಬಹಳಷ್ಟು ಸಹಾಯವನ್ನು ಮಾಡಿದ್ದಾರೆ. ಶೆಫಾಲಿ ಆರಂಭದ ಕರಡಿನ ಹಂತದಿಂದಲೇ ನನಗೆ ನೆರವಾಗಿದ್ದು, ಅಧ್ಯಾಯಗಳು ಮತ್ತು ವಿಭಾಗಗಳ ಮರುಜೋಡಣೆ ಹಾಗೂ

ಮರುಸಂಘಟನೆ ಹಾಗೂ ಕಥನಗಳ ಆಯ್ಕೆಯಲ್ಲಿ ಸಹಕಾರ ನೀಡಿದ್ದಾರೆ. ಶೈಲಿಯಲ್ಲಿ ಸ್ಥಿರತೆಯನ್ನು ಕಾಪಾಡಲು ಖಡಾಖಂಡಿತವಾಗಿ ನಿರ್ಣಯ ತೆಗೆದುಕೊಳ್ಳುವಂತೆ ಒತ್ತಾಯಿಸಿದ್ದಾರೆ ಹಾಗೂ ಪುಸ್ತಕದ ಸಂಪಾದನೆಯಲ್ಲಿ ಕಠಿಣ ಪರಿಶ್ರಮ ವಹಿಸಿದ್ದಾರೆ.

ಪುಸ್ತಕವನ್ನು ಕುರಿತಂತೆ ಅಂತಿಮ ಭಾಗದಲ್ಲಿ ಪ್ರಬಂಧ ಬರೆದ ಸ್ನೇಹಿತರೂ ಮತ್ತು ಸಹೋದ್ಯೋಗಿಯಾದ, ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಸಿಇಒ ಅನುರಾಗ್ ಬೆಹಾರ್ ಅವರಿಗೆ ನಾನು ಕೃತಜ್ಞ, ಅವರು ಪುಸ್ತಕದ ಪ್ರತಿ ಹಂತದಲ್ಲೂ ನನ್ನನ್ನು ಪ್ರೋತ್ಸಾಹಿಸುತ್ತಿದ್ದುದಲ್ಲದೆ, ಈ ಪ್ರಯತ್ನ ಬೆಲೆ ಕಟ್ಟಲಾಗದ್ದು ಎನ್ನುವುದನ್ನು ತೋರಿಸಲು ತಾವೇ ಪ್ರಬಂಧವನ್ನೂ ಬರೆದುಕೊಟ್ಟಿದ್ದಾರೆ. ಅಸಾಧಾರಣ ಶಿಕ್ಷಕರ ಕಥನಗಳ ಮೂಲಕ ನಾನು ಏನನ್ನು ಹೇಳಲು ಪ್ರಯತ್ನಿಸಿದ್ದೆನೋ ಅದರ ಸಾರವನ್ನು ನಿರೂಪಿಸುವ ಅವರ ಪ್ರಬಂಧಕ್ಕಿಂತ ಈ ಪುಸ್ತಕಕ್ಕೆ ಉತ್ತಮ ಮುಕ್ತಾಯ ಸಿಗುವುದು ಸಾಧ್ಯವಿರಲಿಲ್ಲ.

ಪುಸ್ತಕದ ಐದು ಅಧ್ಯಾಯಗಳ ಆರಂಭದಲ್ಲಿ ಅದಕ್ಕೆ ಪೂರಕವಾದ ಸುಂದರ ರೇಖಾಚಿತ್ರಗಳನ್ನು ರಚಿಸಿದ ಅದ್ವೈತ್ ಪವಾರ್‌ಗೆ ಧನ್ಯವಾದ ಸಲ್ಲಿಸುತ್ತೇನೆ. ಪುಸ್ತಕದ ವಿನ್ಯಾಸದಲ್ಲಿ ನೆರವಾದ ಹಾಗೂ ಕಲಾವಿದನ ಜೊತೆಗೆ ಕೆಲಸ ಮಾಡಿದ ಸಚಿನ್ ಮುಳೆ, ರಾಧಿಕಾ ಮೋಟಾನಿ ಹಾಗೂ ಮಂಜೂಷ ಮುತ್ತಯ್ಯ ಅವರ ಉತ್ಸಾಹ ನನ್ನನ್ನು ಗಾಢವಾಗಿ ತಟ್ಟಿದೆ.

ಈ ಪುಸ್ತಕವನ್ನು ಕನ್ನಡದಲ್ಲಿ ಪ್ರಕಟಿಸಿದ ಶ್ರೀ ರಮೇಶ ಉಡುಪ ಮತ್ತು ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ. ಅವರಿಗೆ ನಾನು ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಪ್ರತಿ ಮಗುವಿಗೂ ಅತ್ಯುತ್ತಮ ಶಿಕ್ಷಣ ನೀಡುವುದಕ್ಕಾಗಿ ತಮ್ಮ ಕರ್ತವ್ಯದ ಪರಿಧಿಯನ್ನು ಮೀರಿ ಉದ್ಯುಕ್ತರಾದ, ಆದರೆ ಯಾರೂ ಹಾಡಿ ಹೊಗಳದ ಭಾರತದ ಶಿಕ್ಷಕರ ಕಥೆಯನ್ನು ಜನರಿಗೆ ತಲುಪಿಸುವ ಉದ್ದೇಶ ಹೊಂದಿರುವ ಶ್ರೀ ರಮೇಶ ಉಡುಪ ಅವರು ಈ ಪುಸ್ತಕದ ಕುರಿತು ತೋರಿದ ಅಪಾರ ಆಸಕ್ತಿಯು ಅವರ ನಂಬಿಕೆಯನ್ನು ಸ್ಪಷ್ಟಪಡಿಸುತ್ತದೆ.

ಅಂತಿಮವಾಗಿ, ಈ ಪುಸ್ತಕವನ್ನು ಕನ್ನಡಕ್ಕೆ ಅನುವಾದ ಮಾಡಿದ ಕಾರಣ ಇದರ ಪ್ರಕಟಣೆಯು ಸಾಧ್ಯವಾಗಿದೆ. ಮುಖ್ಯವಾಗಿ ಈ ಪುಸ್ತಕವನ್ನು ಕನ್ನಡಕ್ಕೆ ಅನುವಾದಿಸಿದ ಬಿ. ಆರ್. ಮಂಜುನಾಥ್, ಮಾಧವ ಐತಾಳ, ಎಂ. ಎಸ್. ಪ್ರಕಾಶ್ ಹಾಗೂ ಪರಿಶೀಲಕರಾದ ಎಚ್. ಆರ್. ಈಶ್ವರಚಂದ್ರ, ಬಿ. ಎನ್. ಮಂಜುನಾಥಯ್ಯ, ಜಿ. ಕೆ. ಮಧ್ಯಸ್ಥ ಅವರ ಪ್ರಯತ್ನ ಮುಖ್ಯವಾಗುತ್ತದೆ. ಅಲ್ಲದೆ ಜಿ. ಕೆ. ಮಧ್ಯಸ್ಥ ಅವರು ಅಂತಿಮ ಕರಡನ್ನು ಕನ್ನಡ ಭಾಷೆಗೆ ಒಗ್ಗುವಂತೆ ತಿದ್ದಿದ್ದಾರೆ. ಈ ಪುಸ್ತಕವನ್ನು ಸೂಕ್ಷ್ಮವಾಗಿ ಪರಿಶೀಲಿಸಿ, ಸಂಪಾದಿಸಿದ ಡಾ. ಮಹಾಬಲೇಶ್ವರರಾವ್ ಅವರ ಕಠಿಣ ಶ್ರಮ ಈ ಪುಸ್ತಕ ಹೊರತರುವಲ್ಲಿ ಸಹಕಾರಿಯಾಗಿದೆ. ಈ ಪುಸ್ತಕದ ಕನ್ನಡ ಅವತರಣಿಕೆಯನ್ನು ತರುವಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡು ಪ್ರತಿ ಹಂತದಲ್ಲೂ ಎಲ್ಲ ಪ್ರಕ್ರಿಯೆಗಳನ್ನು ಯಶಸ್ವಿಯಾಗಿ ಸಂಘಟಿಸಿದ ನನ್ನ ಸಹೋದ್ಯೋಗಿಗಳಾದ ಎಸ್. ವಿ. ಮಂಜುನಾಥ್, ದಿನೇಶ್ ಮಡಗಾಂವ್ಕರ್, ಸಿ. ಎಸ್. ಮಹೇಶ್‌ಕುಮಾರ್ ಅವರಿಗೆಲ್ಲರಿಗೂ ನಾನು ಚಿರಋಣಿಯಾಗಿದ್ದೇನೆ.

# ಪರಾಮರ್ಶನ ಗ್ರಂಥಗಳು

ಈ ಪುಸ್ತಕ ಹೆಚ್ಚು ಸಮಗ್ರವಾದ ಅಧ್ಯಯನದ ಸಂಗ್ರಹವಾಗಿದ್ದು ಈ ಲೇಖಕರು ಉತ್ಕೃಷ್ಟವಾದ ಶಾಲೆಗಳು ಹಾಗೂ ಶಿಕ್ಷಕರ ಸ್ವರೂಪ ಮತ್ತು ವಿಶೇಷ ಲಕ್ಷಣಗಳನ್ನು ಕುರಿತು ಆಗಾಗ್ಗೆ ಲೇಖನಗಳನ್ನು ಬರೆದಿದ್ದಾರೆ. ಪುಸ್ತಕದಲ್ಲಿರುವ ಕಥನಗಳ ಕೆಲವು ಭಾಗಗಳು ಈ ಹಿಂದೆ ಪ್ರಕಟಗೊಂಡಿವೆ.


✳ **Unshackling the vice- like grip of hierarchy in our country**
*Times of India,* Sept. 1, 2018.

https://timesofindia.indiatimes.com/city/bengaluru/unshackling-the-vice-like-grip-of-hierarchy-in-our-country/articleshow/65638094.cms

✳ **Consolidating small schools without compromising access**
*Deccan Herald,* Aug.26, 2018.

https://www.deccanherald.com/consolidating-small-schools-689375.html

✳ **One teacher at a time**
*Deccan Herald*. July 7,2018.

https://www.deccanherald.com/opinion/main-article/one-teacher-time-679549.html

✳ **The principal practices that make govt schools good**
*Times of India.* April 21, 2018.

https://timesofindia.indiatimes.com/city/bengaluru/The-principal-practices-that-make-govt-schools-good/articleshow/63862702.cms

✳ **The good work by government schools gets ignored**
*Times of India,* April 14, 2018.

https://timesofindia.indiatimes.com/city/bengaluru/ the- good - work - by - government - schools - gets - ignored/articleshow/ 63764801.cms

✳ **Teacher's zeal is key**
*Deccan Herald*. February 16, 2018.

https://www.deccanherald.com/content/659922/Teachers-zeal- key.html

✳ **Teachers at Uttarakhand model schools go the extra mile to bring quality education to children from poor families**
*Firstpost.* Feb 9,2018.

https:// www.firstpost.com/india/ teachers- at- uttarakhand-model- schools- go-the- extra- mile- to- bring- quality- education-to- children- from- poor- families-4343599.html

✳ **Ordinary women, extraordinary stories: These teachers in rural India's schools are real - life heroes**
*Firstpost.* Jan 11, 2018.

https:// www.firstpost.com/living/ ordinary-women-extraordinary-stories-these- teachers- in- rural-india's- schools-are- real- life- heroes-4290209.html

✳ **Internet and WhatsApp are revolutionising Uttarakhand's schools, giving teachers a forum for self-development**
*Firstpost.* November 26,2017.

https://www. firstpost.com/india/ internet- and- whatsapp-are-revolutionising- uttarakhand's- schools-giving-teachers-a-forum- for- self-development-4228733.html

✳ **Scraped knees and spirited minds: How an Uttarakhand girl's school defied odds to become kabaddi champion**
*Firstpost.* November 17, 2017.

https:// www.firstpost.com/india/ scraped- knees- and- spirited- minds- how- an- uttarakhand- girls- school- defied- odds- to- become- kabaddi- champion-4212803.html

✳ **Teacher education critical missing piece**
*Deccan Herald.* November 4,2017.

https://www.deccanherald.com/content/641124/ teacher- education- critical- missing- piece.html

✳ **In Uttarkashi schools, a poem inspires teachers to reflect on classroom interactions, make learning fun for students**
*Firstpost.* October 25,2017.

https:// www.firstpost.com/india/ in- uttarkashi- schools- a- poem- inspires- teachers- to- reflect- on- classroom- interactions- make- learning- fun- for- students-4173415.html

✳ **Support the village teacher**
*Deccan Herald.* September 5, 2017.

https://www.deccanherald.com/content/631622/ support- village- teacher. html

✳ **In Karnataka's Surpur, Government School Teachers Inspire Hope**
*The Wire.* May 18, 2017

https://thewire.in/education/karnataka-surpur-government- schools